ಡಾ|| ಎಂ. ಚಿದಾನಂದಮೂರ್ತಿ

# ಭಾಷಾ ವಿಜ್ಞಾನದ ಮೂಲ ತತ್ವಗಳು

ಡಿ. ವಿ. ಕೆ. ಮೂರ್ತಿ :: ಪ್ರಕಾಶಕರು :: ಮೈಸೂರು ೪

# ಭಾಷಾವಿಜ್ಞಾನದ ಮೂಲತತ್ತ್ವಗಳು

ಡಾ. ಎಂ. ಚಿದಾನಂದಮೂರ್ತಿ

ಡಿ. ವಿ. ಕೆ. ಮೂರ್ತಿ
ಕೃಷ್ಣಮೂರ್ತಿಪುರಂ :: ಮೈಸೂರು ೪

*BHĀṢĀVIJÑĀNADA MŪLATATVAGALU* ('Fundamentals of Linguistics') in Kannada by Dr. M. Chidananda Murthy. Fourth Edition ; 1993. Published by D.V.K. Murthy, Krishnamurthipuram, Mysore 4.

ಮೊದಲನೆಯ ಮುದ್ರಣ : 1965
ತಿದ್ದಿದ ಎರಡನೆಯ ಮುದ್ರಣ : 1971
ಮೂರನೆಯ ಮುದ್ರಣ : 1986
ನಾಲ್ಕನೆಯ ಮುದ್ರಣ : 1993



ಮುದ್ರಕರು : ಜಿ. ಎಚ್. ಕೃಷ್ಣಮೂರ್ತಿ
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು 570 001

# ಪರಿವಿಡಿ

# ಮೊದಲ ಮಾತು

ನನಗೆ ಭಾಷಾವಿಜ್ಞಾನದಲ್ಲಿ ಆಸಕ್ತಿಯನ್ನು ಹುಟ್ಟಿಸಿದ್ದು 1955ರ ಬೇಸಗೆಯಲ್ಲಿ ಪೂನೆಯಲ್ಲಿ ನಡೆದ 'ಭಾಷಾವಿಜ್ಞಾನದ ಬೇಸಗೆಯ ಶಾಲೆ.' ಅಲ್ಲಿ ಮತ್ತು ಮೈಸೂರು ಕೊಯಮತ್ತೂರುಗಳಲ್ಲಿ ನಡೆದ ಬೇಸಗೆಯ ಶಾಲೆಗಳಲ್ಲಿ ಭಾರತದ, ಅಮೆರಿಕದ ಮತ್ತು ಇಂಗ್ಲೆಂಡಿನ ಶ್ರೇಷ್ಠವಿದ್ವಾಂಸರು ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಕೊಟ್ಟ ಉಪನ್ಯಾಸಗಳನ್ನು ಕೇಳುವ ಸದವಕಾಶ ದೊರೆಯಿತು. ಕೊಯಮತ್ತೂರು ಶಾಲೆಯಲ್ಲಿ ಡಾ. ಎಂ. ಬಿ. ಎಮೆನೋ ಅವರು ದ್ರಾವಿಡ ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಉಪನ್ಯಾಸಗಳನ್ನು ಕೊಟ್ಟರು. ಅವುಗಳನ್ನು ನಾನು ಎಂದೂ ಮರೆಯಲಾರೆ. ಈ ಶಾಲೆಗಳಲ್ಲಿ ದೊರೆತ ಶಿಕ್ಷಣವನ್ನು ವೃದ್ಧಿಪಡಿಸಿಕೊಳ್ಳುವ ಅವಕಾಶಗಳು ಮುಂದೆ ಒದಗಿಬಂದವು. ಹೀಗೆ ನಾನು ಕಲಿತ ಭಾಷಾವಿಜ್ಞಾನದ ತಿರುಳನ್ನು ಕನ್ನಡದಲ್ಲಿ ಬರೆಯಲು ಪ್ರಯತ್ನಿಸಿದ್ದೇನೆ.

ಪ್ರೊ. ತೀ. ನಂ. ಶ್ರೀಕಂಠಯ್ಯನವರು ಪೂನೆಯ ಬೇಸಗೆಯ ಶಾಲೆಯಲ್ಲಿ ಧ್ವನಿವಿಜ್ಞಾನದ ಪ್ರಾಯೋಗಿಕ ತರಗತಿಗಳಲ್ಲಿ ಅದರ ಪರಿಚಯಮಾಡಿಕೊಟ್ಟರು. ಎರಡು ವರ್ಷಗಳ ಹಿಂದೆ ಅವರು ಕನ್ನಡದ ಪ್ರೌಢ ವಿದ್ಯಾರ್ಥಿಗಳಿಗೆ ಧ್ವನಿವಿಜ್ಞಾನದ ಮೇಲೆ ಹಲವು ಉಪನ್ಯಾಸಗಳನ್ನು ಕೊಟ್ಟರು. ಈ ಪುಸ್ತಕದ 'ಧ್ವನಿವಿಜ್ಞಾನ' ಎಂಬ ಅಧ್ಯಾಯದಲ್ಲಿ ಅವರು ಬಳಸಿದ ಅನೇಕ ಪಾರಿಭಾಷಿಕ ಪದಗಳ ಕನ್ನಡಾನುವಾದಗಳನ್ನು ಬಳಸಿಕೊಂಡಿದ್ದೇನೆ. ಹಾಗೆ ಬಳಸಿಕೊಳ್ಳಲು ಅವರು ಒಪ್ಪಿಗೆಯಿತ್ತಿರುವುದಕ್ಕಾಗಿ ಅವರಿಗೆ ನಾನು ಬಹುವಾಗಿ ಋಣಿಯಾಗಿದ್ದೇನೆ.

ಕನ್ನಡದಲ್ಲಿ ಸರಳವಾದ ಶೈಲಿಯಲ್ಲಿ ಭಾಷಾವಿಜ್ಞಾನದ ಮೇಲೆ ಒಂದು ಪುಸ್ತಕವನ್ನು ಬರೆಯಬೇಕೆಂಬ ಯೋಜನೆಯನ್ನು ಎರಡು ಮೂರು ವರ್ಷಗಳ ಹಿಂದೆ ಹಾಕಿಕೊಂಡೆ. ಆ ಯೋಜನೆ ಈಗ ಕಾರ್ಯಗತವಾಗಿದೆ. ಈ ಪುಸ್ತಕದಲ್ಲಿ ಪಾರಿಭಾಷಿಕ ಪದಗಳನ್ನು ಕಡಮೆ ಸಂಖ್ಯೆಯಲ್ಲಿ ಬಳಸಲು ಪ್ರಯತ್ನಿಸಿದ್ದೇನೆ. ಸಾಧ್ಯವಾದೆಡೆಗಳಲ್ಲಿ ಅವುಗಳಿಗೆ ವಿವರಣೆ ಕೊಟ್ಟಿದ್ದೇನೆ. ಉದಾಹರಣೆಗಳನ್ನು ಹೆಚ್ಚಾಗಿ ಕನ್ನಡದಿಂದ ಮತ್ತು ನಮಗೆ ಹೆಚ್ಚು ಪರಿಚಿತವಾಗಿರುವ ಇಂಗ್ಲಿಷಿನಿಂದ ಆರಿಸಿಕೊಂಡಿದ್ದೇನೆ. ಈ ಪುಸ್ತಕವನ್ನು ಬರೆಯುವಾಗ ಉದ್ದಕ್ಕೂ ನನ್ನ ಗಮನದಲ್ಲಿದ್ದವರು ವಿದ್ಯಾರ್ಥಿಗಳು ಮತ್ತು ಭಾಷಾವಿಜ್ಞಾನದ ಪರಿಚಯಮಾಡಿಕೊಳ್ಳಲು ಬಯಸುವ ವಿದ್ಯಾವಂತರು. ಇಂಗ್ಲಿಷಿನಲ್ಲಿರುವ ಗ್ರಂಥಗಳನ್ನು ಓದಿ ಭಾಷಾವಿಜ್ಞಾನದ ಪರಿಚಯಮಾಡಿಕೊಂಡಿರುವವರಿಗೆ ನನ್ನ ಪುಸ್ತಕದಿಂದ ಅಷ್ಟಾಗಿ ಪ್ರಯೋಜನವಾಗಲಾರದು. ಆದರೆ ಅದರ ವಿಷಯವಾಗಿ ಹೊಸದಾಗಿ ತಿಳಿಯಲಿಚ್ಛಿಸುವವರಿಗೆ ಇದೊಂದು ಪ್ರವೇಶಿಕೆ ಇದ್ದಂತೆ. ಇಂತಹ ಪ್ರಯತ್ನವು ಇದೇ ಮೊದಲನೆಯ

ದಾಗಿರುವುದರಿಂದ ನನ್ನ ಪುಸ್ತಕವು ಕನ್ನಡದ ಒಂದು ಕೊರತೆಯನ್ನು ಸ್ವಲ್ಪಮಟ್ಟಿಗೆ ಹೋಗಲಾಡಿಸುವುದೆಂದು ನಂಬಿರುತ್ತೇನೆ.

ಈ ಗ್ರಂಥದಲ್ಲಿ ಐತಿಹಾಸಿಕ ಭಾಷಾವಿಜ್ಞಾನಕ್ಕೆ ಹೆಚ್ಚು ಪ್ರಾಮುಖ್ಯ ಸಂದಿದೆ. ಒಂದು ಅಧ್ಯಾಯದಲ್ಲಿ ವಿವರಣಾತ್ಮಕ ಮತ್ತು ತೌಲನಿಕ ಭಾಷಾವಿಜ್ಞಾನಗಳ ಬಹು ಸ್ಥೂಲ ಪರಿಚಯವನ್ನು ಮಾತ್ರ ಮಾಡಿಕೊಟ್ಟಿದ್ದೇನೆ. ಅದರಲ್ಲೂ ವಿವರಣಾತ್ಮಕ ಭಾಷಾವಿಜ್ಞಾನದ ಚರ್ಚೆ ಏನೇನೂ ಸಾಲದು ಎಂಬ ಅಳುಕು ಇದೆ. ಆ ಶಾಖೆಯನ್ನು ಇನ್ನೂ ಸ್ವಲ್ಪ ವಿಸ್ತರಿಸಬಹುದಿತ್ತು. ವಿವರಣಾತ್ಮಕ ಭಾಷಾವಿಜ್ಞಾನದ ಚರ್ಚೆಯು ಹೆಚ್ಚು ಪಾರಿಭಾಷಿಕಾತ್ಮಕವಾಗುತ್ತದೆ ಎಂಬ ಭಯ ನನ್ನನ್ನು ಅಲ್ಲಿಗೇ ನಿಲ್ಲಿಸಿತು. ಇನ್ನೊಂದು, ಅಷ್ಟೊಂದು ಪ್ರಬಲವಲ್ಲದ ಕಾರಣ, ಅಂತಹ ಚರ್ಚೆಯಲ್ಲಿ ಅನಿವಾರ್ಯವಾಗಿ ಬಳಸಬೇಕಾಗಿ ಬರುವ ಕೆಲವು ವಿಶೇಷ ಅಕ್ಷರಗಳಿಗೆ ಅಚ್ಚಿನ ಮನೆಯಲ್ಲಿ ಮೊಳೆಗಳು ಇಲ್ಲದೇ ಇರುವುದು. ನ್ಯಾಯವಾಗಿ ವಿವರಣಾತ್ಮಕ ಭಾಷಾವಿಜ್ಞಾನದ ಮೇಲೆಯೇ ಪ್ರತ್ಯೇಕ ಗ್ರಂಥವೊಂದು ರಚಿತವಾಗಬೇಕು. ಆದರೂ ಒಟ್ಟಿನಲ್ಲಿ ಓದುಗರಿಗೆ ಆ ಎರಡು ಶಾಖೆಗಳ ಸ್ಥೂಲಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಿದ್ದೇನೆ.

ಧ್ವನಿವಿಜ್ಞಾನದ ಅಧ್ಯಾಯವನ್ನು ಬರೆಯುವಾಗ 'ಅಂತರರಾಷ್ಟ್ರೀಯ ಧ್ವನಿಲಿಪಿ'ಯ ಪಟವನ್ನು ಮುದ್ರಿಸಬೇಕೆಂಬ ಆಲೋಚನೆ ಇರಲಿಲ್ಲ. ಅದರಿಂದ ಅಲ್ಲಿ ಕೆಲವು ಚಿಹ್ನೆಗಳನ್ನು ವಿವರಿಸುವಾಗ ನಾನು ಬಳಸುದಾರಿ ಹಿಡಿದಿರುವುದನ್ನು ಓದುಗರು ಗುರುತಿಸಬಹುದು. ಪುಸ್ತಕವು ಅಚ್ಚಾದಮೇಲೆ ಆ ಪಟವನ್ನು ಮುದ್ರಿಸಬೇಕೆಂಬ ಆಲೋಚನೆ ಹೊಳೆಯಿತು. ಅದರ ಜೊತೆಗೆ ಧ್ವನ್ಯಂಗಗಳ ಚಿತ್ರವನ್ನು ಬಿಡಿ ಬಿಡಿ ಅಂಗಗಳ ಕನ್ನಡ ಹೆಸರುಗಳೊಡನೆ ಓದುಗರ ಸೌಕರ್ಯಕ್ಕಾಗಿ ಮತ್ತೆ ಅಚ್ಚು ಮಾಡಿದೆ.

ಈ ಪುಸ್ತಕದಲ್ಲಿ ನನ್ನದು ಎಂದು ಹೇಳಿಕೊಳ್ಳುವ ಹೊಸ ವಿಷಯವೇನೂ ಇಲ್ಲ. ಹಲವು ಇಂಗ್ಲಿಷ್ ಗ್ರಂಥಗಳನ್ನು ಲೇಖನಗಳನ್ನು ಓದಿ, ಹಲವು ಪ್ರಾಜ್ಞರ ಉಪನ್ಯಾಸಗಳನ್ನು ಕೇಳಿ ವಿಷಯಗಳನ್ನು ಸಂಗ್ರಹಿಸಿ ಕನ್ನಡದಲ್ಲಿ ಬರೆದಿದ್ದೇನೆ. ಆದ್ದರಿಂದ ಇಲ್ಲಿಯ ನನ್ನ ವಿಷಯ ನಿರೂಪಣೆಯಲ್ಲಿ ಏನಾದರೂ ಅಸಾಂಗತ್ಯವಿದ್ದರೆ, ತಪ್ಪುಗಳಿದ್ದರೆ, ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದರೆ ಅದಕ್ಕೆ ನಾನು ಹೊಣೆಯಲ್ಲ. ಆದರೆ ನಾನು ಓದಿದ ವಿಷಯಗಳನ್ನು ಸರಿಯಾಗಿ ಗ್ರಹಿಸಿ ಸರಿಯಾಗಿ ನಿರೂಪಿಸಿರದಿದ್ದರೆ ಅದು ಮಾತ್ರ ಅಕ್ಷಮ್ಯವಾಗುತ್ತದೆ. ನಾನು ಉಪಕಾರವನ್ನು ಪಡೆದಿರುವ ಗ್ರಂಥಗಳ ಪಟ್ಟಿಯನ್ನು ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದೇನೆ. ಅವುಗಳ ಗ್ರಂಥಕರ್ತರಿಗೂ ಬೇಸಗೆಯ ಶಾಲೆಗಳಲ್ಲಿ ಉಪನ್ಯಾಸಗಳನ್ನು ಕೊಟ್ಟ ಭಾಷಾವಿಜ್ಞಾನಿಗಳಿಗೂ ನಾನು ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಈ ಪುಸ್ತಕದಲ್ಲಿ ನನ್ನ ಸ್ವಂತತನವೇನೂ ಇಲ್ಲ ಎಂದು ಹೇಳಿದೆ. ಅದು ಪೂರ್ತಿ ನಿಜ. ಕನ್ನಡದಿಂದ ಉದಾಹರಣೆಗಳನ್ನು ಕೊಡುವಾಗ ನನ್ನ ಸ್ವಂತತನವೇನಾದರೂ ಸ್ವಲ್ಪ ಇದ್ದೀತು. ಆದರೆ 'ಲಂಬಾಣಿ ಭಾಷೆಯಲ್ಲಿ ಕನ್ನಡ ಸ್ವೀಕರಣಗಳು' ಎಂಬ ಭಾಗ ನನ್ನ ಸ್ವಂತ ಅಧ್ಯಯನದ ಫಲ. ಒಂದೂವರೆ ವರ್ಷಗಳ ಹಿಂದೆ ಲಂಬಾಣಿ ಅಥವಾ ಬಣಜಾರರ

ಭಾಷೆಯ ಅಧ್ಯಯನವನ್ನು ಕೈಗೊಂಡು ತಕ್ಕಮಟ್ಟಿಗೆ ವಿಷಯ ಸಂಗ್ರಹಿಸಿದೆ. ಆ ಭಾಷೆಗೆ ಸಂಬಂಧಿಸಿದ ವಿಸ್ತಾರವಾದ ಲೇಖನವು ಸಿದ್ಧವಾಗಿದೆ. ಆ ಲೇಖನದ ಒಂದು ಭಾಗವನ್ನು ಮಾತ್ರ ಇಲ್ಲಿ ಕೊಟ್ಟಿದ್ದೇನೆ.

ಈ ಗ್ರಂಥದ ಹಸ್ತಪ್ರತಿಯು ಬಹುಭಾಗ ಒಂದು ವರ್ಷದ ಹಿಂದೆಯೇ ಸಿದ್ಧವಾಗಿದ್ದಿತು. ಆಗಲೇ ಅದನ್ನು ಪ್ರಕಟಿಸಲು ಶ್ರೀ ಡಿ. ವಿ. ಕೆ. ಮೂರ್ತಿಯವರು ಒಪ್ಪಿಕೊಂಡಿದ್ದರು. ಹಸ್ತಪ್ರತಿ ಮುಗಿದೊಡನೆ ನೀವು ಹೇಳಿ ಎಂದು ಆಗಾಗ್ಗೆ ಕೇಳುತ್ತ ನನ್ನ ಉತ್ಸಾಹವು ಕುಂದದಂತೆ ನೋಡಿಕೊಂಡರು. ಈಗ ಅದನ್ನು ಸರ್ವಾಂಗಸುಂದರವಾಗಿ ಪ್ರಕಟಿಸಿದ್ದಾರೆ. ಅವರಿಗೆ ನಾನು ನನ್ನ ಕೃತಜ್ಞತೆಯನ್ನು ಸಲ್ಲಿಸುವುದು ಸಂತೋಷದ ಕೆಲಸವಾಗಿದೆ. ಇದರ ಮುದ್ರಣದ ವಿಷಯದಲ್ಲಿ ಮಿತ್ರರಾದ ಶ್ರೀ ಜಿ. ಎಚ್. ಕೃಷ್ಣಮೂರ್ತಿಯವರು ಆರಂಭದಿಂದಲೂ ವೈಯಕ್ತಿಕ ಆಸಕ್ತಿ ತೋರಿಸಿದರು. ನಾನು ಆಗಾಗ್ಗೆ ಅಳುಕುತ್ತಲೇ ಕೊಟ್ಟ ತೊಂದರೆಗಳನ್ನು ನಗುತ್ತ ಸಹಿಸಿಕೊಂಡು ಸಂಪೂರ್ಣವಾಗಿ ಸಹಕರಿಸಿದರು. ಅವರ ಶ್ರದ್ಧೆ, ಉತ್ಸಾಹ, ಕಾರ್ಯಾಸಕ್ತಿಗಳನ್ನು ನಾನು ಮರೆಯಲಾರೆ. ಅವರೂ ಅವರ ಮುದ್ರಣಾಲಯದ ಕೆಲಸಗಾರರೂ ಅತಿ ಶೀಘ್ರವಾಗಿ, ಬಹು ಅಚ್ಚುಕಟ್ಟಾಗಿ ಈ ಪುಸ್ತಕವನ್ನು ಮುದ್ರಿಸಿದ್ದಾರೆ. ಅವರಿಗೆ ನಾನು ತುಂಬುಹೃದಯದಿಂದ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಮೈಸೂರು
ಅಕ್ಟೋಬರ್ 1, 1965

**ಎಂ. ಚಿದಾನಂದಮೂರ್ತಿ**

## ತಿದ್ದಿದ ಎರಡನೆಯ ಮುದ್ರಣ

ಈ ಪುಸ್ತಕ ಎರಡನೆಯ ಮುದ್ರಣವನ್ನು ಕಾಣುತ್ತಿರುವುದು ನನಗೆ ಸಂತೋಷವನ್ನು ತಂದಿದೆ. ಈ ಪುಸ್ತಕವನ್ನು ಓದಿದ ಅನೇಕ ವಿದ್ಯಾರ್ಥಿಗಳು, ಮಿತ್ರರು, ಮತ್ತು ವಿದ್ವಾಂಸರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ. ಇನ್ನೊಂದು ಮುದ್ರಣದ ಅಗತ್ಯವಿಲ್ಲವೆಂದು ಭಾವಿಸಿದ್ದ ನಾನು, ಅದಕ್ಕೆ ಒಪ್ಪಿಗೆ ಕೊಟ್ಟಿದ್ದಕ್ಕೆ ಕಾರಣ ಅವರ ಪ್ರೋತ್ಸಾಹವೇ ಆಗಿದೆ.

ಈ ಪುಸ್ತಕವನ್ನು ಆಮೂಲಾಗ್ರವಾಗಿ ತಿದ್ದಿ ಬರೆಯುವ ಆಸೆಯಿದ್ದಿತು. ಏಕೆಂದರೆ ಈ ಪುಸ್ತಕದ ಕೊರತೆಗಳ ಅರಿವು ನನಗೆ ಪೂರ್ಣವಾಗಿ ಇದೆ. ಆದರೆ ಅಂತಹ ಪ್ರಯತ್ನಕ್ಕೆ ಕೈಹಾಕಿದರೆ, ಇನ್ನೊಂದು ಬೇರೆ ಪುಸ್ತಕವೂ ಆದೀತು ; ಸಾಕಷ್ಟು ಸಮಯವೂ ಬೇಕಾಗುತ್ತದೆ ; ಇದು ಇರುವಂತೆಯೇ, ಅಗತ್ಯವಾದೆಡೆಗಳಲ್ಲಿ ತಿದ್ದಿ ಏಕೆ ಪುನರ್ಮುದ್ರಿಸಬಾರದೆಂಬ ಶ್ರೀ ಡಿ. ವಿ. ಕೆ. ಮೂರ್ತಿಯವರ ಸೂಚನೆಯನ್ನು ನಾನು ಒಪ್ಪಿಕೊಂಡೆ. ಅವರೇ ಮತ್ತೆ ಈ ಆವೃತ್ತಿಯ ಹೊರೆಯನ್ನು ಹೊತ್ತಿದ್ದಾರೆ. ಅವರಿಗೆ ನಾನು ಕೃತಜ್ಞ.

ಡಾ. ಡಿ. ಎನ್. ಶಂಕರಭಟ್ಟರು ಪ್ರಬುದ್ಧಕರ್ಣಾಟಕದಲ್ಲಿ (49.2) ನನ್ನ ಪುಸ್ತಕವನ್ನು ವಿಮರ್ಶಿಸಿ, ಅನೇಕ ಕೊರತೆಗಳನ್ನು ತೋರಿಸಿಕೊಟ್ಟಿದ್ದಾರೆ. ನನ್ನ ಈ ಪುಸ್ತಕವನ್ನು ಅಲ್ಲಲ್ಲಿ ತಿದ್ದುವಾಗ, ಅವರ ಸೂಚನೆಗಳನ್ನು ಮುಖ್ಯವಾಗಿ ಗಮನದಲ್ಲಿರಿಸಿಕೊಂಡಿದ್ದೇನೆ.

ಇಷ್ಟಾದರೂ, ನನ್ನ ಪುಸ್ತಕದ ಕೆಲವು ಕೊರತೆಗಳ ಸಂಖ್ಯೆ ಕಡಮೆಯಾಯಿತೇ ಹೊರತು, ಪುಸ್ತಕ ಪೂರ್ಣವಾಗಿ ನಿರ್ದೋಷವಾಯಿತು ಎಂದು ನಾನು ಭಾವಿಸಿಲ್ಲ.

**ಎಂ. ಚಿದಾನಂದಮೂರ್ತಿ**

ಬೆಂಗಳೂರು
ಜನವರಿ 26, 1971

## ಮೂರನೆಯ ಮುದ್ರಣ

ಇದು ಯಾವುದೇ ವ್ಯತ್ಯಾಸಗಳೂ ಇಲ್ಲದೆ ಮೂರನೆಯ ಮುದ್ರಣವಾಗಿ ಪ್ರಕಟವಾಗುತ್ತಿದೆ. ಈ ಆವೃತ್ತಿಯನ್ನು ಹೊರತರುತ್ತಿರುವ ಶ್ರೀ ಡಿ. ವಿ. ಕೆ. ಮೂರ್ತಿಯವರಿಗೆ ನಾನು ಕೃತಜ್ಞ.

**ಎಂ. ಚಿದಾನಂದಮೂರ್ತಿ**

ಬೆಂಗಳೂರು
ಏಪ್ರಿಲ್ 10, 1986

## ನಾಲ್ಕನೆಯ ಮುದ್ರಣ

ಇದು ಯಾವುದೇ ವ್ಯತ್ಯಾಸಗಳೂ ಇಲ್ಲದೆ ನಾಲ್ಕನೆಯ ಮುದ್ರಣವಾಗಿ ಪ್ರಕಟವಾಗುತ್ತಿದೆ. ಈ ಆವೃತ್ತಿಯನ್ನು ಹೊರತರುತ್ತಿರುವ ಶ್ರೀ ಡಿ. ವಿ. ಕೆ. ಮೂರ್ತಿಯವರಿಗೆ ನಾನು ಕೃತಜ್ಞ.

**ಎಂ. ಚಿದಾನಂದಮೂರ್ತಿ**

ಬೆಂಗಳೂರು
ಜೂನ್ 30, 1993

# 1 ಭಾಷೆಯೆಂದರೇನು ?

ಶುಕ್ರಗ್ರಹನಿವಾಸಿಯೊಬ್ಬ ಭೂಮಿಗೆ ಇಳಿದುಬಂದು ಇಲ್ಲಿಯ ವಿದ್ಯಮಾನಗಳನ್ನು ತನ್ನವರಿಗೆ ವರದಿ ಮಾಡುತ್ತಾನೆಂದು ಭಾವಿಸೋಣ. ಅವನ ವರದಿಯಲ್ಲಿ ಒಂದು ಕಡೆ ಬಹುಶಃ ಹೀಗೆ ಬರೆದಿರುತ್ತದೆ—"ಭೂಮಿಯ ಮೇಲೆ ಓಡಾಡುವ ಪ್ರಾಣಿಗಳನ್ನು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು. ಕೆಲವು ಪ್ರಾಣಿಗಳು ನಾಲ್ಕು ಕಾಲುಗಳ ಮೇಲೆ ಓಡಾಡಿದರೆ, ಕೆಲವು ಪ್ರಾಣಿಗಳು ನಡೆಯಲು ಹಿಂದಿನ ಎರಡು ಕಾಲುಗಳನ್ನು ಮಾತ್ರ ಬಳಸಿಕೊಂಡು, ಮುಂದಿನ ಎರಡು ಕಾಲುಗಳನ್ನು ಬೇರೆ ಕೆಲಸಗಳಿಗಾಗಿ ಬಳಸಿಕೊಳ್ಳುತ್ತವೆ. ಈ ಎರಡನೆಯ ವರ್ಗದ ಪ್ರಾಣಿಗಳು ಭೂಮಿಯ ಮೇಲೆ ನಿಂತುಕೊಳ್ಳುವುದಲ್ಲದೆ ಮಾತನಾಡುವುದನ್ನೂ ಕಲಿತಿವೆ. ಈ ಮಾತನಾಡುವ ಶಕ್ತಿಯಿರುವುದರಿಂದಲೇ ಈ ಎರಡನೆಯ ವರ್ಗದ ಪ್ರಾಣಿಗಳು ಉಳಿದವರಿಗಿಂತ ಮುಂದುವರಿದಿವೆ" ಇತ್ಯಾದಿ. ಈ ಬುದ್ಧಿವಂತ ಪ್ರಾಣಿಗಳೇ ಮನುಷ್ಯರು. ಮನುಷ್ಯ ಮುಖ್ಯವಾಗಿ ಮಾತನಾಡುವ ಪ್ರಾಣಿ. ಉಳಿದ ಪ್ರಾಣಿಗಳಿಂದ ಮನುಷ್ಯನನ್ನು ಪ್ರತ್ಯೇಕಿಸುವ ಅಂಶಗಳಲ್ಲಿ ಭಾಷೆಯು ಪ್ರಧಾನವಾದುದು.

ಭಾಷೆಯ ಉಪಯೋಗ ಮನುಷ್ಯನಿಗೆ ಎಷ್ಟು ಆವಶ್ಯಕವೆಂದರೆ ಅದು ಅವನ ಸ್ವಭಾವವೆನ್ನುವಷ್ಟರಮಟ್ಟಿಗೆ ಅವನ ಬಾಳಿನಲ್ಲಿ ಬೆರೆತುಹೋಗಿದೆ. ಉಸಿರಾಡುವಿಕೆ, ನೋಡುವುದು, ದೇಹದ ರಕ್ತಚಲನೆ—ಇವು ಹೇಗೆ ನೈಸರ್ಗಿಕಕ್ರಿಯೆಗಳೋ ಅಷ್ಟೇ ನೈಸರ್ಗಿಕ ಕ್ರಿಯೆ ಮಾತನಾಡುವುದು ಎಂಬ ಭಾವನೆ ಬೆಳೆದುಬಂದಿರುತ್ತದೆ. ಆದರೆ ಇದು ತಪ್ಪು ಭಾವನೆ ಎಂಬುದನ್ನು ತೋರಿಸಲು ಹೆಚ್ಚು ಶ್ರಮಿಸಬೇಕಿಲ್ಲ. ಎರಡೇ ಎರಡು ಕಾರಣಗಳನ್ನು ಕೊಟ್ಟು ಭಾಷೆಯೆಂಬುದು ನೈಸರ್ಗಿಕ ಕ್ರಿಯೆಯಲ್ಲ, ಕಲಿತ ಕ್ರಿಯೆ ಎಂಬುದನ್ನು ಸಾಧಿಸಿ ತೋರಿಸಬಹುದು. ತೋಳಬಾಲಕ ರಾಮುವಿನ ಕಥೆಯನ್ನು ನಾವೆಲ್ಲರೂ ಬಲ್ಲೆವು. ಆ ಮಗು ಚಿಕ್ಕದಾಗಿರುವಾಗಲೇ ತೋಳಗಳು ಅಪಹರಿಸಿಕೊಂಡು ಹೋಗಿ ತಮ್ಮ ಗುಹೆಯಲ್ಲಿಟ್ಟು ಸಾಕಿದುವು. ಮುಂದೆ ಎಷ್ಟೋ ವರ್ಷಗಳಾದಮೇಲೆ ಅವನನ್ನು ಮನುಷ್ಯರು ಕರೆತಂದಾಗ ಅವನಿಗೆ ಭಾಷೆಯು ಬರುತ್ತಿರಲಿಲ್ಲವೆಂಬುದೂ, ಅವನ ಬುದ್ಧಿ

ಶಕ್ತಿ ವಿಕಾಸವಾಗದೇ ಇರುವುದೂ ಗೋಚರವಾಯಿತು. ಇದರಿಂದ ಒಂದು ಅಂ
ಸ್ಪಷ್ಟವಾಗುತ್ತದೆ. ಭಾಷೆಯೆನ್ನುವುದನ್ನು ಪ್ರತಿಯೊಂದು ಮಗುವೂ ಬಾಲ್ಯದಲ್ಲಿ ತ
ಪರಿಸರವನ್ನು ಪರಿಶೀಲಿಸಿ, ಇತರರನ್ನು ಅನುಕರಿಸಿ ಕಲಿಯಬೇಕಾಗುತ್ತದೆ. ಉ
ರಾಡುವುದನ್ನಾಗಲಿ ನೋಡುವುದನ್ನಾಗಲಿ ಮಗುವು ಇತರರಿಂದ ಕಲಿಯಬೇಕಾಗಿಲ್ಲ
ಅಲ್ಲದೆ, ಭಾಷೆಯನ್ನು ಕಲಿಯಲು ಮಗುವಿನ ಬುದ್ಧಿಶಕ್ತಿ ಬೆಳೆಯಬೇಕಾಗಿರುವಂತೆಯೆ
ಬುದ್ಧಿಶಕ್ತಿ ಬೆಳೆಯಲು ಭಾಷೆಯನ್ನು ಕಲಿಯಬೇಕಾಗುತ್ತದೆ. ಭಾಷೆ ಮತ್ತು ಬು
ಶಕ್ತಿ ಅಥವಾ ಆಲೋಚನೆಗಳೆರಡೂ ಪರಸ್ಪರಾವಲಂಬಿಗಳು ಎಂಬ ವಿಷಯವೂ ಮೇಲಿ
ನಿದರ್ಶನದಿಂದ ಹೊಳೆಯುತ್ತದೆ. ಭಾಷೆಯು ನೈಸರ್ಗಿಕಕ್ರಿಯೆಯಲ್ಲವೆಂಬುದನ
ತೋರಿಸಲು ಇನ್ನೊಂದು ಕಾರಣವನ್ನೂ ಕೊಡಬಹುದು. ಮನುಷ್ಯನ ದೇಹ
ಒಂದೊಂದು ಅಂಗಕ್ಕೂ ಮೂಲಭೂತ ಆವಶ್ಯಕತೆಯನ್ನು ಪೂರೈಸುವ ಒಂದೊಂದ
ಉದ್ದೇಶವಿದೆ. ನಾವು ಮಾತನಾಡಲು ಉಪಯೋಗಿಸುವ ಅಂಗಗಳನ್ನೇ ತೆಗೆದ
ಕೊಳ್ಳೋಣ. ಮೂಗಿನ ಮುಖ್ಯ ಉದ್ದೇಶ ಉಸಿರಾಟ. ತುಟಿಗಳ, ಹಲ್ಲುಗಳ
ನಾಲಗೆಯ ಮುಖ್ಯ ಉದ್ದೇಶ ಆಹಾರವನ್ನು ತೆಗೆದುಕೊಳ್ಳುವ ಕ್ರಿಯೆಗೆ ಸಂಬಂಧಿಸಿದ್ದು
ಈ ಅಂಗಗಳಲ್ಲಿ ಯಾವುದೂ ಮಾತನಾಡಲು ಸಹಾಯಕವಾಗುವ ಏಕೈಕ ಉದ್ದೇ
ದಿಂದ ಸೃಷ್ಟಿಯಾದುದಲ್ಲ. ಈ ಅಂಗಗಳನ್ನು ಮಾತನಾಡಲು ಬಳಸುತ್ತಿರುವುದ
ಮನುಷ್ಯನ ಬುದ್ಧಿಶಕ್ತಿಯ ಕುರುಹು ಅಷ್ಟೆ. ಭಾಷೆಯನ್ನು ಮೇಲೆ ಹೇಳಿದ ಅಂಗಗಳ
'ಉಪೋತ್ಪನ್ನ' (Byproduct) ಎಂದು ಬೇಕಾದರೆ ಕರೆಯಬಹುದು.

ಭಾಷಾವಿಜ್ಞಾನಿಗಳ ಪ್ರಕಾರ ಭಾಷೆಯೆಂದರೆ ಆಡುವ ಮಾತು. ಲಿಪಿ ಏನಿದ್ದರೂ
ಅದನ್ನು ಹಿಡಿದಿಡುವ ಒಂದು ಸಾಧನ ಮಾತ್ರ. ಈ ಸಣ್ಣ ವಿಷಯವನ್ನು ಅರಿಯಲ
ಅನೇಕ ಶತಮಾನಗಳು ಬೇಕಾದುವು. ಎಷ್ಟೋ ಜನರಿಗೆ ಲಿಪಿಬದ್ಧವಾದ ಭಾಷೆಯೇ
ನಿಜವಾದ ಭಾಷೆ, ಶಿಷ್ಟಭಾಷೆ ಎಂಬ ಭಾವನೆ ಇನ್ನೂ ಇದೆ. ಇದು ತಪ್ಪು ಭಾವನ
ಎಂಬುದನ್ನು ತೋರಿಸಿಕೊಡಲು ಹೆಚ್ಚು ದೂರ ಹೋಗಬೇಕಿಲ್ಲ. ಕನ್ನಡವನ್ನು ಯಾವ
ಲಿಪಿಯಲ್ಲಿ ಬರೆದರೇನು, ಭಾಷೆ ಮಾತ್ರ ಒಂದೇ. ತುರ್ಕಿ ಭಾಷೆಯನ್ನು ಬರೆಯಲ
ರೋಮನ್ ಲಿಪಿಯನ್ನು ಹೊಸದಾಗಿ ಬಳಸಿಕೊಂಡಾಗ ಹಿಂದಿನ ಅದೇ ಭಾಷೆ ಉಳಿದು
ಕೊಂಡು ಬಂದಿತು. ಅದನ್ನು ಬರೆಯುವ ವಿಧಾನವು ಮಾತ್ರ ಬೇರೆಯಾಯಿತು. ಇಂದಿಗೂ
ಬರಹವಿಲ್ಲದೆ ಕೇವಲ ಆಡುಮಾತಿನಲ್ಲಿ ಉಳಿದಿರುವ ಕ್ಷುಲ್ಲಕ ಭಾಷೆಗಳು (Unculti-
vated Languages) ಹಲವು ಇವೆ. ಉದಾಹರಣೆಗೆ—ತುಳು, ಕೊಡಗು, ತೊದವ
ಇತ್ಯಾದಿ. (ಆಡುವ ಮಾತಾಗಿದ್ದು ಬರಹವೂ ಇರುವ ಭಾಷೆಗಳನ್ನು ಸುಸಂಸ್ಕೃತ
ಭಾಷೆಗಳು ಅಥವಾ Cultivated Languages ಎಂದು ಕರೆಯುತ್ತಾರೆ.) ಭಾಷೆ
ಮತ್ತು ಲಿಪಿಗಳಲ್ಲಿ ಭಾಷೆಯೇ ಪ್ರಾಚೀನವಾದುದು, ಲಿಪಿ ಈಚಿನದು. ಯಾವ ಭಾಷೆ
ಲಿಪಿಬದ್ಧವಾಗಿಲ್ಲವೋ ಅದಕ್ಕೆ ಇತಿಹಾಸವಿದ್ದರೂ ತಿಳಿಯುವಂತಿಲ್ಲ, ಆ ಭಾಷೆಯನ್ನು
ಆಡುವ ಜನರ ಇತಿಹಾಸವನ್ನು ತಿಳಿಯಲು ಸಾಧನಗಳೂ ಇರುವುದಿಲ್ಲ. ಕನ್ನಡ, ತಮಿಳು,

ತೆಲುಗು ಮುಂತಾದ ಭಾಷೆಗಳು ಬಳಕೆಯಲ್ಲಿಯೂ ಇವೆ. ಅವುಗಳಿಗೆ ಲಿಪಿ ಇರುವುದರಿಂದ ಅವುಗಳ ಇತಿಹಾಸವನ್ನು ಚಿತ್ರಿಸಲು ಸಾಧ್ಯವಾಗಿದೆ. ಒಂದಾನೊಂದು ಕಾಲದಲ್ಲಿ ಜನರು ಆಡುವ ಭಾಷೆಗಳಾಗಿದ್ದು, ಕ್ರಮೇಣ ಬಳಕೆ ತಪ್ಪಿ ಕೇವಲ ಗ್ರಂಥಸ್ಥವಾಗಿರುವ ಭಾಷೆಗಳನ್ನು 'ಮೃತಭಾಷೆ'ಗಳೆಂದು **(Dead Languages)** ಕರೆಯುತ್ತಾರೆ. ಉದಾ : ಸಂಸ್ಕೃತ, ಲ್ಯಾಟಿನ್ ಇತ್ಯಾದಿ.

ಪ್ರತಿಯೊಬ್ಬನೂ ತನ್ನ ಬಾಲ್ಯದಲ್ಲಿ ಶ್ರಮಸಾಧ್ಯವಾದ ಪ್ರಯತ್ನದಿಂದ ಭಾಷೆಯನ್ನು ಕಲಿಯುತ್ತಾನೆ. ಭಾಷಾವಿಜ್ಞಾನಿಯೊಬ್ಬನು ಹೇಳುವ ಹಾಗೆ ಒಬ್ಬ ವ್ಯಕ್ತಿ ತನ್ನ ಜೀವನದಲ್ಲಿ ಮಾಡುವ ಮಹತ್ಕಾರ್ಯಗಳಲ್ಲಿ ಬಾಲ್ಯದಲ್ಲಿ ಭಾಷೆಯನ್ನು ಕಲಿಯುವುದೂ ಒಂದು. ಸೈಕಲ್ ಸವಾರಿಯನ್ನು ಕಲಿಯುವ ವ್ಯಕ್ತಿಯು ಲೀಲಾಜಾಲವಾಗಿ ಸೈಕಲ್ ಓಡಿಸುವ ಕೌಶಲವನ್ನು ಪಡೆದಿರುವಷ್ಟರಲ್ಲಿ ಎಷ್ಟು ಸಾರಿ ಬಿದ್ದಿರುವುದಿಲ್ಲ, ಎದ್ದಿರುವುದಿಲ್ಲ! ಮಗುವು ಭಾಷೆಯನ್ನು ಕಲಿಯುವಾಗಲೂ ಹೀಗೆಯೇ. ಅದು ಎಷ್ಟೋ ತಪ್ಪುಗಳನ್ನು ಮಾಡುತ್ತದೆ. ಹಿರಿಯರು ಮತ್ತೆ ಮತ್ತೆ ಅದನ್ನು ತಿದ್ದಬೇಕಾಗುತ್ತದೆ. ಬೊಂಬೆ ಎನ್ನುವ ಪದವನ್ನು ಕೇಳಿದಮೇಲೆ, ಆ ವಸ್ತುವು ತನಗೆ ಬೇಕಾದಾಗಲೆಲ್ಲ ಮಗು 'ಬ' 'ಬ' ಎನ್ನಬಹುದು. ಹೀಗೆ ಹೇಳಿದಾಗ ತನಗೆ ಬೊಂಬೆಯು ದೊರಕುವುದಿಲ್ಲವೆಂದು ತಿಳಿದು ಮಗುವು ಮನಸ್ಸಿಟ್ಟು 'ಬೊಂಬೆ' ಎಂಬ ಪದದ ಉಚ್ಚಾರಣೆಯನ್ನು ಸ್ಪಷ್ಟಗೊಳಿಸಿಕೊಳ್ಳುವವರೆಗೆ ಪ್ರಯತ್ನವನ್ನು ನಿರಂತರವಾಗಿ ಕೈಗೊಳ್ಳುತ್ತದೆ. ಮೊದಮೊದಲು 'ಅಪ್ಪ ಬಂದ', 'ಅಣ್ಣ ಬಂದ' ಮುಂತಾದ ಉಕ್ತಿಗಳನ್ನು ಕೇಳಿ, ಅವುಗಳ ಸಾಮ್ಯದ ಮೇಲೆ 'ಅಮ್ಮ ಬಂದ' ಎಂದಾಗ ಉಳಿದವರು ನಕ್ಕು ಹಾಸ್ಯಮಾಡಿಬಿಡುತ್ತಾರೆ. ಹಾಗೆ ಹಾಸ್ಯಕ್ಕೆ ಗುರಿಯಾಗುವುದನ್ನು ತಪ್ಪಿಸಿಕೊಳ್ಳಲು ಮಗು ಬಹು ಎಚ್ಚರವಾಗುತ್ತದೆ, ಪದಪ್ರಯೋಗಗಳ ವಿಷಯದಲ್ಲಿ. ಮಕ್ಕಳು ಸಾಮಾನ್ಯವಾಗಿ ಭಾಷೆಯನ್ನು ಅರ್ಥಮಾಡಿಕೊಳ್ಳುವುದನ್ನು ಮೊದಲು ಕಲಿಯುತ್ತಾರೆ. ಬಳಿಕ ಮಾತನಾಡುವುದನ್ನು ಕಲಿಯುತ್ತಾರೆ. ಇದಕ್ಕೆ ಒಂದು ನಿದರ್ಶನವನ್ನು ಗ್ರಂಥಕರ್ತನ ಸ್ವಾನುಭವದಿಂದ ಕೊಡಬಹುದು. ಐದು ವರ್ಷದ ಮಗು ತನ್ನ ಗೆಳತಿ ಉಷೆಯ ಹೆಸರನ್ನು ಸರಿಯಾಗಿ ಗ್ರಹಿಸಿದ್ದಿತು. ಹೆಸರು ಹೇಳುವಾಗ ಮಾತ್ರ 'ಉತ' ಎಂದೇ ಹೇಳುತ್ತಿದ್ದಿತು. ಯಾರಾದರೂ ಹಾಸ್ಯ ಮಾಡಲು 'ಉತ ಎಲ್ಲಿ' ಎಂದು ಕೇಳಿದರೆ, 'ಉತ ಅಲ್ಲ, ತಪ್ಪು. ಉತ ಅಂತ ಹೇಳು' ಎಂದು ಹೇಳುತ್ತಿದ್ದಿತು. ಭಾಷೆಯನ್ನು ನಾವು ಮೊದಲು ಅರಿಯುತ್ತೇವೆ, ನಂತರ ಒರೆಯುತ್ತೇವೆ, ಬಳಿಕ ಬರೆಯುತ್ತೇವೆ.

ಭಾಷೆಯ ಉಪಯೋಗಗಳು ಅನಂತ. ಭಾಷೆಯೆಂಬ ಬೆಳಕು ಜೀವನದ ಉದ್ದಕ್ಕೂ ಬೆಳಗದಿದ್ದರೆ ಲೋಕವೆಲ್ಲವೂ ಕತ್ತಲಿನಿಂದ ತುಂಬಿಹೋಗುತ್ತಿತ್ತು ಎಂದು ದಂಡಿ ಸೊಗಸಾಗಿ ಹೇಳಿದ್ದಾನೆ. ಋಗ್ವೇದದಲ್ಲಿ ವಾಗ್ದೇವತೆಯನ್ನು ಕುರಿತು ಪ್ರಾರ್ಥಿಸುವ ಹಲವು ಮಂತ್ರಗಳಿವೆ. ಅವಳು ಹಾಲು ಕೊಡುವ ಹಸುವಿನಂತೆ ; ತನ್ನವರಿಗೆ ಆಹಾರ, ಉತ್ಸಾಹ ಮತ್ತು ಸುಖಗಳನ್ನು ಕರುಣಿಸುತ್ತಾಳೆ. ದೇವತೆಗಳು ಅವಳನ್ನು ಸೃಷ್ಟಿಸಿದರು. ವಿವೇಕಿ

ಗಳು ಯಜ್ಞದ ಮೂಲಕ ಅವಳ ಹಾದಿಯನ್ನು ಕಂಡುಕೊಂಡು, ಅವಳು ಖುಂಪಿಗಳಲ್ಲಿ ವಾಸಿಸುತ್ತಿರುವುದನ್ನು ಗಮನಿಸಿದರು. ಈ ವಾಕ್ಯಗಳನ್ನು ಸರಿಯಾಗಿ ಮನನ ಮಾಡಿದರೆ ಭಾಷೆಯು ತಿರುಳು ಕೈವಶವಾಗುವುದರಲ್ಲಿ ಸಂದೇಹವಿಲ್ಲ. ಭಾಷೆಯಿಂದ ತಮಗಾಗಿರುವ ಮಹೋಪಕಾರದ ಕೃತಜ್ಞತೆ ಸಾಂಕೇತಿಕವಾಗಿ ಮೇಲಿನ ವಾಕ್ಯಗಳಲ್ಲಿ ಜಿನುಗಿರುವುದನ್ನು ಗಮನಿಸಬಹುದು. ಭಾಷೆಯಿಲ್ಲದಿದ್ದರೆ ಪ್ರಪಂಚದಲ್ಲಿ ಪರಸ್ಪರ ವ್ಯವಹಾರವು ಅಸಾಧ್ಯವಾಗುತ್ತಿದ್ದಿತು. ಭಾಷೆ ಮನುಷ್ಯನ ಮನಸ್ಸನ್ನು ಪ್ರಕಾಶಪಡಿಸುವ ಸಾಧನಗಳಲ್ಲಿ ಒಂದು ಮಾತ್ರವಲ್ಲ, ಆ ಸಾಧನಗಳಲ್ಲಿ ಅತ್ಯಂತ ಪ್ರಮುಖವಾದುದು. ಆಂಗಿಕವಾದ ಸಂಜ್ಞೆಗಳ (Gestures) ಮೂಲಕ ಕೆಲವು ವೇಳೆ ಮನಸ್ಸಿನ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದುಂಟು. ಮೂಕರಂತೂ ಇಂತಹ ನೂರಾರು ಸಂಜ್ಞೆಗಳನ್ನು ಕಲ್ಪಿಸುತ್ತಾರೆ. ಸಂಜ್ಞೆಗಳು ಏನಿದ್ದರೂ ಕೆಲವು ಅತ್ಯಂತ ಸರಳವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಬಲ್ಲುವೇ ಹೊರತು, ಜಟಿಲವಾದ ಭಾವಗಳನ್ನು ಇಷ್ಟಗಳನ್ನು ಅವು ವ್ಯಕ್ತಮಾಡಲು ಸಾಧ್ಯವೇ ಇಲ್ಲ. ಒಬ್ಬ ಮೂಕನಿಗೆ ಬಾಯಾರಿಕೆಯಾಗಿದೆಯೆಂದು ಭಾವಿಸೋಣ. ಅವನು ಕುಡಿಯುವಂತೆ ನಟಿಸಿದಾಗ ನಾವು ನೀರನ್ನು ಕೊಡಬಹುದು. ಆದರೆ ಅವನಿಗೆ ಸಕ್ಕರೆ ಹೆಚ್ಚಾಗಿರುವ, ಹಾಲು ಕಡಿಮೆಯಾಗಿರುವ ಕಾಫಿ ಬೇಕಾಗಿದ್ದರೆ ಅದನ್ನು ಹೇಳುವ ರೀತಿ ಹೇಗೆ ?—ಇಷ್ಟು ಸಣ್ಣ ವಿಷಯಗಳನ್ನು ಹೇಳಲು ಸಂಜ್ಞೆಗಳಿಗೆ ಶಕ್ತಿಯಿಲ್ಲವೆಂದ ಮೇಲೆ ಅವುಗಳ ಅಭಿವ್ಯಕ್ತಿಯ ಸಾಮರ್ಥ್ಯಕ್ಕೆ ಒಂದು ಮಿತಿಯಿದೆಯೆನ್ನುವುದು ಸ್ಪಷ್ಟ. ಆದರೂ ಎಷ್ಟೋ ಭಾಷೆಗಳಲ್ಲಿ ಧ್ವನಿಗಳಿಗಿಂತ ಸಂಜ್ಞೆಗಳೇ ಪ್ರಮುಖವಾಗಿರುತ್ತವೆ ಎಂದು ಹೇಳುತ್ತಾರೆ. ನಾಯಿ, ಕಾಗೆ ಮುಂತಾದ ಪ್ರಾಣಿಗಳ ಕೂಗುಗಳನ್ನು ಭಾಷೆಯೆಂದು ಕರೆಯಲು ಸಾಧ್ಯವಿಲ್ಲ. ಅವು ಬೇರೆ ಬೇರೆ ರೀತಿಯ ಧ್ವನಿಗಳಿಂದ ಬೇರೆ ಬೇರೆ ರೀತಿಯ ಚಿತ್ತಸ್ಥಿತಿಗಳನ್ನು ವ್ಯಕ್ತಪಡಿಸುವುದುಂಟು. ಉದಾಹರಣೆಗೆ ನಾಯಿಯು ತನ್ನ ನೋವನ್ನು, ಕೋಪವನ್ನು, ಒಂದು ರೀತಿಯ ವಿರಾಮ ಭಾವವನ್ನು ವ್ಯಕ್ತಪಡಿಸಲು ಬೇರೆ ಬೇರೆ ರೀತಿಗಳಲ್ಲಿ ಧ್ವನಿ ಮಾಡುತ್ತದೆ ಎಂಬುದನ್ನು ಗಮನಿಸಬಹುದು. ಈ ಧ್ವನಿಸಂಕೇತಗಳ ಸಂಖ್ಯೆ ಇಷ್ಟು ಪರಿಮಿತವಾದುದು. ಪ್ರಾಣಿಗಳ ಧ್ವನಿಸಂಕೇತಗಳು ಭಾಷೆಯೆಂದು ಕರೆಯಿಸಿಕೊಳ್ಳುವಷ್ಟು ವ್ಯಾಪಕವೂ, ಸಂಕೀರ್ಣವೂ, ಸಮರ್ಥವೂ ಆಗಿಲ್ಲವೆಂಬುದನ್ನು ಒತ್ತಿ ಹೇಳಬೇಕಿಲ್ಲ.

ಭಾಷೆಯೆಂದರೇನು ಎಂಬುದರ ವಿವರಣೆಗೆ ಬರುವ ಮುನ್ನ ಭಾಷೆಯ ಒಂದು ಪ್ರಧಾನ ಕಾರ್ಯವನ್ನು ಹೇಳುವ ಒಂದು ಸಣ್ಣ ಕಥೆಯನ್ನು ಇಲ್ಲಿ ನಿರೂಪಿಸಬಹುದು. ಈ ಕಥೆಯ ಕರ್ತೃ ಬ್ಲೂಮ್‌ಫೀಲ್ಡ್ ಎಂಬ ವಿದ್ವಾಂಸ. ಜಾಕ್ ಮತ್ತು ಜಿಲ್ ಎಂಬಿಬ್ಬರು ಒಂದು ರಸ್ತೆಯಲ್ಲಿ ಹೋಗುತ್ತಿರುವರೆಂದು ಭಾವಿಸೋಣ. ಜಿಲ್ಲಳಿಗೆ ಹಸಿವಾಗಿದೆ. ಅವಳ ಕಣ್ಣಿಗೆ ಒಂದು ಮರದ ಮೇಲಿರುವ ಸೇಬಿನ ಹಣ್ಣು ಕಾಣಿಸುತ್ತದೆ. ಆಗ ಅವಳ ತುಟಿ ನಾಲಗೆಗಳು ಅಲುಗುತ್ತವೆ, ಎಂದರೆ ಮಾತನಾಡುತ್ತಾಳೆ. ಜಾಕ್ ಮರವನ್ನು ಹತ್ತಿ ಹಣ್ಣನ್ನು ತಂದುಕೊಡುತ್ತಾನೆ. ಇದೊಂದು ದಿನನಿತ್ಯದ ಸಾಮಾನ್ಯ ಸನ್ನಿವೇಶ. ಹಸಿವು ಮತ್ತು

ಹಣ್ಣು ಕಣ್ಣಿಗೆ ಬಿದ್ದದ್ದು—ಇವು ಪ್ರಚೋದನೆ (S); ಹಣ್ಣಿನ ಕಡೆ ಹೋಗಿ ಅದನ್ನು ತಂದುಕೊಟ್ಟದ್ದು ಪ್ರತಿಕ್ರಿಯೆ (R).

ಜಿಲ್ ಒಬ್ಬಳೇ ಇದ್ದಿದ್ದರೆ, ಅವಳೇ ಹೋಗಿ ಹಣ್ಣನ್ನು ಕಿತ್ತುಕೊಳ್ಳಬೇಕಿದ್ದಿತು. ಏಕಾಂಗಿನಿಯಾದ ಜಿಲ್ಲಳು ಭಾಷೆಯ ಉಪಯೋಗ ಗೊತ್ತಿರದ ಪ್ರಾಣಿಗೆ ಸಮಾನ. ಅವರಿಬ್ಬರಲ್ಲಿಯೂ ಏಕರೀತಿಯ ಕ್ರಿಯೆ ನಡೆಯುತ್ತದೆ : S→R.

ಹಣ್ಣನ್ನು ಕಿತ್ತುಕೊಳ್ಳುವ ಶಕ್ತಿಯಿಲ್ಲದಿದ್ದರೆ ಅವರಿಬ್ಬರೂ ಹಸಿದಿರಬೇಕು. ಆದರೆ ಇಲ್ಲಿ ಜಿಲ್ ಜಾಕನೊಡನೆ ಮಾತನಾಡಿದ್ದರಿಂದ ಅವಳಿಗೆ ಸಾಧ್ಯವಾಗದ ಕೆಲಸಗಳನ್ನು ಜಾಕನು ಕೈಗೊಂಡು ನಿರ್ವಹಿಸಿದ. ಒಬ್ಬ ವ್ಯಕ್ತಿಯಲ್ಲಿ ಪ್ರಚೋದನೆ ಕಂಡುಬಂದಾಗ ಇನ್ನೊಬ್ಬ ವ್ಯಕ್ತಿಯು ಪ್ರತಿಕ್ರಿಯೆಯನ್ನು ಕೈಗೊಳ್ಳಲು ಭಾಷೆ ಸಹಾಯಮಾಡುತ್ತದೆ. ಎಂದರೆ ಶ್ರಮದ ಹಂಚಿಕೆ, ತನ್ಮೂಲಕ ಇಡೀ ಮಾನವಜನಾಂಗದ ಕೆಲಸ—ಇವೆಲ್ಲವೂ ಭಾಷೆಯ ಮೇಲೆ ನಿಂತಿವೆ.

ಮತ್ತೆ ನಾವು ಜಿಲ್ಲಳ ಬಳಿ ಬರೋಣ. ಜಿಲ್ ವ್ಯಾವಹಾರಿಕ ಪ್ರತಿಕ್ರಿಯೆಯನ್ನು ತೋರಿಸುವುದರ ಬದಲು, ಎಂದರೆ ತಾನೇ ಹೋಗಿ ಹಣ್ಣನ್ನು ತರುವುದರ ಬದಲು, ತುಟಿ ನಾಲಿಗೆಗಳನ್ನು ಅಲುಗಿಸಿ ಧ್ವನಿಗಳನ್ನು ಹೊರಡಿಸಿದಳು. ಎಂದರೆ ವ್ಯಾವಹಾರಿಕ ಪ್ರಚೋದನೆಗೆ ವ್ಯಾವಹಾರಿಕ ಪ್ರತಿಕ್ರಿಯೆ ಕಾಣಿಸಿಕೊಳ್ಳುವುದರ ಬದಲು, ಭಾಷಾತ್ಮಕ ಪ್ರತಿಕ್ರಿಯೆಯು ಕಾಣಿಸಿಕೊಂಡಿತು.

ಜಿಲ್ ಒಬ್ಬಳೇ ಇದ್ದಿದ್ದರೆ :—S→R

ಜಿಲ್ ಜಾಕನೊಡನೆ ಇದ್ದಾಗ : S→r (r=ಭಾಷಾತ್ಮಕ ಪ್ರತಿಕ್ರಿಯೆ.) ಇವಳ ಬಾಯಿಂದ ಹೊರಟ ಧ್ವನಿತರಂಗಗಳು ಜಾಕನ ಕಿವಿಯನ್ನು ಮುಟ್ಟಿದುವು. ಇವಳ ಭಾಷಾತ್ಮಕ ಪ್ರತಿಕ್ರಿಯೆಯು ಅವನಿಗೆ ಪ್ರಚೋದನೆಯಾಗಿ (s) ಪರಿಣಮಿಸಿ ಅವನಿಂದ ವ್ಯಾವಹಾರಿಕ ಪ್ರತಿಕ್ರಿಯೆಯನ್ನು ಮಾಡಿಸಿತು. ಅದನ್ನು ಹೀಗೆ ಗುರುತಿಸಬಹುದು :

S→r . . . . s→R.

ಭಾಷೆಯ ಉಪಯೋಗ ತಿಳಿದಿದ್ದುದರಿಂದ ತನ್ನ ಕೈಯಿಂದ ಸಾಧ್ಯವಾಗದ ಕೆಲಸವನ್ನು ಇನ್ನೊಬ್ಬನಿಂದ ಮಾಡಿಸಿಕೊಳ್ಳಲು ಸಾಧ್ಯವಾಯ್ತು. ಮಾತನಾಡುವ ವ್ಯಕ್ತಿ ಮತ್ತು ಕೇಳುವ ವ್ಯಕ್ತಿಗಳಿಬ್ಬರ ನರಮಂಡಲಗಳಿಗಿರುವ ಅಂತರವನ್ನು ಧ್ವನಿತರಂಗಗಳು ಕೂಡಿಸುತ್ತವೆ.

ವ್ಯಾವಹಾರಿಕ ಪ್ರಚೋದನೆ ಮತ್ತು ಪ್ರತಿಕ್ರಿಯೆಗಳು (S ಮತ್ತು R) ಭಿನ್ನ ವ್ಯಕ್ತಿಗಳಲ್ಲಿ ನಡೆಯುವಂತೆ ಮಾಡಲು ಭಾಷೆ (r...s) ಒಂದು ಸಾಧನ ಮಾತ್ರ. ಮನುಷ್ಯ ಸಾಮಾನ್ಯವಾಗಿ S ಮತ್ತು R ಗಳಲ್ಲಿ ಮಾತ್ರ ಆಸಕ್ತ. ಅವನಿಗೆ ಭಾಷೆಯಲ್ಲಿ ಇರುವ ಆಸಕ್ತಿ ಅಷ್ಟಕ್ಕಷ್ಟೆ. ಆದರೆ ಭಾಷಾವಿಜ್ಞಾನದ ವಿದ್ಯಾರ್ಥಿಗೆ ಆಸಕ್ತಿ ಇರುವುದೇ ಭಾಷೆಯ ಮೇಲೆ (r....s). ಭಾಷೆ ತನಗೆ ತಾನೇ ನಿರುಪಯುಕ್ತ ವಸ್ತು. ಆದರೆ ಬಹು ದೊಡ್ಡ ಕಾರ್ಯಗಳಿಗೆ ಪ್ರಮುಖ ಸಾಧನ.

ಭಾಷೆಯೆಂದರೇನು ಎಂಬುದನ್ನು ಸೂತ್ರಪ್ರಾಯವಾಗಿ ಹೇಳುವುದು ಕಷ್ಟವಾದರೂ ಅಂತಹ ಕೆಲವು ಪ್ರಯತ್ನಗಳು ನಡೆದಿವೆ. "ಆತ್ಮವಿರುವ (=ಮನಸ್ಸಿರುವ) ಯಾವುದೇ ಪ್ರಾಣಿಯ ಅನುಭವಗಳ ಅಭಿವ್ಯಕ್ತಿಯೇ ಭಾಷೆ" (-Eisler). ಈ ವಿವರಣೆಯು ಪ್ರಾಣಿಗಳ ಕೂಗುಗಳನ್ನೂ ಮನುಷ್ಯನ ಸಂಜ್ಞೆಗಳನ್ನೂ ಒಳಗೊಳ್ಳುವುದಲ್ಲದೆ ನರ್ತನ, ಸಂಗೀತ, ಶಿಲ್ಪ, ಚಿತ್ರ ಮುಂತಾದ ಕಲೆಗಳನ್ನೂ ಒಳಗೊಳ್ಳುತ್ತದೆ. ಏಕೆಂದರೆ ಕಲೆಗಳು ಮನುಷ್ಯನ ಅನುಭವದ ಅತ್ಯುತ್ತಮ ಅಭಿವ್ಯಕ್ತಿಗಳು. ಇದಕ್ಕಿಂತ ಸ್ವಲ್ಪ ವಾಸಿ ಮುಂದಿನ ಸೂತ್ರ— "ಒಂದು ಚಿತ್ತ ಸ್ಥಿತಿಯನ್ನು ವ್ಯಕ್ತಪಡಿಸಲು ಮಾಡುವ ಉದ್ದೇಶಪೂರ್ವಕ ಧ್ವನಿಗಳ ಉಚ್ಚಾರಣೆಯೇ ಭಾಷೆ" (—Marty). ಭಾಷೆ ನಮ್ಮ ಅಂತರಂಗವನ್ನು ಚಿತ್ತಸ್ಥಿತಿಯನ್ನು ಧ್ವನಿಗಳ ಮೂಲಕ ವ್ಯಕ್ತಪಡಿಸುವ ಒಂದು ಸಾಧನ ಎಂಬುದನ್ನು ಈ ಸೂತ್ರ ಸಂಗ್ರಹವಾಗಿ ಹೇಳಿದರೂ, ಯಾವ ಕ್ರಮವೂ ಇಲ್ಲದ ಉದ್ಗಾರಗಳ ಪಟ್ಟಿಗೂ ಭಾಷೆಗೂ ಯಾವ ವ್ಯತ್ಯಾಸವನ್ನೂ ತೋರುವುದಿಲ್ಲ. ಭಾಷೆ ಕೇವಲ ಧ್ವನಿಗಳ ಉಚ್ಚಾರ ಮಾತ್ರವಲ್ಲ, ಅದೊಂದು ವ್ಯವಸ್ಥೆಯೂ ಹೌದು. ಅಲ್ಲದೆ ಧ್ವನಿಗಳು ಚಿತ್ತಸ್ಥಿತಿಯನ್ನು ವ್ಯಕ್ತಪಡಿಸಿದರೆ ಮಾತ್ರ ಸಾಲದು. ಆ ಚಿತ್ತಸ್ಥಿತಿಯನ್ನು ಅರಿತುಕೊಳ್ಳುವ ವ್ಯಕ್ತಿಯೂ ವ್ಯಕ್ತಿಗಳೂ ಇರಬೇಕಾಗುತ್ತದೆ. ಭಾಷೆ ಪ್ರಧಾನವಾಗಿ ಸಾಮಾಜಿಕಕ್ರಿಯೆ. ಭಾಷೆಯನ್ನು ವಿವರಿಸುವ ಇನ್ನೂ ಕೆಲವು ಸೂತ್ರಗಳನ್ನು ಕೆಳಗೆ ಕೊಡಲಾಗಿದೆ—"ಭಾಷೆಯೆನ್ನುವುದು ಅಭಿಪ್ರಾಯಗಳ ಅಭಿವ್ಯಕ್ತಿಯ ಒಂದು ವಿಧಾನವಲ್ಲ, ಅದೊಂದು ರೀತಿಯ ಆಲೋಚನೆ : Stated or Formulated Thinking. ಭಾಷೆಯೆನ್ನುವುದು ಒಂದು ಸಾಧನ, ಮನುಷ್ಯರಿಗೆ ವಿಶಿಷ್ಟವಾಗಿರುವ ಆಲೋಚನೆಯ ಒಂದು ಸಾಧನ ಅಥವಾ ಅಂಗ." (—Erdmann) ಈ ವಿವರಣೆಯು ಭಾಷೆ ಮತ್ತು ಆಲೋಚನೆಗಳಿಗಿರುವ ಸಂಬಂಧವನ್ನು ಕುರಿತ ಅನೇಕ ಸಮಸ್ಯೆಗಳನ್ನು ಎತ್ತುತ್ತದೆ. "ಯಾವಾಗ ಬೇಕಾದರೂ ಸ್ವಪ್ರೇರಿತವಾಗಿ ಉಚ್ಚರಿಸಬಹುದಾದ ಸಾಂಪ್ರದಾಯಿಕ ಸಂಕೇತಗಳ ವ್ಯವಸ್ಥೆಯೇ ಭಾಷೆ." (—Ebbinghaus). ಭಾಷೆಯ ಧ್ವನಿಸಂಕೇತಗಳನ್ನು ಸಂಪ್ರದಾಯವು ಒಪ್ಪಿಕೊಂಡಿರುವುದರಿಂದ ಅವುಗಳಿಗೆ ಅರ್ಥವೆಂಬುದು ಬರುತ್ತದೆ ಮತ್ತು ಭಾಷೆಯೆಂಬುದು ಒಂದು ವ್ಯವಸ್ಥೆ ಎಂಬ ಅಂಶಗಳ ಕಡೆ ನಮ್ಮ ಗಮನವನ್ನು ಸೆಳೆಯುತ್ತದೆ. "ಭಾಷೆಯೆಂಬುದು ಅಭಿಪ್ರಾಯಗಳನ್ನು ವ್ಯಕ್ತಗೊಳಿಸುವ ಸಂಕೇತಗಳ ಒಂದು ವ್ಯವಸ್ಥೆ" (—De Saussure). "ಸ್ವಪ್ರೇರಿತವಾಗಿ ಉಚ್ಚರಿಸಿದ ಸಂಕೇತಗಳ ಒಂದು ವ್ಯವಸ್ಥೆಯ ಮೂಲಕ ಅಭಿಪ್ರಾಯಗಳನ್ನು, ಭಾವಗಳನ್ನು, ಇಷ್ಟಗಳನ್ನು ಪ್ರದಾನ ಮಾಡಲು ಇರುವ, ಮನುಷ್ಯನಿಗೆ ವಿಶಿಷ್ಟವಾದ, ಅವನ ಸ್ವಭಾವಸಿದ್ಧವಲ್ಲದ ರೀತಿಯೇ ಭಾಷೆ" (—Sapir).

ಈ ಮೇಲಿನ ವಿದ್ವಾಂಸರ ವಿವರಣೆಗಳಲ್ಲಿ ಒಂದೊಂದೂ ಒಂದು ರೀತಿಯಲ್ಲಿ ಸರಿ ಮತ್ತು ಅಸಮರ್ಪಕ. ಅಲ್ಲದೆ ಅವರ ಉಳಿದ ವಾಕ್ಯಗಳಿಂದ ಮೇಲಿನ ವಾಕ್ಯಗಳನ್ನು ಪ್ರತ್ಯೇಕಿಸಿ ವಿಮರ್ಶಿಸುವುದು ಅವರಿಗೆ ಅನ್ಯಾಯವನ್ನು ಮಾಡಿದಂತೆ. ಏಕೆಂದರೆ ಅವರು

ಆ ವಾಕ್ಯಗಳಲ್ಲಿ ಹೇಳದೆ ಬಿಟ್ಟಿರುವ ಅಂಶಗಳನ್ನು ಉಳಿದ ವಾಕ್ಯಗಳಲ್ಲಿ ವಿವರಿಸಿರುವುದುಂಟು. ಆದ್ದರಿಂದ ಅವರು ಭಾಷೆಯ ತಿರುಳನ್ನು ಸರಿಯಾಗಿ ಗ್ರಹಿಸಿಲ್ಲವೆಂದು ಭಾವಿಸಿದರೆ ತಪ್ಪಾಗುತ್ತದೆ. ಒಂದು ವಿಷಯವಂತೂ ಸ್ಪಷ್ಟ—ಭಾಷೆಯೆಂದರೇನೆಂಬುದನ್ನು ಸೂತ್ರಪ್ರಾಯವಾಗಿ ಹೇಳುವುದು ಕಷ್ಟ. (ಯಾವುದನ್ನು ತಾನೇ ಹಾಗೆ ಹೇಳಲು ಸಾಧ್ಯ ?) ಆದರೂ ಸ್ಟರ್ಟೆವಾಂಟ್, ಬ್ಲಾಕ್ ಮತ್ತು ಟ್ರೇಗರ್ ಮುಂತಾದ ವಿದ್ವಾಂಸರ ಒಂದು ಸೂತ್ರವು ಬಹುಜನರ ಮೆಚ್ಚುಗೆಯನ್ನು ಪಡೆದಿರುವುದಲ್ಲದೆ ಉಳಿದ ಸೂತ್ರಗಳಿಗಿಂತ ಹೆಚ್ಚು ಸಮರ್ಪಕವಾಗಿದೆ. "ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚ್ಛಿಕ ಧ್ವನಿಸಂಕೇತಗಳ ವ್ಯವಸ್ಥೆಯೇ ಭಾಷೆ."[1] ಇಲ್ಲಿಯ ಒಂದೊಂದು ಪದವೂ ವಿಚಾರಯೋಗ್ಯವಾದುದು. ಭಾಷೆಯೆನ್ನುವುದು ಒಂದು ವ್ಯವಸ್ಥೆ. ಒಂದು ದೃಷ್ಟಿಯಿಂದ ಹೇಳುವುದಾದರೆ ಅದು ಧರ್ಮ, ಕಾನೂನು ಮುಂತಾದ ವ್ಯವಸ್ಥೆಗಳಿಂದ ಬೇರೆಯೇನೂ ಅಲ್ಲ. ಒಂದು ಸಮಾಜದ ಧರ್ಮ, ಅಥವಾ ಕಾನೂನುಗಳನ್ನು ಪ್ರತ್ಯೇಕವಾಗಿ ಎಲ್ಲಿಯೂ ಕಾಣಲಾರೆವು. ಜನರ ನಡತೆಯಿಂದ ಅವುಗಳನ್ನು ಊಹಿಸಬೇಕಾಗುತ್ತದೆ. ಹಾಗೆಯೇ ಭಾಷೆಯನ್ನು ಕೂಡ. ಒಂದು ಸಮಾಜವು ಅನುಸರಿಸುತ್ತಿರುವ ನಿಯಮಗಳನ್ನು ಕ್ರಮಬದ್ಧವಾಗಿ ವಿವರಿಸುವುದೇ ಆ ಸಮಾಜದ ಕಾನೂನುಗಳು. ಹಾಗೆಯೇ, ಒಂದು ಜನಾಂಗವು ಬೇರೆ ಬೇರೆ ಸನ್ನಿವೇಶಗಳಲ್ಲಿ ಬಳಸುವ ಪದಗಳು, ವಾಕ್ಯಗಳು, ಇವುಗಳ ರಚನೆ ಇತ್ಯಾದಿಗಳನ್ನು ಕ್ರಮಬದ್ಧವಾಗಿ ವಿವರಿಸುವುದೇ ಆ ಭಾಷೆಯ ವ್ಯಾಕರಣವೆನ್ನಿಸಿಕೊಳ್ಳುತ್ತದೆ. ಸಮಾಜದಿಂದ ಸಮಾಜಕ್ಕೆ ಧರ್ಮದ ವಿಷಯದಲ್ಲಿ ಭಾವನೆಗಳು, ನಿಯಮಗಳು, ನಡತೆಯ ವಿಧಾನಗಳು ಹೇಗೆ ವ್ಯತ್ಯಾಸಗೊಳ್ಳುತ್ತಾ ಹೋಗುತ್ತವೆಯೋ ಹಾಗೆಯೇ ಭಾಷೆಯೂ ಕೂಡ ವ್ಯತ್ಯಾಸಗೊಳ್ಳುತ್ತಾ ಹೋಗಬಹುದು.

ಭಾಷೆಯೆನ್ನುವುದು ಧ್ವನಿಸಂಕೇತಗಳ ವ್ಯವಸ್ಥೆ. ಪ್ರಪಂಚದಲ್ಲಿ ನಾವು ನಮ್ಮ ಇಂಗಿತಗಳನ್ನು ತಿಳಿಸಲು ಕೆಲವು ಸ್ಥೂಲವಾದ ವಸ್ತುಗಳನ್ನು ಬಳಸುತ್ತೇವೆ. ಇವೇ ಸಂಕೇತಗಳು. ಉದಾಹರಣೆಗೆ ಕೆಂಪು ಬಣ್ಣವನ್ನು ಅಪಾಯವನ್ನು ಸೂಚಿಸುವುದಕ್ಕೆ ಬಳಸುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಕೆಂಪು ಬಣ್ಣವು ಅಪಾಯದ ಸಂಕೇತವೆಂದು ನಾವು ಒಪ್ಪಿಕೊಂಡಿದ್ದೇವೆ. ಕೈ ಮುಗಿಯುವುದು ಗೌರವದ ಸಂಕೇತವೆಂದು ನಾವು ಒಪ್ಪಿ ಆಚರಿಸುತ್ತಿದ್ದೇವೆ. ಅದು ಬರಿಯ ಸಂಕೇತ ಮಾತ್ರ. ಗೌರವಭಾವಕ್ಕೂ ಆ ಕ್ರಿಯೆಗೂ ನೇರವಾದ ಸಂಬಂಧವಿಲ್ಲ. ಬೇರೆ ಬೇರೆ ದೇಶದ ಜನಾಂಗಗಳು ಗೌರವವನ್ನು ಸೂಚಿಸಲು ಬೇರೆಬೇರೆ ರೀತಿಯ ಸಂಕೇತಗಳನ್ನು ಬಳಸಬಹುದು. ಹಾಗೆಯೇ ನಾವು ಭಾಷೆಯಲ್ಲಿ ಬಳಸುವ

---

1 'Language is a system of arbitrary vocal symbols by which members of a society act and react.'—STURTEVANT

'Language is a system of arbitrary vocal symbols by means of which a social group co-operates.'—BLOCH AND TRAGER.

ಪದಗಳು ಬೇರೆ ಬೇರೆ ವಸ್ತುಗಳ 'ಸಂಕೇತ'ಗಳು. 'ನೆಲ' ಎನ್ನುವ ಪದಕ್ಕೂ ಆ ಪದವು ಸೂಚಿಸುವ ವಸ್ತುವಿಗೂ ಸಹಜ ಸಂಬಂಧವಿಲ್ಲ. ಆ ಪದಕ್ಕೂ ವಸ್ತುವಿಗೂ ಸಂಬಂಧ ಕಲ್ಪನೆ ಹೇಗಾಯಿತೆಂದು ಪ್ರಶ್ನಿಸಿದರೆ, ಅದಕ್ಕೆ ರೂಢಿಯೇ ಕಾರಣವೆಂದು ಹೇಳಬೇಕಾಗುತ್ತದೆ. ಅಲ್ಲದೆ ಒಂದು ಭಾಷೆಯಲ್ಲಿನ ಅನೇಕ ಪದಗಳಿಗೆ ಕಾಲಕ್ರಮೇಣ ಅರ್ಥವು ಮಾರ್ಪಡುವ ವಿಷಯವೇ ಹೇಳುತ್ತದೆ—ಒಂದು ಪದಕ್ಕೆ ಒಂದು ಅರ್ಥವನ್ನು ರೂಢಿಯು ನಿರ್ಣಯಿಸುತ್ತದೆ ಎಂಬುದನ್ನು. n-e-l-a ಎಂಬ ನಾಲ್ಕು ಧ್ವನಿಗಳ ಮೊತ್ತಕ್ಕೆ ಕನ್ನಡಿಗರು ಒಂದು ಬೆಲೆಯನ್ನು ಕೊಟ್ಟಿರುವುದರಿಂದ ಅದೊಂದು 'ಧ್ವನಿಸಂಕೇತ'. n-e-m-a ಎಂಬ ನಾಲ್ಕು ಧ್ವನಿಗಳ ಮೊತ್ತಕ್ಕೆ, ಎಂದರೆ 'ನೆಮ'ಕ್ಕೆ, ಕನ್ನಡಿಗರು ಬೆಲೆಯನ್ನು ಕೊಟ್ಟಿರುವುದಿಲ್ಲವಾದುದರಿಂದ ಅದು ಕನ್ನಡದಲ್ಲಿ ಧ್ವನಿಸಂಕೇತವಲ್ಲ ; ಪ್ರಪಂಚದ ಇನ್ನಾವುದೋ ಭಾಷೆಯಲ್ಲಿ ಅದು ಧ್ವನಿಸಂಕೇತವಾಗಿರಬಹುದು. ಭಾಷೆಯು ಕೇವಲ ಸಂಕೇತಗಳ ಮೊತ್ತ ಎಂದು ಹೇಳಿಬಿಟ್ಟಿದ್ದರೆ ಅದನ್ನು ಆಂಗಿಕಸಂಜ್ಞೆಗಳಂತಹ (Gestures) ಹಲವಾರು ಸಂಕೇತಗಳಿಂದ ಪ್ರತ್ಯೇಕಿಸಲು ಸಾಧ್ಯವಿರುತ್ತಿರಲಿಲ್ಲ. ಇಲ್ಲಿಯೂ ಒಂದನ್ನು ಗಮನಿಸಬಹುದು. ಸೈರನ್‌ಗಳ ಕೂಗು, ಗಂಟೆಯ ನಾದ, ಸಿಳ್ಳುಗಳು, ಡ್ರಮ್ಮುಗಳ ವಾದನ (Drum Beats) ಇವು ಶ್ರವಣ ಸಂಕೇತಗಳೇ ಹೊರತು, ಉಚ್ಚಾರಣಾತ್ಮಕ ಸಂಕೇತಗಳಲ್ಲ (Vocal Symbols. ಈ ಉಕ್ತಿಯನ್ನು ನಾವು ಮೇಲೆ ಧ್ವನಿಸಂಕೇತಗಳೆಂದು ಅನುವಾದಿಸಿದ್ದೇವೆ.)

ಈ ಧ್ವನಿಸಂಕೇತಗಳು ಯಾದೃಚ್ಛಿಕವಾದುವು. ಯಾದೃಚ್ಛಿಕ ಎಂದರೆ ಇಚ್ಛೆಯನ್ನವಲಂಬಿಸಿರುವುದು ಎಂದರ್ಥ. ಒಂದು ಶಬ್ದಕ್ಕೂ ಒಂದು ಅರ್ಥಕ್ಕೂ ಮೂಲಭೂತವಾದ ಸಂಬಂಧವೇನೂ ಇಲ್ಲವೆಂಬುದನ್ನು ಹಿಂದೆಯೇ ನೋಡಿದ್ದೇವೆ. ನಿಜ, ಕೆಲವು ಅನುಕರಣ ಶಬ್ದಗಳಲ್ಲಿ—ಉದಾಹರಣೆಗೆ ಕಾಗೆ, ಕೋಳಿ, ಗುಂಗೆ—ಶಬ್ದಕ್ಕೂ ಅರ್ಥಕ್ಕೂ ಸಂಬಂಧವಿರುವಂತೆ ಕಂಡುಬಂದರೂ, ಅಂತಹ ಪದಗಳು ಒಂದು ಭಾಷೆಯಲ್ಲಿ ಅತ್ಯಲ್ಪ. ಒಂದು ಪ್ರಾಣಿಯ ಕೂಗನ್ನು ಅನುಕರಿಸುವ ಶಬ್ದಗಳೇ ಭಾಷೆಯಿಂದ ಭಾಷೆಗೆ ವ್ಯತ್ಯಾಸವಾಗಬಹುದು. ಉದಾಹರಣೆಗೆ ಇಂಗ್ಲಿಷಿನವನು ನಾಯಿಯು ಬೊಗಳುವುದನ್ನು ಬೌವೌ ಎಂದು ಅನುಕರಿಸಿದರೆ, ಫ್ರೆಂಚನು ಗ್ನಫ್—ಗ್ನಫ್ ಎಂದೂ, ಜಪಾನಿಯವನು ವನ್—ವನ್ ಎಂದೂ ಅನುಕರಿಸಬಹುದು. ಇಂತಹ ಅನುಕರಣ ಶಬ್ದಗಳಲ್ಲೇ ಇಷ್ಟೊಂದು ಭಿನ್ನತೆ ಕಂಡುಬರುವಾಗ, ಶಬ್ದಕ್ಕೂ ಅರ್ಥಕ್ಕೂ ಸಂಬಂಧವೇ ಕಂಡುಬರದ ಪದಗಳಲ್ಲಿ ಇನ್ನೆಷ್ಟು ಭಿನ್ನತೆ ಕಂಡುಬರಬೇಡ ? ಆದ್ದರಿಂದ ಪದಕ್ಕೂ ಅರ್ಥಕ್ಕೂ ಇರುವ ಸಂಬಂಧ ಬಹುಮಟ್ಟಿಗೆ ರೂಢಿಯನ್ನವಲಂಬಿಸಿದೆ.

ಪದಗಳೆಲ್ಲವೂ ಬಹುಮಟ್ಟಿಗೆ ಯಾದೃಚ್ಛಿಕವಾದುವು ಎಂದು ಆಧುನಿಕ ಭಾಷಾವಿಜ್ಞಾನಿಗಳು ನಂಬಿರುವುದರಿಂದ, ಅವರು ಭಾಷೆಯಲ್ಲಿ ನಡೆಯುವ ವ್ಯತ್ಯಾಸಗಳನ್ನು ತಡೆಯುವ ಗೋಜಿಗೇ ಹೋಗುವುದಿಲ್ಲ. ಅವರು ಭಾಷೆಯನ್ನು ಅದು ಇರುವಂತೆಯೇ ವಿವರಿಸುವರೇ ಹೊರತು, ಅದಕ್ಕೆ ನಿಯಮಗಳನ್ನು ಹಾಕುವ ಪ್ರಯತ್ನವನ್ನೇ ಮಾಡುವು

ದಿಲ್ಲ. ಆವರ ವ್ಯಾಕರಣಗಳು ಬಹುಮಟ್ಟಿಗೆ Descriptive ಆಗಿರುತ್ತವೆಯೇ ಹೊರತು, Prescriptive ಆಗಿರುವುದಿಲ್ಲ. ಪದಗಳು ಯಾದೃಚ್ಛಿಕವಾದುವು ಎಂಬ ಸಾಮಾನ್ಯ ಅಂಶವನ್ನರಿಯದ ಪ್ರಾಚೀನ ವೈಯಾಕರಣರೆಲ್ಲರೂ ಭಾಷೆಗಳಿಗೆ ನಿಯಮಂಗಳನ್ನು ಹಾಕಲು ಹೊರಟು ಹೇಗೆ ವಿಫಲರಾದರು ಎನ್ನುವುದು ಪ್ರಸಿದ್ಧ ಸಂಗತಿಯೇ.

ಭಾಷೆಯಲ್ಲಿ ವಸ್ತುವಿಗೂ ಪದಕ್ಕೂ ಹೇಗೆ ಸಂಬಂಧಕಲ್ಪನೆಯಾಗಿರಬಹುದೆಂಬುದರ ಒಂದು ಸೂಚನೆಯನ್ನು ಇಲ್ಲಿ ಕೊಡಬಹುದು. (ಏಕೆಂದರೆ ಈ ಪ್ರಶ್ನೆಯ ಸಮರ್ಪಕವಾದ ಚರ್ಚೆ ಸದ್ಯದಲ್ಲಿ ಸಾಧ್ಯವಿಲ್ಲದ ಮಾತು.) ಪದಗಳು ಪ್ರತ್ಯೇಕ ವಸ್ತುಗಳನ್ನು ಸೂಚಿಸುತ್ತವೆಯೇ, ವರ್ಗಗಳನ್ನು ಸೂಚಿಸುತ್ತವೆಯೇ ? ಎಂಬ ಸಮಸ್ಯೆಯ ಚರ್ಚೆಯನ್ನು ಇಲ್ಲಿಯೇ ಮಾಡಬಹುದು. ಒಂದೊಂದು ವಸ್ತುವಿಗೂ ಒಂದೊಂದು ಪದವನ್ನು ಹಂಚುವ ಹೆಸರಿಸುವ ಮೊದಲು, ಇಂದ್ರಿಯಗೋಚರ ಜಗತ್ತನ್ನು ಸರಳಗೊಳಿಸಿ ಅದನ್ನು ಬೇರೆ ಬೇರೆ ವಿಭಾಗಗಳಾಗಿ ವಿಂಗಡಿಸಿ ಆ ಒಂದೊಂದು ವಿಭಾಗಕ್ಕೂ ಒಂದೊಂದು ಹೆಸರನ್ನು ಕೊಡಬೇಕಾಗುತ್ತದೆ. ಪ್ರಾಚೀನ ಮಾನವನು ಬಹುಶಃ ಪ್ರತ್ಯೇಕವಾದ ಒಂದೊಂದು ವಸ್ತುವಿಗೂ ಪ್ರತ್ಯೇಕ ಹೆಸರನ್ನು ಕೊಟ್ಟು, ಬಳಿಕ ಆ ವಸ್ತುಗಳ ವರ್ಗಕ್ಕೆ ಹೆಸರು ಕೊಟ್ಟಿರಬೇಕು. ಉದಾಹರಣೆಗೆ ಬೇವು, ಮಾವು, ಹಲಸು, ನಿಂಬೆ ಮುಂತಾದ ಹೆಸರುಗಳು ಮೊದಲು ಬಂದು, 'ಮರ' ಎನ್ನುವ ಕಲ್ಪನೆ ಆಮೇಲೆ ಬಂದಿರಬೇಕು. ಆ ಬೇರೆ ಬೇರೆ ವಸ್ತುಗಳ ಸಾಮಾನ್ಯ ಗುಣವನ್ನು ತೋರಿಸುವುದೇ 'ಮರ' ಎಂಬ ಪದ. ಇದನ್ನು ಪೋಷಿಸುವಂತೆ ಈಗಲೂ ಅನೇಕ ಭಾಷೆಗಳಲ್ಲಿ ಬೇರೆ ಬೇರೆ ಮರಗಳನ್ನು ಹೇಳಲು ಪದಗಳಿವೆ. ಆದರೆ ವರ್ಗಸೂಚಕವಾದ ಮರ ಎನ್ನುವ ಪದವು ಮಾತ್ರ ಇರುವುದಿಲ್ಲ. ಎಸ್ಕಿಮೋ ಜನರ ಭಾಷೆಯಲ್ಲಿ ಬೇರೆ ಬೇರೆ ಗಾತ್ರದ ಮಂಜುಗಡ್ಡೆಗಳಿಗೆ ಬೇರೆ ಬೇರೆ ಹೆಸರುಗಳಿವೆ. ಆದರೆ 'ಮಂಜುಗಡ್ಡೆ' ಎಂಬ ವರ್ಗಸೂಚಕ ಪದವು ಮಾತ್ರ ಇಲ್ಲ. ಕೆಲವು ಭಾಷೆಗಳಲ್ಲಿ ಬೇರೆ ಬೇರೆ ಮರಗಳನ್ನು ಕಡಿಯಲು ಬೇರೆ ಬೇರೆ ಪದಗಳಿವೆ. ಆದರೆ 'ಕಡಿ' ಎಂಬ ವರ್ಗಸೂಚಕಪದವಿಲ್ಲ. ಹೀಗೆ 'Percepts' ಮೊದಲು, 'Concept' ಬಳಿಕ. ಬೇವು, ಮಾವು ಮೊದಲಾದುವು 'Percepts'; 'ಮರ' ಎನ್ನುವುದು 'Concept'. 'ಬೇವು' ಎನ್ನುವುದೂ ಕೂಡ, ನಾವು ಕಂಡ ಯಾವುದೋ ಒಂದು ಮರವನ್ನಲ್ಲ, ಆದೊಂದು ವರ್ಗವನ್ನು ಸೂಚಿಸುತ್ತದೆ. ಎಲ್ಲ ಪದಗಳು ವರ್ಗಗಳನ್ನು ಸೂಚಿಸದೇ ಬಿಡಿ ಬಿಡಿ ವಸ್ತುಗಳನ್ನು ಸೂಚಿಸುತ್ತಿದ್ದರೆ ವ್ಯವಹಾರವೇ ಅಸಾಧ್ಯವಾಗುತ್ತಿದ್ದಿತು.

ಮೇಲಿನ ಚರ್ಚೆ ನಿರ್ಣಾಯಕವಾದುದಲ್ಲ. ವಸ್ತುಗಳಿಗೆ ಪದಗಳ ಸಂಯೋಗವು ಹೇಗೆ ಆಯಿತು ಎನ್ನುವುದು ಬಹು ಗಹನವಾದ, ತೊಡಕಿನ ಪ್ರಶ್ನೆ. ಅದು ಭಾಷೆಯ ಉಗಮದ ಬಳಿಗೆ ನಮ್ಮನ್ನು ಕರೆದೊಯ್ಯುತ್ತದೆ. ಬಹುಶಃ ಅ ಪ್ರಶ್ನೆ ಕೊನೆಯವರೆಗೂ ಅನಿರ್ಣಾಯಕವಾಗಿ, ಜನರ ಕಲ್ಪನೆಗಳನ್ನು ಕೆರಳಿಸುತ್ತ, ಅನೇಕ ಸಿದ್ಧಾಂತಗಳ ಜನನಿಯಾಗಿ ಉಳಿಯಬಹುದು.

# 2 ಭಾಷೆಯ ಉಗಮ

ಭಾಷಾವಿಜ್ಞಾನದಲ್ಲಿ ಭಾಷೆಯ ಉಗಮವನ್ನು ಕುರಿತು ಹೊರಟಷ್ಟು ಭಿನ್ನರೀತಿಯ ಸಿದ್ಧಾಂತಗಳು, ವಾದಗಳು, ತರ್ಕ ವಿತರ್ಕಗಳು ಇನ್ನಾವ ವಿಷಯದ ಮೇಲೂ ಹೊರಟಿಲ್ಲ. ಭಾಷಾವಿಜ್ಞಾನದ ಮೇಲೆ ಇತ್ತೀಚೆಗೆ ಹೊರಟಿರುವ ಉದ್ಗ್ರಂಥಗಳಲ್ಲಿ ಭಾಷೆಯ ಉಗಮದ ಚರ್ಚೆ ಇಲ್ಲದಿರುವುದು ಎದ್ದುಕಾಣುವ ಅಂಶ. ಇದ್ದರೂ ಎಲ್ಲೋ ಕೆಲವು ಮಾತುಗಳಲ್ಲಿ ಅದನ್ನು ಸೂಚಿಸಿರುವುದುಂಟು. ಅದರ ಉಗಮದ ರಹಸ್ಯವು ಕೈವಶ ವಾಗದೆ ಉಳಿಯುವುದೆಂದೋ, ತಮ್ಮ ಸಿದ್ಧಾಂತವು ಉಳಿದ ಸಿದ್ಧಾಂತಗಳಲ್ಲಿ ಒಂದಾಗಿ 'ಪ್ರಾಕ್ತನಾಸಕ್ತಿ'ಯ ವಿಷಯವಾಗಿ ಪರಿಣಮಿಸಬಹುದೆಂದೋ ಅವರು ಶಂಕಿಸಿ ಹಾಗೆ ಮಾಡುತ್ತಿರುವಂತೆ ಕಾಣಿಸುತ್ತದೆ. ಎಲ್ಲಿ ಒಂದುತೀರ್ಮಾನಕ್ಕೆ ಬರಲು ಖಚಿತ ಸಾಮಗ್ರಿಯ ಅಭಾವ ಇದೆಯೋ, ಎಲ್ಲಿ ಬಹುಮಟ್ಟಿಗೆ ಕಲ್ಪನೆಯನ್ನೇ ಅವಲಂಬಿಸಬೇಕಾಗಿದೆಯೋ ಅಲ್ಲಿ ಎಲ್ಲರಿಗೂ ಏನಾದರೂ ಹೇಳಬೇಕೆಂಬ ಆಸೆ ಮೂಡುವುದು ಸ್ವಾಭಾವಿಕವೇ. ಭಾಷೆಯ ಉಗಮದ ಪ್ರಶ್ನೆಯ ಚರ್ಚೆಯು ಅನವಶ್ಯಕವೆಂದೂ ವ್ಯರ್ಥವೆಂದೂ ವ್ಹಿಟ್ನಿ ಮುಂತಾದ ವಿದ್ವಾಂಸರು ಅಭಿಪ್ರಾಯಪಟ್ಟರೆ, ಆ ಪ್ರಶ್ನೆಯು ವಿದ್ವಾಂಸರ ಕಲ್ಪನೆಯನ್ನು ಹೊಡೆದೆಬ್ಬಿಸುವುದರಿಂದ ಆ ವಿಷಯದಲ್ಲಿ ಕುತೂಹಲವನ್ನು ತಾಳದಿರುವುದು ಸಾಧ್ಯ ವಿಲ್ಲವೆಂದು ಯೆಸ್ಪರ್ಸನ್ ಮುಂತಾದ ವಿದ್ವಾಂಸರ ಅಭಿಪ್ರಾಯ. ಕ್ರಿ.ಶ. 1866ರಲ್ಲಿ ಸ್ಥಾಪಿತವಾದ ಫ್ರಾನ್ಸಿನ ಭಾಷಾಪರಿಷತ್ತು (La Societe de Linguistique de Paris) ತನ್ನ ಸಭೆಗಳಲ್ಲಿ ಭಾಷೆಯ ಉಗಮವನ್ನು ಕುರಿತ ಪ್ರಬಂಧಗಳನ್ನು ಓದಬಾರ ದೆಂಬ ವಿಧಿಯನ್ನು ಕಲ್ಪಿಸಿಕೊಂಡಿತ್ತು. ಭಾಷೆಯ ಉಗಮದ ಚರ್ಚೆಗೆ ಒಂದು ರೀತಿಯ ಅಪಖ್ಯಾತಿಯು ಬಂದಂತೆ ಕಾಣುತ್ತದೆ.

ಪ್ರಪಂಚದ ಭಾಷೆಗಳಲ್ಲೆಲ್ಲ ಅತ್ಯಂತ ಪ್ರಾಚೀನಭಾಷೆ ಯಾವುದಿರಬಹುದೆಂಬುದರ ವಿಷಯದಲ್ಲಿ ಬಹು ಹಿಂದೆಯೇ ಕುತೂಹಲ ಮೂಡಿದ್ದಿತು. ಎರಡು ಸಾವಿರ ವರ್ಷಗಳ ಹಿಂದೆ ಇದ್ದ ಗ್ರೀಕ್ ಇತಿಹಾಸಕಾರ ಹೆರೊಡೊಟೊಸ್ ಎಂಬಾತನು ಒಂದು ಕತೆಯನ್ನು ಹೇಳುತ್ತಾನೆ. ಪ್ಸಮೆತಿಕಸ್ ಎಂಬ ಈಜಿಪ್ಟಿನ ದೊರೆಯು ಅತ್ಯಂತ ಪ್ರಾಚೀನಭಾಷೆ ಯಾವುದಿರಬಹುದೆಂಬುದನ್ನು ತಿಳಿಯಲು ಇಬ್ಬರು ಪುಟ್ಟ ಬಾಲಕರನ್ನು ಜನಸಂಪರ್ಕ

ದಿಂದ ಪ್ರತ್ಯೇಕವಾಗಿಸಿ ಅವರ ಮೇಲ್ವಿಚಾರಣೆಗೆ ಒಬ್ಬ ಕುರುಬನನ್ನು ನೇಮಿಸುತ್ತಾನೆ. ಒಂದು ದಿನ ಆ ಹುಡುಗರು ಕುರುಬನ ಹತ್ತಿರ ಓಡಿಬಂದು 'ಬೆಕೊಸ್' ಎಂದು ಹೇಳುತ್ತವೆ. ಆ ಪದಕ್ಕೆ ಫ್ರಿಜಿಯನ್ ಭಾಷೆಯಲ್ಲಿ ರೊಟ್ಟಿ ಎಂಬ ಅರ್ಥವಿರುವುದರಿಂದ ಅದೇ ಅತ್ಯಂತ ಪ್ರಾಚೀನ ಭಾಷೆಯೆಂದು ರಾಜನು ನಿರ್ಧರಿಸುತ್ತಾನೆ. ಇಂತಹ ಘಟನೆ ನಡೆದಿರುವುದು ಅಸಂಭವವೇನಲ್ಲ. ರಾಜನ ಆಸ್ಥಾನದಲ್ಲಿ ಕನ್ನಡ ವಿದ್ವಾಂಸರಿದ್ದಿದ್ದರೆ ಆ ಮಕ್ಕಳು ಕನ್ನಡದ 'ಬೇಕು' ಎಂಬ ಪದವನ್ನು ಉಚ್ಚರಿಸಿದುವೆಂದೂ ಕನ್ನಡವೇ ಅತ್ಯಂತ ಪ್ರಾಚೀನ ಭಾಷೆಯೆಂದೂ ತಮ್ಮ ತೀರ್ಮಾನವನ್ನು ಹೇಳಿಬಿಡುತ್ತಿದ್ದರೆಂದು ಕಾಣುತ್ತದೆ. ಅಕ್ಬರನೂ ಮೇಲಿನಂತಹ ಒಂದು ಪ್ರಯೋಗವನ್ನು ಕೈಕೊಂಡನೆಂದೂ, ಆದರೆ ಅವನು ಪ್ರತ್ಯೇಕಿಸಿದ ಮಕ್ಕಳು ಯಾವ ಮಾತನ್ನೂ ಆಡಲಿಲ್ಲವೆಂದೂ ಕಥೆಯಿದೆ. ಇದು ಸರಿ. ಏಕೆಂದರೆ ಭಾಷೆಯೆಂಬುದು ಕಲಿಕೆಯಿಂದ ಬರತಕ್ಕದ್ದು.

ಭಾಷೆಯನ್ನು ಭಗವಂತನೇ ಸೃಷ್ಟಿಸಿದನೆಂದು ಪ್ರಾಚೀನರು ನಂಬಿದ್ದರು. ವಸ್ತುವಿನ ಜೊತೆಯಲ್ಲಿಯೇ ಆ ವಸ್ತುವಿನ ಹೆಸರನ್ನೂ ಅವನು ಸೃಷ್ಟಿಸಿದನೆಂದು ಅವರು ಭಾವಿಸಿದ್ದರು. ಋಗ್ವೇದದಲ್ಲಿ ದೇವತೆಗಳು ವಾಗ್ದೇವಿಯನ್ನು ಸೃಷ್ಟಿಸಿದರೆಂದು ಹೇಳಿದೆ ("ದೇವೀಂ ವಾಚಮಜನಯಂತ ದೇವಾಃ"). ಭಗವಂತನು ಆದಮ ಮತ್ತು ಈವರನ್ನು ಸೃಷ್ಟಿಸಿದಮೇಲೆ, ಆದಮನು ಯಾವ ಯಾವ ವಸ್ತುವಿಗೆ ಯಾವ ಯಾವ ಹೆಸರಿಟ್ಟು ಕರೆದನೋ ಅದೇ ಹೆಸರುಗಳು ವಸ್ತುಗಳಿಗೆ ಉಳಿಯಲಿ ಎಂದು ಭಗವಂತನು ಅನುಗ್ರಹಿಸಿದಂತೆ ಬೈಬಲಿನ "ಜೆನೆಸಿಸ್" ಎಂಬ ಭಾಗದಲ್ಲಿ ಹೇಳಿದೆ. ಇವೆಲ್ಲವೂ ಕೇವಲ ನಂಬಿಕೆಗಳು, ಕಲ್ಪನೆಗಳು ಎಂಬುದನ್ನು ಸಾಧಿಸಲು ಬಹಳ ದೂರ ಹೋಗಬೇಕಾಗಿಲ್ಲ. ವಸ್ತುವಿಗೂ ಅದನ್ನು ಸೂಚಿಸುವ ಪದಕ್ಕೂ ಒಂದು ತಾತ್ವಿಕ ಸಂಬಂಧವಿದೆಯೆಂಬ ನಂಬಿಕೆಯೇ ದೈವಮೂಲವಾದಕ್ಕೆ ಬಹುಮಟ್ಟಿಗೆ ಕಾರಣ. ಆದರೆ ಅಂತಹ ಭಾವನೆಗಳಿಗೆ ಎಡೆಯಿಲ್ಲವೆಂಬುದನ್ನು ಹಿಂದೆಯೇ ನೋಡಿದ್ದೇವೆ. ಭಾಷೆಯು ಮಾನವ ತನ್ನ ಸೌಕರ್ಯಕ್ಕಾಗಿ ಸೃಷ್ಟಿಸಿಕೊಂಡುದು, ಅದಕ್ಕೊಂದು ಬೆಳವಣಿಗೆಯಿದೆ ಎಂಬುದೇ ಸಾಧುವಾದುದು.

ಭಾಷೆಯು ಪ್ರಕೃತಿದತ್ತವಾದುದು ಎಂಬ ಅಭಿಪ್ರಾಯವನ್ನು ಹದಿನೆಂಟನೇ ಶತಮಾನದ ವಿದ್ವಾಂಸರು ಪುನರ್ವಿಮರ್ಶಿಸಿದರು. ರೂಸೋ ಎನ್ನುವವನು ಭಾಷೆಯೆನ್ನುವುದು ಇತರ ಒಪ್ಪಂದಗಳಂತೆಯೇ ಒಂದು ಸಾಮಾಜಿಕ ಒಪ್ಪಂದ ಎಂದು ಅಭಿಪ್ರಾಯಪಟ್ಟನು. ಆದರೆ ಒಂದು ಒಪ್ಪಂದಕ್ಕೆ ಬರಬೇಕಾದರೆ ಭಾಷೆ ಬೇಕು ತಾನೇ ? ಆದ್ದರಿಂದ ಈ ವಾದವು ಬಹು ರೂಕ್ಷವಾದುದೆಂಬುದರಲ್ಲಿ ಸಂದೇಹವಿಲ್ಲ. ಕಾಂಡಿಲಾಕ್ ಎನ್ನುವವನು ಹೆಚ್ಚು ವಿವೇಕಪೂರ್ಣವಾದ ರೀತಿಯಲ್ಲಿ ವಿವೇಚಿಸಿದ್ದಾನೆ. ಅವನ ಪ್ರಕಾರ ಮಾತುಬಾರದ ಪ್ರಾಕೃತನಪುರುಷ ಮತ್ತು ಸ್ತ್ರೀಯರಿಬ್ಬರು ಭಾಷೆಯನ್ನು ಹೋಲುವಂತಹ ಒಂದು ಸಾಧನವನ್ನು ಹೇಗೆ ರೂಪಿಸಿಕೊಂಡಿರಬಹುದೆಂಬುದನ್ನು

ಕಲ್ಪಿಸಿಕೊಳ್ಳಲು ಸಾಧ್ಯ. ಸ್ವಭಾವಸಿದ್ಧವಾದ ಕೂಗುಗಳು, ಉತ್ಕಟ ಭಾವಾವೇಶದ ಫಲವಾಗಿ ಮೂಡುವ ಉದ್ಗಾರಗಳು—ಇವು ಕ್ರಮೇಣ ಆಯಾ ಭಾವಗಳನ್ನು ಸೂಚಿಸಲಾರಂಭವಾಗಿ, ಕ್ರಮೇಣ ಹೊಸ ಹೊಸ ಧ್ವನಿಗಳು ಹೊಸ ಹೊಸ ವಸ್ತುಗಳಿಗೆ ಸಂಕೇತಗಳಾಗಿ ಪರಿಣಮಿಸಿರಬಹುದು. ಇವರಿಗೆ ಇಷ್ಟು ಶಕ್ತಿ ಬಂದರೆ ಸಾಕು, ಇವರ ಮಕ್ಕಳಿಗೆ ಹೆಚ್ಚು ಶಕ್ತಿ ಬರುತ್ತದೆ. ಹೀಗೆಯೇ ವಿಕಾಸವಾಗಿ ಭಾಷೆಯು ರೂಪಿತವಾಗಿರಬಹುದು. ಹದಿನೆಂಟನೇ ಶತಮಾನದಲ್ಲಿ ಭಾಷೆಯ ಉಗಮವನ್ನು ಕುರಿತು ವಿವೇಚಿಸಿರುವವರಲ್ಲಿ ಹರ್ಡರ್ ಎಂಬಾತನು ಅತ್ಯಂತ ಪ್ರಸಿದ್ಧ. ಅವನು ತನ್ನ 'ಭಾಷೆಯ ಉಗಮ' ಎಂಬ ಬಹುಮಾನಿತ ಪ್ರಬಂಧದಲ್ಲಿ ಭಾಷೆಯು ದೈವದತ್ತವಾದುದು ಎಂಬುದನ್ನು ಖಂಡಿಸುತ್ತಾನೆ. ಭಾಷೆಯು ದೈವದತ್ತವಾಗಿದ್ದಿದ್ದರೆ ಇನ್ನೂ ಹೆಚ್ಚು ಸುವ್ಯವಸ್ಥಿತವಾಗಿರುತ್ತಿತ್ತು. ಯಾವ ಭಾಷೆಯನ್ನು ತೆಗೆದುಕೊಂಡರೂ ಸರಿಯಾದ ಜೋಡಣೆಯಿರುವುದಿಲ್ಲ, ಅವ್ಯವಸ್ಥೆಯೇ ಹೆಚ್ಚು. ಆದರೆ ಭಾಷೆಯನ್ನು ಮನುಷ್ಯ 'ಕಂಡು ಹಿಡಿಯಲಿಲ್ಲ.' ಎಂದರೆ ಮನುಷ್ಯ ಅದನ್ನು ಬುದ್ಧಿಪೂರ್ವಕವಾಗಿ ರೂಪಿಸಿಕೊಳ್ಳಲಿಲ್ಲ. ಅವನ ಅತ್ಯವಶ್ಯಕತೆಯನ್ನು ಪೂರ್ಣಗೊಳಿಸುವುದಕ್ಕಾಗಿ ಉದಯವಾಯಿತು. ಭಾವೋದ್ರೇಕದ ಕೂಗುಗಳನ್ನು ಭಾಷೆಗೆ ಮೂಲವೆಂದು ಭಾವಿಸುವುದು ತಪ್ಪು. ಏಕೆಂದರೆ ಅವು 'ಮಾನವೀಯ' ಅಲ್ಲ. ಮನುಷ್ಯ ದೈಹಿಕವಾಗಿ ಪ್ರಾಣಿಗಳಿಗಿಂತ ಕೆಳಗಿದ್ದರೂ, ಮಾನಸಿಕವಾಗಿ ಮೇಲಿದ್ದಾನೆ. ಅವನ ಇಂದ್ರಿಯಗಳ ಮೂಲಕ ನುಗ್ಗುವ ನೂರಾರು ಅನುಭವಗಳಲ್ಲಿ ಒಂದು ತರಂಗವನ್ನು ಪ್ರತ್ಯೇಕಿಸಿ ಅದನ್ನು ಪರಿಶೀಲಿಸುತ್ತಾನೆ. ಉದಾಹರಣೆಗೆ ಕುರಿಯು ಮರಿ ಅರಚುತ್ತಿರುವುದನ್ನು ಕಂಡು ಅದರ ಅರಚುವಿಕೆಯನ್ನು ಅನುಕರಿಸುತ್ತಾನೆ. ಮತ್ತೊಮ್ಮೆ ಅದನ್ನು ಕಂಡಾಗ ಅದು ಹಿಂದಿನಂತೆಯೇ ಅರಚುತ್ತದೆ. ಆಗ ಅದು ಅವನಿಗೆ 'ಅರಚುವ ಪ್ರಾಣಿ'ಯಾಗುತ್ತದೆ. ಹರ್ಡರನ ಪ್ರಕಾರ ನಾಮಪದಗಳೆಲ್ಲವೂ ಕ್ರಿಯಾಪದಗಳಿಂದ ಬಂದಿವೆ.

ಭಾಷೆಯ ಉಗಮದ ವಿಷಯವಾಗಿ ಹೊರಟಿರುವ ವಾದಗಳನ್ನು ಕೆಳಗೆ ಸಂಗ್ರಹಿಸಿ ಕೊಡಲಾಗಿದೆ.

### ಅನುಕರಣ ವಾದ

ಮನುಷ್ಯ ಅನುಕರಣಶೀಲನಾದ ಪ್ರಾಣಿ. ಆದಿಮಾನವನು ವಸ್ತುಗಳನ್ನೂ ಅವುಗಳಿಂದ ಹೊರಡುವ ಶಬ್ದಗಳನ್ನೂ ಒಟ್ಟಿಗೆ ಸಮಿಾಕರಿಸಿರಬೇಕು. ಆ ಶಬ್ದಗಳನ್ನು ತನ್ನ ಧ್ವನಿಗಳಿಂದ ಅನುಕರಿಸಲು ಮಾಡಿದ ಪ್ರಯತ್ನದ ಫಲವೇ ಭಾಷೆ. ಈ ವಾದವನ್ನು ಲೀಬ್ನಿಜ್ (Leibniz) ಎಂಬಾತನು ಮೊದಲು ಪ್ರತಿಪಾದಿಸಿದ. ಈ ವಾದವನ್ನು ತಕ್ಷಣವೇ ತಳ್ಳಿಹಾಕುವಂತಿಲ್ಲ. ಆರಂಭದಲ್ಲಿ ಮನುಷ್ಯ ತಾನು ಕಂಡ ಪ್ರಾಣಿಗಳ ಕೂಗಿನಿಂದ ಆ ಪ್ರಾಣಿಗಳನ್ನು ಹೆಸರಿಸಿರಬೇಕು. ಎಂದರೆ ಅರ್ಥರಹಿತವಾಗಿದ್ದ ಕೂಗಿಗೆ ಒಂದು ಅರ್ಥವು ಕ್ರಮೇಣ ಬಂದಿರಬೇಕು. ಕಾಗೆ, ಕೋಳಿ, ಗೂಬೆ, ಮೇಕೆ, ಗುಡುಗು

ಮುಂತಾದ ಪದಗಳು ಸ್ವಾಭಾವಿಕ ಶಬ್ದಗಳ ಧ್ವನ್ಯನುಕರಣಗಳಲ್ಲದೆ ಮತ್ತೇನು ? ಈ ಅನುಕರಣೆಯೆಂಬುದು ಇಂದಿಗೂ ಭಾಷೆಯ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿದೆ. ಶಬ್ದಗಳ ಅನುಕರಣೆಯೇ ಭಾಷೆಯ ಮೂಲ ಎಂಬ ವಾದಕ್ಕೆ ಪ್ರಬಲವಾದ ಆಕ್ಷೇಪಣೆಯನ್ನು ರೆನಸ್ (Renas) ಎಂಬ ವಿದ್ವಾಂಸನು ಎತ್ತುತ್ತಾನೆ. ತನಗಿಂತ ಎಷ್ಟೋ ಕೆಳಗಿನ ಮಟ್ಟದಲ್ಲಿರುವ ಪ್ರಾಣಿಗಳ ಕೂಗುಗಳನ್ನು ಮನುಷ್ಯ ಅನುಕರಿಸಿದ ಎಂಬುದು ಆಭಾಸವೇ ಸರಿ ಎಂದು ಅವನು ವಾದಿಸುತ್ತಾನೆ. ''ಅನುಕರಣವಾದವು ಕೋಳಿಯ ಕೂಗು, ಬಾತಿನ ಕಿಚಿಕಿಚಿಗಳ ತನಕ ಸರಿ. ಆ ಕೋಳಿಗೂಡಿನ ಆಚೆ ಒಂದು ದೊಡ್ಡ ಗೋಡೆಯಿದೆ. ಅಲ್ಲಿಂದಲೇ ಭಾಷೆಯ ನಿಜವಾದ ಆರಂಭ'' ಎಂದು ಮ್ಯಾಕ್ಸ್ ಮುಲ್ಲರನು ಹಾಸ್ಯಮಾಡಿದ್ದಾನೆ. ಈ ವಾದಕ್ಕೆ 'ಬೌವೌ ವಾದ' ಎಂಬ ಚೇಷ್ಟೆಯ ಹೆಸರನ್ನು ಕೊಟ್ಟವನೂ ಅವನೇ. ಆದರೂ ಯೆಸ್ಪರ್ಸನ್ ಮುಂತಾದವರು ಈ ಅನುಕರಣೆಯ ತತ್ವವು ಭಾಷೆಯ ಉಗಮಕ್ಕೆ ಏಕೈಕ ಕಾರಣವಲ್ಲದಿದ್ದರೂ ಪ್ರಧಾನ ಕಾರಣಗಳಲ್ಲೊಂದು ಎಂದು ಭಾವಿಸಿದ್ದಾರೆ. ಏಕೆಂದರೆ ಒಂದೊಂದು ಭಾಷೆಯಲ್ಲೂ **tinkle, bubble, bleat, roar, sneeze, grumble,** ಸೀನು, ಮೇಕೆ, ಗೊಣಗು ಮುಂತಾದ 'ಅನುಕರಣ ಶಬ್ದ'ಗಳು ಇದ್ದೇ ಇರುತ್ತವೆ.

### ಉದ್ಗಾರವಾದ

ಆದಿಮಾನವನಿಗಾದ ಉತ್ಕಟ ಭಾವಾವೇಶಗಳ ಫಲವಾಗಿ ಹೊರಟ ಉದ್ಗಾರಗಳೇ ಭಾಷೆಯ ಹುಟ್ಟಿಗೆ ಕಾರಣವೆಂದು ಹಲವರು ಭಾವಿಸಿದ್ದಾರೆ. ಕೆಲವು ರೀತಿಯ ಭಾವಗಳು ಕೆಲವು ವಿಶಿಷ್ಟ ಶಬ್ದಗಳಲ್ಲಿ ಅಭಿವ್ಯಕ್ತಗೊಳ್ಳುವುದು ನಿಜ. ಉದಾಹರಣೆಗೆ— ಹೋ, ಓಹೋ, ಪಿಶ್, ಥುತ್ ಇತ್ಯಾದಿಗಳು. ಇಂತಹ ಉದ್ಗಾರಗಳಿಂದ ಭಾಷೆ ಆರಂಭವಾಗಿರಬಹುದೆಂಬುದಕ್ಕೆ ಹರ್ಡರ್ ಎಂಬಾತನು ಪ್ರಬಲವಾದ ಆಕ್ಷೇಪಣೆಗಳನ್ನು ಎತ್ತಿದ್ದಾನೆ. ಸ್ಪಷ್ಟವಾಗಿ ಆಲೋಚಿಸಬೇಕೆನ್ನುವ ತತ್ವಜ್ಞಾನಿಗಳೂ ಕೂಡ ಉದ್ಗಾರಗಳೇ ಭಾಷೆಯ ಮೂಲವೆಂಬುದನ್ನು ಸಾಧಿಸುವುದನ್ನು ನೋಡಿದರೆ ನನಗೆ ಬಹಳ ಆಶ್ಚರ್ಯವಾಗುತ್ತದೆ ಎನ್ನುತ್ತಾನೆ. ಏಕೆಂದರೆ ಉದ್ಗಾರಗಳು ಭಾಷೆಯಿಂದ ಭಿನ್ನ. ಎಲ್ಲಾ ಪ್ರಾಣಿಗಳೂ, ಮೀನೂ ಕೂಡಿಕೊಂಡು, ಎಲ್ಲವೂ ತಮ್ಮ ಭಾವಗಳನ್ನು ಧ್ವನಿಗಳ ಮೂಲಕ ವ್ಯಕ್ತಪಡಿಸುತ್ತವೆ. ಆದರೆ ಅತ್ಯಂತ ಮುಂದುವರಿದ ಪ್ರಾಣಿಗಳಲ್ಲಿಯೂ ಭಾಷೆ ಬೇಡ, ಭಾಷೆಯನ್ನು ಹೋಲುವಂತಹ ವಸ್ತು ಕೂಡ ಇಲ್ಲ. ಮಕ್ಕಳೂ ಕೂಡ ಉದ್ಗಾರವೆತ್ತುತ್ತವೆ. ಆದರೆ ಅವು ತಮ್ಮ ಪರಿಸರದಿಂದ ಕಲಿಯುವುದು ಉದ್ಗಾರಗಳಿಂದ ಭಿನ್ನವಾದ ಭಾಷೆಯನ್ನಲ್ಲವೇ ?—ಈ ಆಕ್ಷೇಪಣೆ ಸಾಧುವಾದುದು. ಅಪ್ರಯತ್ನಪೂರ್ವಕ ಉದ್ಗಾರಗಳು ಭಾವಾಭಿವ್ಯಕ್ತಿಗೆ ಅತ್ಯವಶ್ಯಕವಾದುವು. ಅಭಿಪ್ರಾಯವನ್ನು 'ತಿಳಿಸುವ' ಉದ್ದೇಶ ಉದ್ಗಾರಗಳಿಗಿರುವುದಿಲ್ಲ. ಅವು ಒಂದು ರೀತಿಯಲ್ಲಿ ಸ್ವಾಭಾವಿಕ ಕ್ರಿಯೆಗಳು. ಭಾಷೆಯ ಉದ್ದೇಶವಾದರೋ ಅಭಿಪ್ರಾಯಗಳನ್ನು ಇನ್ನೊಬ್ಬರಿಗೆ

'ಪ್ರವಹಿಸುವುದು.' ಭಾಷೆಯೊಂದು ಪ್ರಯತ್ನಪೂರ್ವಕ ಕ್ರಿಯೆ. ಉದ್ಗಾರವಾದವನ್ನು ಪೂಹ್-ಪೂಹ್ ವಾದವೆಂದು ಮ್ಯಾಕ್ಸ್ ಮುಲ್ಲರ್ ಹಾಸ್ಯಮಾಡಿದ್ದಾನೆ.

### ಅನುರಣನ ವಾದ

ಈ ವಾದದ ಪ್ರಕಾರ ಶಬ್ದಕ್ಕೂ ಅರ್ಥಕ್ಕೂ ಒಂದು ಗೂಢಸಂಬಂಧವಿದೆ. ಪ್ರಕೃತಿಯಲ್ಲಿ ಒಂದು ಸಾಮಾನ್ಯ ನಿಯಮವಿದೆ—ಅದು ಯಾವುದೆಂದರೆ, ಯಾವುದನ್ನು ಬಡಿದರೂ ಅದು ಶಬ್ದಮಾಡುತ್ತದೆ. ಒಂದೊಂದು ವಸ್ತು ಹೊರಡಿಸುವ ಶಬ್ದವೂ ಬೇರೆ ಬೇರೆ. ಹಾಗೆಯೇ ಬಾಹ್ಯಪ್ರಕೃತಿಯು ಮನುಷ್ಯನ ಮನಸ್ಸಿನ ಮೇಲೆ ಮೂಡಿಸಿದ ಭಾವನೆಗಳ ಧ್ವನ್ಯನುರಣನವೇ ಭಾಷೆ. ಈ ವಾದವನ್ನು ಮೊದಲು ಮಂಡಿಸಿದ ಮ್ಯಾಕ್ಸ್ ಮುಲ್ಲರನಿಗೇ ಸಮಾಧಾನವಾಗದೆ ಮುಂದೆ ಅದನ್ನು ಕೈಬಿಟ್ಟ. ಅವನು ಬೇರೆ ವಾದಗಳಿಗೆ ಚೇಷ್ಟೆಯ ಹೆಸರುಗಳಿಟ್ಟಂತೆ ಅವನ ಈ ವಾದಕ್ಕೂ 'ಡಿಂಗ್ ಡಾಂಗ್ ವಾದ' ವೆಂದು ಬೇರೆಯವರು ಹೆಸರಿಟ್ಟರು.

### ಯೊ-ಹೆ-ಹೊ ವಾದ

ನೋರಿ (Norie) ಎಂಬುವನ ವಾದಕ್ಕೆ ಯೊ—ಹೆ—ಹೊ ವಾದವೆಂದು ಅಡ್ಡ ಹೆಸರಿಟ್ಟಿದ್ದಾರೆ. ಈ ವಾದದ ಪ್ರಕಾರ, ನಮ್ಮ ಮಾಂಸಖಂಡಗಳಿಗೆ ಶ್ರಮವಾಗುವಂತೆ ಕೆಲಸಮಾಡಿದಾಗ, ನಾವು ಉಸಿರನ್ನು ಮತ್ತೆ ಮತ್ತೆ ಜೋರಾಗಿ ಬಿಡುವುದರಿಂದ ಶ್ರಮವು ಕಡಮೆಯಾಗುವುದೆಂಬುದು ಎಲ್ಲರ ಅನುಭವಕ್ಕೆ ಬಂದ ವಿಷಯ. ಆದಿಮಾನವರೂ ಕೂಡ ಹೀಗೆ ಶ್ರಮದಾಯಕ ಕೆಲಸವನ್ನು ಮಾಡಿದಾಗ ಅವರ ಬಾಯಿಂದ ಉಸಿರಿನೊಡನೆ ಕೆಲವು ಧ್ವನಿಗಳು ಬಂದಿರಬೇಕು. ಆ ಧ್ವನಿಗಳು ಮುಂದೆ ಆ ಕೆಲಸಕ್ಕೆ ಹೆಸರಾಗಿ ನಿಂತಿರಬಹುದು. ('heave', 'haul' ಮುಂತಾದುವು ಅಂತಹ ಪದಗಳು. ಈ ವಾದವನ್ನು ನಾವು ಹೆಚ್ಚಿಗೆ ವಿಮರ್ಶಿಸುವುದು ಅನಾವಶ್ಯಕ.

### ಸಂಜ್ಞಾಭಾಷೆಯೇ ಪ್ರಾಚೀನವಾದುದು ಎಂಬ ವಾದ

ನಾವೆಲ್ಲರೂ ಆಂಗಿಕಸಂಜ್ಞೆಗಳನ್ನು ಬಳಸುತ್ತೇವೆ. ಕೆಲವು ಸಾರಿ ಮಾತನ್ನಾಡುವಾಗ ಮಾತಿಗೆ ಶಕ್ತಿಯನ್ನು ಕೊಡುವುದಕ್ಕೋ ಅಥವಾ ಕೇವಲ ಅಭ್ಯಾಸದಿಂದಲೋ ಸಂಜ್ಞೆಗಳನ್ನು ಬಳಸುತ್ತೇವೆ. ಅಥವಾ ಕೆಲವು ಸಾರಿ ಕೇವಲ ಸಂಜ್ಞೆಗಳನ್ನೇ ಬಳಸುವುದೂ ಉಂಟು. ಈಗಲೂ ಉತ್ತರ ಅಮೇರಿಕದ ಕೆಲವು ಇಂಡಿಯನ್ ಜನಾಂಗಗಳು ಭಾಷೆಯನ್ನು ಬಹು ಕಡಮೆಯಾಗಿಯೂ ಸಂಜ್ಞೆಗಳನ್ನೇ ಹೆಚ್ಚು ಪ್ರಮಾಣದಲ್ಲಿಯೂ ಬಳಸುತ್ತಾರೆ. ಆದ್ದರಿಂದ ಸಂಜ್ಞಾಭಾಷೆಯೇ (Gesture Language) ಭಾಷೆಗಿಂತ ಮೊದಲು; ಅಷ್ಟೇ ಅಲ್ಲ, ಅದೇ ಭಾಷೆಯ ಮೂಲ ಎಂಬ ವಾದವನ್ನು ವುಂಡ್ಟ್ (Wundt) ಎಂಬ ವಿದ್ವಾಂಸನು ಮುಂದಿಟ್ಟನು. ಮಾತುಬಾರದ ಮೂಕರು ಕೇವಲ

ಸಂಜ್ಞೆಗಳನ್ನೇ ಬಳಸುತ್ತಾರೆ. ಆದ್ದರಿಂದ ಸಂಜ್ಞಾಭಾಷೆಯೇ ಮೊದಲ ಸ್ಥಿತಿ, ಭಾಷೆ ಎನ್ನುವುದು ಅದರ ವಿಕಾಸ ಎಂಬುದು ಅವನ ಅಭಿಪ್ರಾಯ. ಅವನ ಮೇಲೆ ಡಾರ್ವಿನ್ನನ ವಿಕಾಸವಾದದ ಪ್ರಭಾವ ಬಹುವಾಗಿದ್ದಿತು. ಮೊದಮೊದಲು ಚಿತ್ತ ಸ್ಥಿತಿಯು ಬಾಹ್ಯವಾದ ಆಂಗಿಕಸಂಜ್ಞೆಗಳ ಮೂಲಕ ವ್ಯಕ್ತವಾಗುತ್ತಿದ್ದು, ಕ್ರಮೇಣ ಧ್ವನಿಸಂಕೇತಗಳ ವ್ಯವಸ್ಥೆಯಾದ ಭಾಷೆಯು ಆಂಗಿಕಸಂಜ್ಞೆಗಳನ್ನು ಹಿಂದಕ್ಕೆ ಹಾಕಿದ್ದಿರ ಬಹುದು ಎಂಬುದು ಅವನ ವಾದದ ಸಾರಾಂಶ. ಮೊದಲನೆಯದಾಗಿ ಪ್ರಾಚೀನ ಮಾನವರನ್ನು ಮೂಕರೊಡನೆ ಹೋಲಿಸುವುದು ಸರಿಯಾದುದಲ್ಲ ; ಏಕೆಂದರೆ ಆರೋಗ್ಯ ಶಾಲಿಗಳನ್ನು ಅಂಗವಿಕಲರೊಡನೆ ಹೋಲಿಸಿದ ಹಾಗಾಗುತ್ತದೆ. ಅದೇ ತಾನೇ ಹುಟ್ಟಿದ ಮಕ್ಕಳನ್ನು ನೋಡಿದರೆ ಅವು ತಮ್ಮ ಭಾವಗಳನ್ನು ಅಭಿವ್ಯಕ್ತಗೊಳಿಸಲು ಕೇವಲ ಶಬ್ದಗಳನ್ನೇ ಬಳಸುತ್ತವೆ. ಹಾಗೆ ಮಾಡುವಾಗ ಕೈಕಾಲುಗಳನ್ನು ಆಡಿಸುವುದುಂಟು. ಆದರೂ ಇದು ಸಂಪೂರ್ಣವಾಗಿ ಅಮುಖ್ಯವಾದುದು. ಮಾತುಬಾರದ ಚಿಂಪಾಂಜಿಗಳು ಕೆಲವು ಸಂಜ್ಞೆಗಳನ್ನು ಬಳಸಿದ್ದುಂಟು. ಉದಾಹರಣೆಗೆ ಒಂದು ಚಿಂಪಾಂಜಿ, ತನ್ನ ಯಜಮಾನನ ಮುಖ ನೋಡಿ, ತಾನು ಹೋಗಲು ಇಷ್ಟಪಟ್ಟ ಪ್ರದೇಶದ ಕಡೆ ಒಂದೆರಡು ಹೆಜ್ಜೆ ನಡೆದು ತನ್ನ ಬಯಕೆಯನ್ನು ತಿಳಿಸಿದ್ದುದುಂಟು. ಆದರೆ ಇದರ ಮೇಲೆ ಪ್ರಬಲವಾದ ಆಕ್ಷೇಪಣೆ ಏನೆಂದರೆ ಸಂಜ್ಞೆಗಳೇ ವಿಕಾಸವಾಗಿ ಭಾಷೆಯಾಗಿ ಪರಿಣಮಿಸಿದ್ದಿದ್ದರೆ ಈ ಸಾವಿರಾರು ವರ್ಷಗಳಲ್ಲಿ ಚಿಂಪಾಂಜಿಗಳು ಒಂದು ಭಾಷೆಯನ್ನು ರೂಪಿಸಿಕೊಳ್ಳುತ್ತಿದ್ದುವಲ್ಲವೇ ? ಅವು ಕೊನೆಗೆ ಮನುಷ್ಯನ ಭಾಷೆಯನ್ನು ಹೋಲುವಂತಹ ಒಂದು ವ್ಯವಸ್ಥೆಯನ್ನು ಕೂಡ ರೂಪಿಸಿಕೊಂಡಿಲ್ಲವಲ್ಲ ? ಆದ್ದರಿಂದ ಸಂಜ್ಞೆಗಳೇ ಭಾಷೆಗೆ ಮೂಲ ಎಂಬ ವಾದವೂ ಅಗ್ರಾಹ್ಯವಾಗುತ್ತದೆ.

### ತೊದಲ್ನುಡಿಯೇ ಭಾಷೆಗೆ ಮೂಲ ಎಂಬ ವಾದ

ಮಕ್ಕಳು ಭಾಷೆಯನ್ನು ಕಲಿಯುವ ಮುನ್ನ ತೊದಲುತ್ತವೆ. ಒಂದೇ ಪದವನ್ನು ಹಲವಾರು ಬಾರಿ ಉಚ್ಚರಿಸುತ್ತವೆ. ಈ ತೊದಲ್ನುಡಿಗಳೇ ಭಾಷೆಗೆ ಮೂಲ ಎಂಬ ವಾದವನ್ನು ಹಲವರು ಮುಂದಿಟ್ಟರು. ಆದರೆ ಮಗು ತೊದಲುವುದು ಸ್ವತಂತ್ರಪದಗಳನ್ನಲ್ಲ, ಇನ್ನೊಬ್ಬರು ಆಡುವ ಮಾತುಗಳನ್ನು ಅನುಕರಿಸುವ ಪ್ರಯತ್ನದಲ್ಲಿ ತೊದಲುತ್ತದೆ. ಎಷ್ಟೋ ಸಾರಿ ಮಗುವಿನ ತೊದಲ್ನುಡಿಗಳಿಗೆ ಭಾವವನ್ನು ಅಭಿವ್ಯಕ್ತಗೊಳಿಸಬೇಕೆಂಬ ಇಚ್ಛೆ ಇರುವುದಿಲ್ಲ.

ಮೇಲಿನ ಅಭಿಪ್ರಾಯಗಳಲ್ಲಿ ಹಲವು ಪರಸ್ಪರ ಭಿನ್ನವಾಗಿರುವುದು ಮಾತ್ರವಲ್ಲ, ಕೆಲವು ಪರಸ್ಪರ ವಿರುದ್ಧವೂ ಆಗಿವೆ. ಇವೆಲ್ಲ ಅಭಿಪ್ರಾಯಗಳನ್ನು ವಿಮರ್ಶಿಸಿದ ಯೆಸ್ಪರ್ಸನ್ನನು ಭಾಷೆಯ ಶೈಶವಾವಸ್ಥೆಯನ್ನು ತಿಳಿಯಲು ಮೂರು ಮಾರ್ಗಗಳಿವೆ ಎಂಬ ತೀರ್ಮಾನಕ್ಕೆ ಬರುತ್ತಾನೆ.

1. **ಮಕ್ಕಳ ಭಾಷೆ :** ಮಗು ತಾಯಿಯ ಗರ್ಭದಲ್ಲಿರುವಾಗ ಮನುಷ್ಯನ ವಿಕಾಸದ

ಬೇರೆಬೇರೆ ಹಂತಗಳೆಲ್ಲವೂ ಪುನರಾವರ್ತನೆಯಾಗುತ್ತವೆ. ಹಾಗೆಯೇ ಮಗುವು ಭಾಷೆಯನ್ನು ಕಲಿಯುವಾಗ ಭಾಷೆಯ ವಿಕಾಸದ ಹಂತಗಳನ್ನು ಗುರುತಿಸಬಹುದು ಎಂದು ಕೆಲವರು ಭಾವಿಸುತ್ತಾರೆ. ಇದನ್ನು ಯೆಸ್ಪರ್ಸನ್ ಒಪ್ಪುವುದಿಲ್ಲ. ಏಕೆಂದರೆ ಭಾಷೆಯೆನ್ನುವುದು ಈಗಾಗಲೇ ಸಿದ್ಧವಾದ ವಸ್ತುವಾಗಿದೆ. ಮಗು ತನ್ನ ಪರಿಸರದ ಹಿರಿಯ ವ್ಯಕ್ತಿಗಳ ಬಾಯಿಂದ ಹೊರಡುವ ಧ್ವನಿಗಳನ್ನು ಗ್ರಹಿಸಿ ಅವುಗಳನ್ನು ಬೇರೆ ಬೇರೆ ವಸ್ತುಗಳಿಗೆ ಅಂಟಿಸುವುದನ್ನು ಕಲಿಯುತ್ತದೆ. ಆದ್ದರಿಂದ ಪ್ರಾಚೀನ ಭಾಷೆಯ ಸ್ಥಿತಿಯನ್ನು ಊಹಿಸಬೇಕಾದರೆ, ಮಗು ತನ್ನ ಸುತ್ತಮುತ್ತಣ ಭಾಷೆಯ ಕಡೆ ಗಮನವನ್ನು ಕೊಡುವ ಮುನ್ನವೇ ಅದರ ಬಾಯಿಂದ ಹೊರಡುವ ಶಬ್ದಗಳನ್ನು ಗಮನಿಸಬೇಕು. ಹಾಗೆಯೇ ಹಿಂದೆಂದೂ ಕೇಳಿರದ ಹೊಸ ಪದಗಳನ್ನು ಸೃಷ್ಟಿಮಾಡುವ, ಅರ್ಥವಿಲ್ಲದ ಧ್ವನಿಸಮುದಾಯಗಳಿಗೆ ಅರ್ಥ ಕಲ್ಪಿಸುವ ಮಕ್ಕಳ ರೀತಿಯನ್ನೂ ಅಸಡ್ಡೆ ಮಾಡಬಾರದು.

**2. ಪ್ರಾಚೀನ ಜನಾಂಗಗಳ ಭಾಷೆ:** ವಿದ್ಯಾವಂತರ ಅಥವಾ 'ನಾಗರಿಕರ ಜೀವನವು ಕಾಲದಿಂದ ಕಾಲಕ್ಕೆ ವ್ಯತ್ಯಾಸಗೊಳ್ಳುತ್ತಾ ಹೋಗುತ್ತದೆ. ಅವರ ಉಡಿಗೆ, ತೊಡಿಗೆ, ಆಹಾರ, ಮನೆಗಳು, ಜೀವನವಿಧಾನಗಳು ಎಲ್ಲವೂ ಬೇರೆಬೇರೆಯಾಗುತ್ತಾ ಮಾರ್ಪಾಟುಗಳನ್ನು ಪಡೆಯುತ್ತಾ ಇರುತ್ತವೆ. ಆದರೆ ನಾಗರಿಕತೆಯಿಂದ ದೂರವಾಗಿ ಬೆಟ್ಟಗುಡ್ಡಗಳ ಕಾಡುಗಳ ದ್ವೀಪಗಳ ಮಧ್ಯೆ ವಾಸಿಸುವ ಜನಾಂಗಗಳಲ್ಲಿ ವ್ಯತ್ಯಾಸಗಳೆಂಬುದೇ ಬಹಳ ಕಡಮೆ. ಈ ಸಾವಿರಾರು ವರ್ಷಗಳಲ್ಲಿ ಅವರ ಜೀವನವಿಧಾನಗಳಲ್ಲಿ ಅಂತಹ ಮಾರ್ಪಾಟುಗಳೇ ಆಗಿರುವುದಿಲ್ಲ. ಆದ್ದರಿಂದ ಮನುಷ್ಯ ನಾಗರಿಕನಾಗುವ ಮುನ್ನ ಹೇಗೆ ಬದುಕುತ್ತಿದ್ದನೆಂಬುದನ್ನು ಕಲ್ಪಿಸಿಕೊಳ್ಳಲು ಈ ಆದಿವಾಸಿಗಳ ಜೀವನ ವಿಧಾನದ ಅಧ್ಯಯನವು ಸಹಾಯಮಾಡುತ್ತದೆ. ಹಾಗೆಯೇ ಇವರ ಭಾಷೆಯೂ ಕೂಡ. ನಾಗರಿಕ ಜನಾಂಗಗಳ ಭಾಷೆಗಳೆಲ್ಲವೂ ಬಹುವೇಗದಲ್ಲಿ ವ್ಯತ್ಯಾಸವಾಗುತ್ತವೆಂಬುದು ತಿಳಿದ ವಿಷಯವೇ. ಆದರೆ ಆದಿವಾಸಿ ಜನಾಂಗಗಳ ಭಾಷೆಗಳಲ್ಲಿ ವ್ಯತ್ಯಾಸಗಳು ನಡೆಯುತ್ತಿದ್ದರೂ ಅತ್ಯಲ್ಪ ಮತ್ತು ಅತಿನಿಧಾನ. ಆದ್ದರಿಂದ ಅವರ ಭಾಷೆಗಳಲ್ಲಿ ಅತಿಪ್ರಾಚೀನಕಾಲದ ಆದಿಮಾನವನ ಭಾಷೆಯ ಲಕ್ಷಣಗಳು ಉಳಿದುಕೊಂಡುಬಂದಿರಲು ಸಾಧ್ಯ.

**3. ಭಾಷೆಯ ಚರಿತ್ರೆ:** ಇದು ಬಹಳ ಫಲಪ್ರದವಾದ ಅಧ್ಯಯನ. ಏಕೆಂದರೆ ಈಗಿನ ಭಾಷೆಗಳಿಂದ ಆರಂಭಿಸಿ ಅವುಗಳ ಅತ್ಯಂತ ಪ್ರಾಚೀನ ಸ್ಥಿತಿಯವರೆಗೆ ಅವುಗಳ ಇತಿಹಾಸವನ್ನು ಚಿತ್ರಿಸಬಹುದು. ಈಗ ನಮಗೆ ತಿಳಿದಿರುವ ಮತ್ತು ಇತಿಹಾಸವಿರುವ ಭಾಷೆಗಳ ಹಿಂದಿನ ಘಟ್ಟಗಳ ಮೂಲಕ ಅತಿಪ್ರಾಚೀನ ಘಟ್ಟಕ್ಕೆ ಹೋಗಬಹುದು. ಪ್ರಚಲಿತವಿರುವ ಮತ್ತು ಹಿಂದಿನ ಬರಹಗಳಿರುವ ಭಾಷೆಗಳನ್ನು ಹೋಲಿಸಿ ಅವುಗಳಿಗೆ ಮೂಲವಾಗಿದ್ದಿರಬಹುದಾದ ಮೂಲಭಾಷೆಯನ್ನು **(Proto Language)**ಕಲ್ಪಿಸಲು ಸಾಧ್ಯವಾಗಿದೆ. ಹಾಗೆ ಕಲ್ಪಿಸಿದ ಮೂಲಭಾಷೆಗಳಲ್ಲಿ ಆದಿಮಾನವನ ಭಾಷೆಯ ಲಕ್ಷಣ

ಗಳು ಈಗಿನ ಭಾಷೆಗಳಿಗಿಂತ ಹೆಚ್ಚು ಸಂಖ್ಯೆಯಲ್ಲಿ ದೊರೆಯುವ ಸಾಧ್ಯತೆ ಇದೆ. ಮೇಲಿನ ಮೂರು ಮಾರ್ಗಗಳ ಸಹಾಯದಿಂದ ಭಾಷೆ ಹೇಗೆ ಹುಟ್ಟಿರಬಹುದು ಎಂಬುದನ್ನು ತಿಳಿಯಲಾಗದಿದ್ದರೂ, ಅದು ಹುಟ್ಟಿದಾಗ ಅದರ ಸ್ವರೂಪವೇನಿದ್ದಿರಬಹುದೆಂಬುದನ್ನು ತಿಳಿಯಬಹುದಾಗಿದೆ. ಆದಿಭಾಷೆಯಲ್ಲಿ ಉಚ್ಚರಿಸಲು ಹೆಚ್ಚು ಕಷ್ಟವಾಗಿದ್ದ ಧ್ವನಿಗಳೇ ಇದ್ದಿರಬೇಕು. ಕಷ್ಟವಾಗಿರುವ ಧ್ವನಿಗಳನ್ನು ಸರಳವಾಗಿಸುವುದು ಮನುಷ್ಯನ ಸಹಜ ಪ್ರಯತ್ನವಾದುದರಿಂದ ಕ್ರಮೇಣ ಆ ಕ್ಲಿಷ್ಟಧ್ವನಿಗಳು ಸರಳವಾಗಿರಬೇಕು. ಆ ಭಾಷೆಯು ಹಾಡಿಗೆ ಸಮೀಪವಾಗಿದ್ದಿತೆಂದು ಕಾಣುತ್ತದೆ. ಆದಿಮಾನವರ ಭಾಷೆಯು ಬಹುಮಟ್ಟಿಗೆ ಭಾವೋದ್ವೇಗಗಳಿಗೆ ವಾಹಕವಾಗಿದ್ದಿರಬೇಕೆಂದು ಕಾಣುತ್ತದೆ. ದಿನನಿತ್ಯದ ಕೊಳು ಕೊಡೆಯ ಭಾಷೆಗಿಂತ, ಕೋಪವೋ ಶೋಕವೋ ಬಂದಾಗ ಹೊರಹೊಮ್ಮುವ ಭಾಷೆ ಕಾವ್ಯಕ್ಕೆ ಅಥವಾ ಹಾಡಿಗೆ ಸಮೀಪವಾಗುವುದನ್ನು ಗಮನಿಸಬಹುದು. ಆ ಭಾಷೆಯ ಪದಗಳು ಮೊದಮೊದಲು ಭೌತಿಕವಾದ ಅಥವಾ ಇಂದ್ರಿಯಗ್ರಾಹ್ಯವಾದ ವಸ್ತುಗಳನ್ನು ಸೂಚಿಸುತ್ತಿದ್ದುವು. ಅಮೂರ್ತ ಭಾವಗಳನ್ನು ಅಥವಾ 'ವರ್ಗ'ಗಳನ್ನು ಸೂಚಿಸುವ ಪದಗಳು ಇತ್ತೀಚಿನವು. ಉದಾಹರಣೆಗೆ ಕೆಲವು ಪ್ರಾಚೀನ ಜನಾಂಗಗಳ ಭಾಷೆಗಳಲ್ಲಿ ಬೇರೆ ಬೇರೆ ಮರಗಳಿಗೆ ಬೇರೆ ಬೇರೆ ಹೆಸರುಗಳಿದ್ದರೂ 'ಮರ' ಎಂಬ ವರ್ಗಸೂಚಕ ಪದವಿರುವುದಿಲ್ಲ. ಹಾಗೆಯೇ ಕಠಿಣ, ಮೃದು, ಬಿಸಿ, ಉದ್ದ, ಚಿಕ್ಕದು ಮುಂತಾದ ಅಮೂರ್ತ ಗುಣಗಳನ್ನು ಸೂಚಿಸುವ ಪದಗಳಿರುವುದಿಲ್ಲ. ಚೆರೂಕಿ ಎಂಬ ಭಾಷೆಯಲ್ಲಿ 'ನಾನು ತೊಳೆದುಕೊಳ್ಳುತ್ತೇನೆ', 'ನಾನು ತಲೆಯನ್ನು ತೊಳೆದುಕೊಳ್ಳುತ್ತೇನೆ'. 'ನಾನು ಇನ್ನೊಬ್ಬರ ತಲೆಯನ್ನು ತೊಳೆಯುತ್ತೇನೆ', 'ನಾನು ನನ್ನ ಮುಖವನ್ನು ತೊಳೆದುಕೊಳ್ಳು ತ್ತೇನೆ', 'ನಾನು ಇನ್ನೊಬ್ಬರ ಮುಖವನ್ನು ತೊಳೆಯುತ್ತೇನೆ', 'ನಾನು ನನ್ನ ಬಟ್ಟೆ ಗಳನ್ನು ತೊಳೆಯುತ್ತೇನೆ'—ಇವುಗಳಿಗೆಲ್ಲಾ ಪ್ರತ್ಯೇಕ ಪದಗಳುಂಟು. ಆದರೆ 'ತೊಳೆ' ಎಂಬ ಪದವೇ ಇಲ್ಲ. ಆದಿಕಾಲದ ಭಾಷೆಗಳು ಹೆಚ್ಚು ಧ್ವನಿಪೂರ್ಣವಾಗಿದ್ದುವು (Suggestive). ಕಣ್ಣಿಗೆ ಕಟ್ಟುವಂತಹ ಚಿತ್ರಗಳನ್ನು ತಂದು ನಿಲ್ಲಿಸುತ್ತಿದ್ದುವು. ಭಾಷೆ ಹೆಚ್ಚು ಅಲಂಕಾರಿಕವಾಗಿದ್ದಿತಾದ್ದರಿಂದ ಅದು ಕಾವ್ಯಭಾಷೆಗೆ ಸಮೀಪ ವಾಗಿದ್ದಿತು. ಆಧುನಿಕ ಯುಗದ ಕೆಲವು ಅನಾಗರಿಕ ಜನಾಂಗಗಳ ಭಾಷೆಯಲ್ಲಿ ಅನೇಕ ರೀತಿಯ ಉಪಮೆಗಳೂ ರೂಪಕಗಳೂ, ಅನೇಕ ರೀತಿಯ ಅಲಂಕಾರಿಕ ಉಕ್ತಿ ಗಳೂ ಸಾಂಕೇತಿಕ ಉಕ್ತಿಗಳೂ ಇರುವುದನ್ನು ಗಮನಿಸಬಹುದು.

ಮೇಲಿನ ಅಭಿಪ್ರಾಯಗಳು ಸರ್ವಗ್ರಾಹ್ಯವಲ್ಲದಿದ್ದರೂ ಹೆಚ್ಚು ತರ್ಕಸಮ್ಮತವಾಗಿವೆ. ಭಾಷೆ ಹೇಗೆ ಹುಟ್ಟಿತು ಎಂಬುದರ ಚರ್ಚೆಗೆ ಯೆಸ್ಪರ್ಸನ್ ಹೆಚ್ಚಾಗಿ ಕೈಹಾಕಿಲ್ಲ. ಅದರ ಅತ್ಯಂತ ಪ್ರಾಚೀನ ಸ್ವರೂಪ ಹೇಗಿದ್ದಿರಬಹುದೆಂಬುದನ್ನು ಊಹಿಸುವುದರ ಕಡೆಗೆ ಅವನ ಒಲವು ಹೆಚ್ಚು. ಅವನ ಅಭಿಪ್ರಾಯಗಳನ್ನು ಪ್ರಶ್ನಿಸುವುದೂ ಅಸಾಧ್ಯವೇನಲ್ಲ.

ಆಧುನಿಕ ವಿದ್ವಾಂಸರು ಮೇಲಿನ ಅಭಿಪ್ರಾಯಗಳಲ್ಲಿ ಯಾವುದನ್ನೂ ಸಂಪೂರ್ಣ ವಾಗಿ ಒಪ್ಪಿಕೊಂಡಿಲ್ಲ. ಈಗಿನ ಹತ್ತು ಜನ ವಿದ್ವಾಂಸರನ್ನು ಭಾಷೆಯ ಉಗಮದ

ವಿಷಯವಾಗಿ ನಿಮ್ಮ ಅಭಿಪ್ರಾಯಗಳನ್ನು ಹೇಳಿ ಎಂದು ಕೇಳಿದರೆ, ನಮಗೆ ದೊರಕು
ಭಿನ್ನ ಅಭಿಪ್ರಾಯಗಳು ಹತ್ತಲ್ಲ, ಹನ್ನೊಂದು. ಹನ್ನೊಂದನೆಯ ಅಭಿಪ್ರಾ
ಬಹುಶಃ "ಸದ್ಯದಲ್ಲಿ ಈ ಪ್ರಶ್ನೆಯನ್ನು ಬಗೆಹರಿಸುವುದು ಅಸಾಧ್ಯ" ಎಂಬುದ
ಸಪೀರನಂತಹ ವಿದ್ವಾಂಸರು "ಭಾಷೆಯ ಹುಟ್ಟನ್ನು ತಿಳಿಯಲು ಮಾಡಿರುವ ಪ್ರಯತ್
ಗಳೆಲ್ಲವೂ ನಿಷ್ಫಲ" ಎಂದು ಸಾರಿದ್ದಾರೆ. ಆದರೂ ಭಾಷೆಯ ಉಗಮವನ್ನು ಕುರಿ
ಚರ್ಚೆ ಸದ್ಯದಲ್ಲಿ ಶಾಂತವಾಗಿದ್ದರೂ, ಮತ್ತೆ ಮತ್ತೆ ಅದು ಕುತೂಹಲಿಗಳ ಮನಸ್ಸನ್
ಕೆಣಕದೆ ಇರುವುದಿಲ್ಲ.

# 3 ಭಾಷಾವರ್ಗೀಕರಣ

ಪ್ರಪಂಚದಲ್ಲಿ ಸುಮಾರು ಮೂರು ಸಾವಿರ ಭಾಷೆಗಳಿವೆಯೆನ್ನುತ್ತಾರೆ. ಈ ಸಂಖ್ಯೆ ನಿರ್ದಿಷ್ಟವಲ್ಲ. ಏಕೆಂದರೆ ಅನೇಕ ಭಾಷೆಗಳು ಇಂದಿಗೂ ಭಾಷಾವಿಜ್ಞಾನಿಗಳ ಗಮನಕ್ಕೆ ಬಂದಿರದೇ ಇರಬಹುದು. ಇನ್ನು ಕೆಲವನ್ನು ಸ್ವತಂತ್ರ ಭಾಷೆಗಳೆಂದು ಕರೆಯಬೇಕೋ ಉಪಭಾಷೆಗಳೆಂದು ಕರೆಯಬೇಕೋ ಎಂಬುದು ಸಂದಿಗ್ಧವಾಗಿದೆ. ಇದು ಈಗ ಪ್ರಚಲಿತವಾಗಿರುವ ಭಾಷೆಗಳ ವಿಷಯದಲ್ಲಿ ಎದುರಿಸಬೇಕಾದ ಕಷ್ಟವಾದರೆ, ಪ್ರಾಚೀನ ಭಾಷೆಗಳ ವಿಷಯದಲ್ಲಿ ನಾವು ಇನ್ನೂ ಹೆಚ್ಚು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಸರಿಯಾಗಿಲ್ಲದ ಬರಹಗಳಿಂದ ಕೆಲವು ಭಾಷೆಗಳು ತಿಳಿದಿವೆ. ಇನ್ನು ಕೆಲವು ಎಲ್ಲೋ ಕೆಲವು ಶಾಸನಗಳಿಂದ—ಅವಿದ್ಯಾವಂತರಿಂದ ಲಿಖಿತವಾದ ಅಶುದ್ಧ ಶಾಸನಗಳಿಂದ–ತಿಳಿದಿವೆ. ಇನ್ನು ಕೆಲವು ಭಾಷೆಗಳು ನಾಣ್ಯಗಳ ಮೇಲಿನ ಪದಗಳಲ್ಲಿ, ಊರು ನದಿಗಳ ಹೆಸರುಗಳಲ್ಲಿ ಉಳಿದಿವೆ. ಕೆಲವು ಭಾಷೆಗಳನ್ನು ಓದಲು ಇನ್ನೂ ಸಾಧ್ಯವಾಗಿಲ್ಲ. ಅನೇಕ ಭಾಷೆಗಳು ಮಾಯವಾಗಿವೆ. ಇಂಡೊ ಯೂರೋಪಿಯನ್ ಭಾಷೆಗಳು ಯೂರೋಪಿಗೆ ದಾಳಿಯಿಡುವ ಮುನ್ನ ಅಲ್ಲಿ ಆಡುತ್ತಿದ್ದ ಭಾಷೆಗಳು ಈಗಿಲ್ಲ; ಕೆಲವು ಸ್ಥಳವಾಚಕಗಳಲ್ಲಿ–ಇನ್ನು ಕೆಲವು ಸ್ವೀಕೃತ ಪದಗಳಾಗಿ ಈಗಿನ ಭಾಷೆಗಳ ಸ್ವತ್ತು ಎಂಬ ಭಾವನೆ ಬರುವಂತಹ ಮರೆವೇಷದಲ್ಲಿ ಬದುಕುತ್ತಿವೆ. ಕ್ರಿ.ಶ. 1667ರ ವರೆಗೆ ಇದ್ದ ಹಳೆಯ ಪ್ರಷ್ಯಿಯನ್ ಈಗಿಲ್ಲ. ಡಾಲ್ಮಟಿಯನ್ ಎಂಬ ಭಾಷೆಯನ್ನಾಡುತ್ತಿದ್ದ ವ್ಯಕ್ತಿಗಳಲ್ಲಿ ಕೊನೆಯವನು 1898ರ ಗಣಿ ಆಸ್ಫೋಟನೆಯಲ್ಲಿ ಮಡಿದನು. ಅವನ ಜೊತೆಗೆ ಆ ಭಾಷೆಯೂ ಮಾಯವಾಯಿತು. ಉತ್ತರ ಅಮೇರಿಕದ ಕೆಲವು ಭಾಷೆಗಳು ನಮ್ಮ ಕಣ್ಮುಂದೆಯೇ ಮಾಯವಾಗುತ್ತಿವೆ. ಇನ್ನು ಕೆಲವು ಭಾಷೆಗಳಲ್ಲಿ ಪರಭಾಷೆಗಳಿಂದ ಬಂದ ಸ್ವೀಕೃತಪದಗಳು ಅತಿಯಾಗಿದ್ದು ಅವುಗಳನ್ನು ಯಾವ ವರ್ಗಕ್ಕೆ ಸೇರಿಸಬೇಕೆಂಬುದು ಸಂದಿಗ್ಧವಾಗಬಹುದು.

ಆದರೂ ಈ ಎಲ್ಲ ಪ್ರಾಚೀನ, ಅರ್ವಾಚೀನ ಭಾಷೆಗಳನ್ನು ಅಧ್ಯಯನದ ಸೌಕರ್ಯಕ್ಕಾಗಿ ಕೆಲವು ವರ್ಗಗಳಾಗಿ ವಿಂಗಡಿಸಬೇಕಾಗುತ್ತದೆ. ಹಾಗೆ ವರ್ಗೀಕರಿಸುವಾಗ ಯಾವ ತತ್ವವನ್ನು ಅನುಸರಿಸಬೇಕು ಎಂಬುದೀಗ ಪ್ರಶ್ನೆ. ಭಾಷಾವಿಜ್ಞಾನದ ಪರಿಚಯವಿಲ್ಲದ

ಷರು ಭಾಷೆಗಳನ್ನು ಭೌಗೋಳಿಕವಾಗಿ ವರ್ಗೀಕರಿಸಿ ಮಾತನಾಡುವುದುಂಟು. ಇದನ್ನು ಭೌಗೋಳಿಕ ವರ್ಗೀಕರಣ ಎನ್ನಬಹುದು. "ಭಾರತದ ಭಾಷೆಗಳು' 'ಉತ್ತರ ಅಮೆರಿಕಾ ಭಾಷೆಗಳು' ಇತ್ಯಾದಿ ಉಕ್ತಿಗಳನ್ನು ನಾವು ಸಂಭಾಷಣೆಗಳಲ್ಲಿ ಕೇಳಬಹುದು, ಬರಹ ಗಳಲ್ಲಿ ಓದಬಹುದು. ಒಂದೊಂದು ದೇಶದಲ್ಲಿ ಅಥವಾ ಒಂದೊಂದು ಭೂಪ್ರದೇಶದಲ್ಲಿ ಆಡುವ ಭಾಷೆಗಳು ಒಂದು ವರ್ಗಕ್ಕೆ ಸೇರಿದ ಭಾಷೆಗಳಾಗಿರಬಹುದು, ಅಥವಾ ಬೇರೆ ಬೇರೆ ವರ್ಗಗಳಿಗೆ ಸೇರಬೇಕಾದ ಭಾಷೆಗಳಾಗಿರಬಹುದು. ಉದಾಹರಣೆಗೆ ಭಾರತ ದಲ್ಲಿರುವ ಎಲ್ಲ ಭಾಷೆಗಳನ್ನು ಒಂದು ವರ್ಗಕ್ಕೆ ಸೇರಿಸಲು ಸಾಧ್ಯವೇ ಇಲ್ಲ. ಆಫ್ರಿಕಾ ಖಂಡದಲ್ಲಿರುವ ನೂರಾರು ಭಾಷೆಗಳನ್ನು ಅನೇಕ ವರ್ಗಗಳಿಗೆ ಹಂಚಬೇಕಾಗುತ್ತದೆ. ಆದರೂ, ಬೇರೆ ಬೇರೆ ವಂಶಗಳಿಗೆ ಸೇರಿದ ಒಂದು ಭೂಪ್ರದೇಶದ ಭಾಷೆಗಳಲ್ಲಿ ಕೆಲವು ಸಮಾನ ಲಕ್ಷಣಗಳು ಹರಡಿಕೊಂಡಿರುವುದರಿಂದ, ಆ ಭಾಷೆಗಳನ್ನು ಒಂದು ಗುಂಪಾಗಿ ಪರಿಗಣಿಸುವುದರಲ್ಲಿ ಅನೌಚಿತ್ಯವೇನೂ ಕಂಡುಬರುವುದಿಲ್ಲವೆಂದು ವಾದಿಸುವವರಿದ್ದಾರೆ. ಉದಾಹರಣೆಗೆ ಭಾರತವನ್ನು ಒಂದು 'linguistic area' ಎಂಬುದಾಗಿ ಪರಿಗಣಿಸಬಹು ದೆಂಬ ಡಾ. ಎಮೆನೋ ಅವರ ವಾದವನ್ನು ಇಲ್ಲಿ ಗಮನಿಸಬಹುದು.

ಜನಾಂಗದ ಆಧಾರದ ಮೇಲೆ ಭಾಷೆಗಳನ್ನು ಕೆಲವರು ವಿಂಗಡಿಸಿದ್ದುಂಟು. ಇದನ್ನು 'ಜಾನಾಂಗಿಕ ವರ್ಗೀಕರಣ'ವೆನ್ನಬಹುದು. ಇದರ ಆಧಾರದ ಮೇಲೆ ಭಾಷೆಗಳನ್ನು ಆರ್ಯನ್ ಅಥವಾ ಇಂಡೊ ಯುರೋಪಿಯನ್, ತುರೇನಿಯನ್ ಅಥವಾ ಸಿಥಿಯನ್ ಮತ್ತು ಸೆಮಿಟಿಕ್ ಭಾಷೆಗಳೆಂದು ಮೂರು ವರ್ಗಗಳಾಗಿ ವಿಂಗಡಿಸಿದರು. ಈ ವರ್ಗೀ ಕರಣವೂ ಅಸಮರ್ಪಕವೇ. ಈ ರೀತಿಯ ವರ್ಗೀಕರಣದ ಯಾವ ವರ್ಗದಲ್ಲೂ ಸೇರದ ಭಾಷೆಗಳಿವೆ. ಉದಾಹರಣೆಗೆ ಚೈನೀಸ್ ಭಾಷೆ, ಅಮೆರಿಕದ ಮತ್ತು ಆಫ್ರಿಕದ ಭಾಷೆ ಗಳು. ಒಂದು ಜನಾಂಗವು ಮೂಲತಃ ಆಡುತ್ತಿದ್ದ ಭಾಷೆಯನ್ನೇ ಈಗಲೂ ಆಡುತ್ತಿದೆ ಎಂದು ಹೇಳುವುದು ಸಾಧ್ಯವಿಲ್ಲ. ನೀಗ್ರೋ ಜನಾಂಗದವರು ತಾವು ಆಡುತ್ತಿದ್ದ ಭಾಷೆ ಗಳನ್ನು ತ್ಯಜಿಸಿ ಇಂಗ್ಲಿಷ್ ಭಾಷೆಯನ್ನು ತಮ್ಮ ಮಾತೃಭಾಷೆಯಾಗಿ ಮಾಡಿ ಕೊಂಡಿರುವುದೂ, ಭಾರತದಲ್ಲಿ ಮುಸ್ಲಿಮರು ಕ್ರಿಶ್ಚಿಯನರು ಮತಾಂತರಹೊಂದಿದ ಮೇಲೆ ಬೇರೆ ಭಾಷೆಗಳನ್ನು ತಮ್ಮ ಮಾತೃಭಾಷೆಗಳನ್ನಾಗಿ ಮಾಡಿಕೊಂಡಿರುವುದೂ ಎಲ್ಲರಿಗೂ ತಿಳಿದ ವಿಷಯವೇ. ಆದ್ದರಿಂದ ಜಾನಾಂಗಿಕ ವರ್ಗೀಕರಣವೂ ಕೂಡ ಬಹು ಅಸಮರ್ಪಕವಾದುದು.

ಭಾಷಾವರ್ಗೀಕರಣದ ಮೂಲ ತತ್ವಗಳು ಮುಖ್ಯವಾಗಿ ಎರಡು—ಒಂದು, ಪದ ರಚನೆ ಮತ್ತು ವಾಕ್ಯರಚನೆ; ಮತ್ತೊಂದು, ಭಾಷೆಗಳ ವಂಶ. ಮೊದಲನೆಯದನ್ನು ರಾಚನಿಕ ವರ್ಗೀಕರಣವೆಂದೂ (Typical Classification), ಮತ್ತೊಂದನ್ನು ವಾಂಶಿಕವರ್ಗೀಕರಣವೆಂದೂ (Genealogical Classification) ಕರೆಯಬಹುದು.

ಒಂದು ಭಾಷೆಯಲ್ಲಿ ಇತರ ಭಾಷೆಗಳಿಂದ ಸ್ವೀಕೃತವಾದ ಪದಗಳು ಕಾಣಿಸಿಕೊಳ್ಳ ಬಹುದು, ವ್ಯವಹಾರಕ್ಕೆ ಬರಬಹುದು, ಕ್ರಮೇಣ ಮರೆಯಾಗಿ ಹೋಗಬಹುದು. ಒಂದು

ಭಾಷೆಯು ಹೊರವೈ್ಕ ಎಂಬಂತೆ ಇರುವ ಪದಕೋಶದಲ್ಲಿ ವ್ಯತ್ಯಾಸಗಳು ಕಾಣಿಸಿಕೊಳ್ಳ ಬಹುದು. ಆದರೆ ಅದರ ಅಂತಸ್ಸತ್ವದಂತಿರುವ ವ್ಯಾಕರಣವು ವ್ಯತ್ಯಾಸಗೊಳ್ಳುವುದು ಅತ್ಯಪೂರ್ವ. ಎಂದರೆ ಅದರ ರಚನೆ—ಪದರಚನೆ ಮತ್ತು ವಾಕ್ಯರಚನೆ—ಬಹು ಮಟ್ಟಿಗೆ ಉಳಿದುಕೊಂಡು ಬರುತ್ತದೆ. ಹೀಗೆ ಭಾಷಾರಚನೆಯನ್ನವಲಂಬಿಸಿ ಎಫ್. ವಿ. ಪ್ಲೆಗೆಲ್ (F. V. Schlegel) ಎಂಬ ವಿದ್ವಾಂಸನು ಪ್ರಪಂಚದ ಎಲ್ಲ ಭಾಷೆಗಳನ್ನು ಸ್ಥೂಲವಾಗಿ ಎರಡು ವರ್ಗಗಳಲ್ಲಿ ಸೇರಿಸಿದನು—(i) ಸಂಸ್ಕೃತ ಮತ್ತು ಅದರ ಜ್ಞಾತಿ ಭಾಷೆಗಳು, (ii) ಉಳಿದ ಭಾಷೆಗಳು. ಆವನ ಪ್ರಕಾರ ಮೊದಲನೆಯ ಪಂಗಡದಲ್ಲಿ ಧಾತುಗಳು ತಾವೇ ಬೇರೆ ಬೇರೆ ಬದಲಾವಣೆಗಳಿಂದ, ಒಳಗಿನ ಧ್ವನಿವ್ಯತ್ಯಾಸಗಳಿಂದ ಬೆಳೆದಿವೆ. ಇದನ್ನು 'Flexion' ಎಂದು ಕರೆಯುತ್ತಾನೆ. ಎರಡನೆಯ ಪಂಗಡದಲ್ಲಿ ಪ್ರಕೃತಿಗಳಿಗೆ ಪೂರ್ವ ಪ್ರತ್ಯಯ ಉತ್ತರ ಪ್ರತ್ಯಯಗಳನ್ನು ಸೇರಿಸಲಾಗುತ್ತದೆ. ಇವನು ಚೈನೀಸ್ ಭಾಷೆಯನ್ನು ಎರಡನೆಯ ಪಂಗಡದ ಕೊನೆಯಲ್ಲಿಟ್ಟರೂ ಅದನ್ನು ಆ ಪಂಗಡದಲ್ಲಿಡಲು ಸಾಧ್ಯವಿಲ್ಲ; ಏಕೆಂದರೆ ಅದರಲ್ಲಿ ಪ್ರತ್ಯಯಗಳೆಂಬುವೇ ಇಲ್ಲ. ಸೆಮಿಟಿಕ್ ಭಾಷೆಗಳನ್ನು ಇವನು ಪ್ರತ್ಯಯ ಭಾಷೆಗಳಲ್ಲಿ ಸೇರಿಸುತ್ತಾನೆ. ಇದೂ ಸರಿಯಲ್ಲ. ಆದ್ದರಿಂದ ಇವನ ದ್ವಿವಿಭಜನೆಯು ತ್ರಿವಿಭಜನೆಗೆ ಅವಕಾಶಮಾಡಿಕೊಡುತ್ತದೆ. ಇವನ ಸೋದರ ಎ. ಡಬ್ಲ್ಯು. ಪ್ಲೆಗೆಲ್ (A. W. Schlegel) ಎಂಬಾತನು ತ್ರಿವಿಭಜನೆಯನ್ನು ಮುಂದಿಟ್ಟನು. ಇದನ್ನೇ ಸ್ವಲ್ಪ ಮಾರ್ಪಡಿಸಿ ಬಾಪ್ (Bopp) ಎಂಬ ವಿದ್ವಾಂಸನು ತ್ರಿವಿಭಜನೆಯನ್ನು ಹೀಗೆ ವಿವರಿಸಿದನು : (i) ಪ್ರಕೃತಿಗಳೆಂಬುವೇ ಇಲ್ಲದ, ಆದ್ದರಿಂದ ಪ್ರಕೃತಿಪ್ರತ್ಯಯಗಳ ಸೇರ್ಪಡೆಯಿಲ್ಲದ, ಆದ್ದರಿಂದ ವ್ಯಾಕರಣವೇ ಇಲ್ಲದ ಭಾಷೆಗಳು. ಉದಾ : ಚೈನೀಸ್ ಭಾಷೆಗಳು. (ii) ಏಕಸ್ವರವುಳ್ಳ ಪ್ರಕೃತಿಗಳುಳ್ಳ, ಪ್ರಕೃತಿ ಪ್ರತ್ಯಯಗಳ ಸೇರ್ಪಡೆ ಇರುವ, ವ್ಯಾಕರಣವಿರುವ ಭಾಷೆಗಳು. ಉದಾ : ಇಂಡೊ ಯುರೋಪಿಯನ್ ಭಾಷೆಗಳು ಮತ್ತು ಮೊದಲನೆಯ ಮೂರನೆಯ ವರ್ಗಗಳಲ್ಲಿ ಸೇರ್ಪಡೆಯಾಗದ ಭಾಷೆಗಳು. (iii) ಎರಡು ಸ್ವರಗಳುಳ್ಳ, ಮೂರು ವ್ಯಂಜನಗಳುಳ್ಳ ಪ್ರಕೃತಿಗಳುಳ್ಳ ಭಾಷೆಗಳು. ಉದಾ : ಸೆಮಿಟಿಕ್ ಭಾಷೆಗಳು. ಇಲ್ಲಿ ಹಲವಾರು ಬದಲಾವಣೆಗಳಿಂದ ಒಂದು ಪ್ರಕೃತಿಯು ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ.

ಪ್ಲೀಪರ್ ಎಂಬ ವಿದ್ವಾಂಸನ ತ್ರಿವಿಭಜನೆ ಈ ರೀತಿ ಇದೆ. (i) ಧ್ವನಿಯಿಂದ (Sound) ಅರ್ಥ ಮಾತ್ರ ಗೋಚರ ; ಪದದ ಸ್ಥಾನದಿಂದ ಅದರ ಸಂಬಂಧವು ನಿರ್ಣಯಿತವಾಗುತ್ತದೆ. ಇವು ವಿವಿಕ್ತ ಭಾಷೆಗಳು (Isolating Languages) (ii) ಅರ್ಥ ಸಂಬಂಧಗಳೆರಡೂ ಧ್ವನಿಯಿಂದಲೇ ಸೂಚಿತವಾಗುತ್ತವೆ. ಸಂಬಂಧಸೂಚಕ ಅಂಶಗಳು ಸ್ಪಷ್ಟವಾಗಿ ಗೋಚರವಾಗುವಂತೆ ಪ್ರಕೃತಿಗೆ ಅಂಟಿರುತ್ತವೆ. ಇವು ಅಂಟುಭಾಷೆಗಳು (Agglutinating Languages). (iii) ಅರ್ಥಸೂಚಕ ಮತ್ತು ಸಂಬಂಧಸೂಚಕ ಅಂಶಗಳೆರಡೂ ಮಿಳಿತವಾಗಿ ಇನ್ನೊಂದು ಉತ್ತಮ ಘಟಕವಾಗಿರುತ್ತದೆ. ಪ್ರಕೃತಿ ಒಳವ್ಯತ್ಯಾಸಗಳನ್ನು ಪಡೆಯಬಹುದು ಅಥವಾ ಅದಕ್ಕೆ ಪ್ರತ್ಯಯಗಳು ಸೇರಿರಬಹುದು,

ಇವು ಫ್ಲೆಕ್ಷನಲ್ ಭಾಷೆಗಳು (Flexional Languages). ಶ್ಲೀಷರನ ಪ್ರಕಾರ ಈ ಮೂರು ವರ್ಗಗಳು ಭಾಷೆಯ ವಿಕಾಸದ ಮೂರು ಹಂತಗಳನ್ನು ಸೂಚಿಸುತ್ತವೆ.

ಈ ವರ್ಗೀಕರಣ ಮುಂದೆ ತಕ್ಕಮಟ್ಟಿಗೆ ಜನಪ್ರಿಯವಾಯಿತು. ಮ್ಯಾಕ್ಸ್‌ಮುಲರ್, ವ್ಹಿಟ್ನಿಯವರ ಉಪನ್ಯಾಸಗಳಲ್ಲಿ ಇದಕ್ಕೆ ಸ್ಥಾನ ದೊರೆಯಿತು. ಆದರೆ ಈ ವರ್ಗೀಕರಣವು ಒಳಗೊಳ್ಳದ ಭಾಷೆಗಳು ಹಲವಿವೆ. ಈ ವರ್ಗಗಳನ್ನೂ ನಾವು ಗಮನಕ್ಕೆ ತೆಗೆದು ಕೊಂಡು ಸ್ಥೂಲವಾಗಿ ಐದು ವರ್ಗಗಳನ್ನು ಗುರುತಿಸಬಹುದು. ಇವು ಐದೂ ರಾಚನಿಕ ವರ್ಗೀಕರಣಕ್ಕೆ ಸೇರಿದುವು—(i) ವಿವಿಕ್ತಭಾಷಾವರ್ಗ (Isolating). ಈ ವರ್ಗಕ್ಕೆ ಅತ್ಯುತ್ತಮ ನಿದರ್ಶನ ಚೈನೀಸ್ ಭಾಷೆ. ಈ ಭಾಷೆಯಲ್ಲಿ ಕ್ರಿಯಾಪದ, ನಾಮಪದ, ಗುಣವಾಚಕ ಮುಂತಾದುವುಗಳಿಗೆ ವ್ಯತ್ಯಾಸವೇ ಇಲ್ಲ. ಒಂದು ಪದವು ವಾಕ್ಯದಲ್ಲಿ ಅದು ಕಾಣಿಸಿಕೊಳ್ಳುವ ಸ್ಥಾನಗಳ ಮಹಿಮೆಯಿಂದ "ದೊಡ್ಡದು, ದೊಡ್ಡತನ, ದೊಡ್ಡದಾಗಿ, ದೊಡ್ಡದಾಗಿ ಬೆಳೆ, ದೊಡ್ಡದಾಗಿರು" ಇತ್ಯಾದಿ ಅರ್ಥಗಳನ್ನು ಕೊಡಬಹುದು. ಈ ಭಾಷೆಯಲ್ಲಿ ಪ್ರತ್ಯಯಗಳಿಲ್ಲ. ವಾಕ್ಯದಲ್ಲಿ ಬರುವ ಪ್ರಕೃತಿಯ ಸ್ಥಾನವು ಅದರ ಅರ್ಥವನ್ನು ನಿರ್ಣಯಿಸುತ್ತದೆ. ಆದ್ದರಿಂದ ಚೈನೀಸ್ ಭಾಷೆಯಲ್ಲಿ 'ಪದಾನುಕ್ರಮಣಿಕೆ' (Word-order) ಬಹಳ ಮುಖ್ಯ. 'ta kuok' ಎಂದರೆ 'ದೊಡ್ಡ ರಾಜ್ಯ(ಗಳು)' ಎಂದರ್ಥ; 'Kuok ta' ಎಂದರೆ 'ರಾಜ್ಯವು ದೊಡ್ಡದಾಗಿದೆ' ಎಂದರ್ಥವಾಗುತ್ತದೆ. 'Wang pao ci min' ಎಂದರೆ 'ರಾಜನಿಂದ ರಕ್ಷಿತರಾದ ಪ್ರಜೆಗಳು' ಎಂದರ್ಥ; 'Pao min ci wang' ಎಂದರೆ 'ಪ್ರಜೆಗಳನ್ನು ಪಾಲಿಸುತ್ತಿರುವ ರಾಜ' ಎಂದರ್ಥ. (ii) ಅಂಟು ಭಾಷಾವರ್ಗ[1] (Agglutinative). ಇಲ್ಲಿ ಪ್ರಕೃತಿಗೆ ಪ್ರತ್ಯಯಗಳನ್ನು 'ಅಂಟಿಸಿ' ಸಂಬಂಧವನ್ನು ಸೂಚಿಸಲಾಗುತ್ತದೆ. ಪ್ರಕೃತಿಯನ್ನೂ ಪ್ರತ್ಯಯವನ್ನೂ ಇಲ್ಲಿ ಬಿಡಿಸಿ ತೋರಿಸಬಹುದು. ಪ್ರಕೃತಿ ಪ್ರತ್ಯಯಗಳು ತಮ್ಮ ವ್ಯಕ್ತಿತ್ವವನ್ನು ಉಳಿಸಿಕೊಂಡಿರುತ್ತವೆ. ಈ ವರ್ಗಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ಟರ್ಕಿಷ್ ಭಾಷೆ.

ev-'ಮನೆ'
ev-den 'ಮನೆಯಿಂದ'
ev-im 'ನನ್ನ ಮನೆ'
ev-im-den 'ನನ್ನ ಮನೆಯಿಂದ'
ev-ler 'ಮನೆಗಳು'
ev-ler-den 'ಮನೆಗಳಿಂದ'
ev-ler-im 'ನನ್ನ ಮನೆಗಳು'
ev-ler-im-den 'ನನ್ನ ಮನೆಗಳಿಂದ'

[1] 'ಅಂಟು ಭಾಷಾವರ್ಗ' ಎಂಬ ಉಕ್ತಿ ವ್ಯಾಕರಣದ ದೃಷ್ಟಿಯಿಂದ ಅಸಾಧುವಾಗಿದ್ದರೂ, 'Agglutinative' ಎಂಬುದಕ್ಕೆ ಬಹು ಚನ್ನಾಗಿ ಹೊಂದಿಕೊಳ್ಳುವುದರಿಂದ, ಅರ್ಥವನ್ನು ಸ್ಪಷ್ಟಪಡಿಸುವುದರಿಂದ (Glue = ಅಂಟು) ಅದನ್ನೇ ಇಲ್ಲಿ ಉಳಿಸಿಕೊಳ್ಳಲಾಗಿದೆ.

ಮೇಲಿನ ಪಟ್ಟಿಯಲ್ಲಿ ಕೊಟ್ಟಿರುವ ಟರ್ಕಿಷ್ ಪದಗಳ ರಚನೆಯು ಎಷ್ಟು ಸ್ಪಷ್ಟವಾಗಿದೆ, ತರ್ಕಬದ್ಧವಾಗಿದೆಯೆಂದರೆ ಅದು ನಮಗೆ ಆಶ್ಚರ್ಯವನ್ನು ಹುಟ್ಟಿಸುತ್ತದೆ. ದ್ರಾವಿಡ ಭಾಷೆಗಳೂ ಕೂಡ ಈ ವರ್ಗಕ್ಕೆ ಸೇರುತ್ತವೆ. 'ಮನೆ, ಮನೆಯನ್ನು, ಮನೆಯಿಂದ, ಮನೆಗೆ, ಮನೆಯ, ಮನೆಯಲ್ಲಿ'—ಇಲ್ಲೆಲ್ಲಾ ಪ್ರಕೃತಿಗೆ ಪ್ರತ್ಯಯ ಅಂಟಿರುವುದನ್ನು ಬಿಡಿಸಿ ತೋರಿಸಬಹುದು. ಪ್ರತ್ಯಯಗಳು ಮೂಲತಃ ಪದಗಳೇ ಆಗಿದ್ದುವು ಎಂದು ಕಾಣುತ್ತದೆ.[1] (iii) ಪ್ರಾತ್ಯಯಿಕ ಭಾಷಾವರ್ಗ (Inflectional). ಅಂಟು ಭಾಷೆಗಳಲ್ಲಿಯಂತೆಯೇ ಇಲ್ಲಿಯೂ ಪ್ರಕೃತಿಗೆ ಪ್ರತ್ಯಯವು ಹತ್ತಿ ಸಂಬಂಧವು ಸೂಚಿತವಾಗುತ್ತದೆ. ಅಂಟುಭಾಷೆಗಳಲ್ಲಿ ಪ್ರಕೃತಿಗೆ ಪ್ರತ್ಯಯ(ಗಳು) ಹತ್ತಿರುವುದು ಸ್ಪಷ್ಟವಾಗಿ ಎದ್ದು ಕಾಣುತ್ತಿದ್ದರೆ ಈ ವರ್ಗದ ಭಾಷೆಗಳಲ್ಲಿ ಅವೆರಡೂ ಸೇರಿಹೋಗಿ ಒಂದನ್ನು ಇನ್ನೊಂದರಿಂದ ಬಿಡಿಸಿ ತೋರುವುದು ಅಸಾಧ್ಯವಾಗುತ್ತದೆ. ಈ ವರ್ಗಕ್ಕೆ ಉದಾಹರಣೆಗಳು ಇಂಡೊ ಯುರೊಪಿಯನ್ ಭಾಷೆಗಳು ಮತ್ತು ಸೆಮಿಟಿಕ್ ಭಾಷೆಗಳು. ಸಂಸ್ಕೃತ : as-mi, (=I am), ಆರ್ಮೀನಿಯನ್ : e-m, ಲ್ಯಾಟಿನ್ : su-m, ಹಳೆಯ ಐರಿಷ್ : a-m, ಇಂಗ್ಲಿಷ್ : a-m, ಲಿಥುಯೇನಿಯನ್ : es-mi. ಇಲ್ಲಿ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರುವುದು ಕಷ್ಟ. ಸೆಮಿಟಿಕ್ ಭಾಷಾವರ್ಗದ ಅರೇಬಿಕ್ ಭಾಷೆಯಲ್ಲಿ "Qtl" ಎಂಬ ವ್ಯಂಜನಗಳ ಮೊತ್ತವನ್ನು ಧಾತುವೆಂದು ಭಾವಿಸಿದರೆ, ಅದರಿಂದ ಹೊರಡುವ 'Qatala' (ಅವನು ಕೊಂದನು), 'Qutila' (ಅವನು ಕೊಲ್ಲಲ್ಪಟ್ಟನು), 'Qatil' (ಕೊಲೆ), 'Qitl' (ಶತ್ರು) ಎಂಬೀ ಪದಗಳಲ್ಲಿಯೂ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರುವುದು ಕಷ್ಟ. ಹಿಂದಿನ ಉದಾಹರಣೆಗಳು 'External flexion'ಗೆ ಉದಾಹರಣೆಗಳಾದರೆ ಇವು 'Internal flexion'ಗೆ ಉದಾಹರಣೆಗಳು. (iv) ಬಹುಪದಯುಕ್ತ ಭಾಷಾವರ್ಗ (Poly-synthetic). ವಾಕ್ಯದಲ್ಲಿ ಬರುವ ಪದಗಳ ಕೆಲವು ಭಾಗಗಳನ್ನು ತೆಗೆದುಹಾಕಿ ಎಲ್ಲವನ್ನೂ ಸೇರಿಸಿ ಉದ್ದನೆಯ ಪದವನ್ನಾಗಿ ಮಾಡುವುದು ಈ ಭಾಷೆಗಳ ವೈಶಿಷ್ಟ್ಯ. ಇಲ್ಲಿ ವಾಕ್ಯವು ಒಂದು ದೊಡ್ಡ ಪದದಂತಿರುತ್ತದೆ. ವಾಕ್ಯದಲ್ಲಿನ ಯಾವ ಪದವೂ ತನ್ನ ಸ್ವರೂಪದಲ್ಲಿ ಕಾಣಿಸಿಕೊಳ್ಳುವುದಿಲ್ಲ. ಉತ್ತರ ಅಮೆರಿಕದ ಭಾಷೆಗಳು ಈ ವರ್ಗಕ್ಕೆ ನಿದರ್ಶನಗಳು. (v) ಅಂತರ್ಗಮಕ ಭಾಷಾವರ್ಗ (Incorporating). ಧಾತುವಿಗೆ ಉಳಿದೆಲ್ಲ ಪದಗಳನ್ನೂ ತಂದು ಹಾಗೆಯೇ ಸೇರಿಸುವುದು ಈ ವರ್ಗದ ಭಾಷೆಗಳ ವೈಲಕ್ಷಣ್ಯ. ಈ ವರ್ಗದ ಭಾಷೆಗಳಿಗೆ ಉದಾಹರಣೆ 'ಬಾಸ್ಕ್' (Basque).

---

[1] ಪದಗಳು ಕ್ರಮೇಣ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡು ಪ್ರತ್ಯಯಗಳಾಗುತ್ತವೆ ಎಂಬುದಕ್ಕೆ ಇಂಗ್ಲಿಷಿನ—ly,—ness,—ship ಇತ್ಯಾದಿ ಪ್ರತ್ಯಯಗಳು ಸಾಕ್ಷಿ. '—ly' ಎಂಬುದು ಮೂಲತಃ 'like' ಎಂಬ ಪದವಾಗಿದ್ದಿತು. ಕನ್ನಡದಲ್ಲೂ ಮನೆಯೊಳ್, ಮನೆಯಲ್ಲಿ ಎಂಬಲ್ಲಿನ 'ಒಳ್' (→ಒಳಗೆ), 'ಅಲ್ಲಿ' ಎಂಬುವು ಸ್ವತಂತ್ರ ಪದಗಳಾಗಿಯೂ ಬಳಕೆಯಾಗುತ್ತಿವೆ.

ರಾಚನಿಕ ವರ್ಗೀಕರಣವು ಮೇಲುನೋಟಕ್ಕೆ ಎಷ್ಟೇ ಚನ್ನಾಗಿದ್ದರೂ ಅದರಲ್ಲಿ ಕೆಲವು ಕೊರತೆಗಳಿವೆ. ರಚನೆಯ ದೃಷ್ಟಿಯಿಂದ ಮಾಡಿರುವ ಮುಖ್ಯವಾದ ಐದು ವರ್ಗಗಳನ್ನು ಮೇಲೆ ನಿರೂಪಿಸಿದ್ದರೂ, ಈ ಐದು ವರ್ಗಗಳಲ್ಲಿ ಎಲ್ಲ ಭಾಷೆಗಳನ್ನೂ ಅಳವಡಿಸಲು ಸಾಧ್ಯವಿಲ್ಲ; ಭಾಷಾರಚನೆಯ ಪ್ರಭೇದಗಳು ಹಲವು. ಅಷ್ಟೇ ಅಲ್ಲ ಪರಸ್ಪರ ಸಂಬಂಧಪಡದಿರುವ ಭಾಷೆಗಳಲ್ಲಿ ಒಂದೇ ರೀತಿಯ ರಚನೆಯು ಕಂಡುಬಂದರೆ ಅವೆರಡನ್ನೂ ಒಂದು ವರ್ಗಕ್ಕೆ ಸೇರಿಸುವುದು ಹೇಗೆ? ಉದಾಹರಣೆಗೆ ಚೈನೀಸ್ ಭಾಷೆಯ ಕೆಲವು ವೈಲಕ್ಷಣ್ಯಗಳು ಇಂಗ್ಲಿಷ್ ಭಾಷೆಯಲ್ಲಿ ಕಾಣಿಸಿಕೊಳ್ಳುತ್ತವೆ. 'John saw Jim', 'Jim saw John' ಎಂಬಲ್ಲಿ ಪದಗಳ ಸ್ಥಾನಬಲದಿಂದ ಅರ್ಥ ಪ್ರತೀತಿಯಾಗುವುದರಿಂದ ಇಂಗ್ಲಿಷ್ ಭಾಷೆಯನ್ನು ವಿವಿಕ್ತ ಭಾಷಾವರ್ಗಕ್ಕೆ ಸೇರಿಸಬೇಕಾಗುತ್ತದೆ. ಆದರೆ ಅಲ್ಲಿಯೂ ಹಲವೆಡೆ ನಾವು ಪ್ರತ್ಯಯಗಳನ್ನು ಹತ್ತಿಸುತ್ತೇವೆ. ಹೀಗೆ ಇಂಗ್ಲಿಷ್ ಭಾಷೆಯಲ್ಲಿ ರಚನೆಯ ದೃಷ್ಟಿಯಿಂದ ಹೇಳುವುದಾದರೆ ಎರಡು ಅಥವಾ ಮೂರು ವರ್ಗಗಳ ವೈಲಕ್ಷಣ್ಯಗಳು ಕಂಡುಬರುತ್ತವೆ. ಆದ್ದರಿಂದ ರಾಚನಿಕ ತತ್ವದ ಆಧಾರದ ಮೇಲೆ ವರ್ಗೀಕರಣವು ತಕ್ಕಮಟ್ಟಿಗೆ ಸಮರ್ಪಕವಾಗಿದ್ದರೂ ಅದರಲ್ಲಿ ಕೆಲವು ಲೋಪದೋಷಗಳಿವೆ. ಅದಕ್ಕಿಂತ ಉತ್ತಮವಾದುದು 'ವಾಂಶಿಕ ವರ್ಗೀಕರಣ' (Genealogical classification) ಮತ್ತು ಅದೇ ಬಹುಮಟ್ಟಿಗೆ ಸಮರ್ಪಕವಾದುದು. ಇದನ್ನು ತಿಳಿಯಬೇಕಾದರೆ 'ಭಾಷಾವಂಶ'ವೆಂದರೆ ಏನು ಎಂಬುದನ್ನು ತಿಳಿಯುವುದು ಆವಶ್ಯಕ.

ಈಗ ಪ್ರತ್ಯೇಕ ಭಾಷೆಗಳೆಂದು ಕರೆಯಿಸಿಕೊಳ್ಳುವ ಅನೇಕ ಭಾಷೆಗಳು ಮೂಲಕ್ಕೆ ಹೋಗಿ ನೋಡಿದರೆ ಯಾವುದೋ ಒಂದು ಭಾಷೆಯಿಂದ ಬೇರೆಯಾಗಿ, ಕವಲೊಡೆದು ಬಂದಂತೆ ಭಾಸವಾಗುತ್ತದೆ. [ಆ ಪಿತೃಭಾಷೆಯನ್ನು (Parent language) ಮೂಲ ಭಾಷೆಯೆಂದು ಕರೆಯೋಣ.] ಒಂದು ಭಾಷೆಯನ್ನು ವಿಸ್ತಾರವಾದ ಪ್ರದೇಶದಲ್ಲಿ ಜನಗಳು ಆಡುತ್ತಿದ್ದರೆ ಆ ಭಾಷಾ ಪ್ರದೇಶದಲ್ಲಿ ಬೇರೆ ಬೇರೆ ಭಾಗಗಳಲ್ಲಿ, ಹಲವು ಕಾರಣಗಳಿಂದಾಗಿ, ಬೇರೆ ಬೇರೆ ಭಾಷಾಪ್ರಭೇದಗಳು ಅಥವಾ ಉಪಭಾಷೆಗಳು (Dialects) ಕಾಣಿಸಿಕೊಳ್ಳುತ್ತವೆ. ಕಾಲಕ್ರಮೇಣ ಈ ಉಪಭಾಷೆಗಳಲ್ಲಿ ಪರಸ್ಪರ ವ್ಯತ್ಯಾಸಗಳು ಹೆಚ್ಚುತ್ತಾ ಹೋದಂತೆ ಒಂದು ಉಪಭಾಷೆಯನ್ನಾಡುವ ಜನರಿಗೆ ಇನ್ನೊಂದು ಉಪಭಾಷೆಯು ಅರ್ಥವಾಗದೇ ಹೋಗಬಹುದು. ಆಗ ಅವುಗಳನ್ನು ನಾವು ಸ್ವತಂತ್ರ ಭಾಷೆಗಳೆಂದು ಕರೆಯಬೇಕಾಗುತ್ತದೆ. ಅಥವಾ ಒಂದು ಭಾಷೆಯನ್ನಾಡುವ ಜನರಲ್ಲಿ ಕೆಲವರು ವಲಸೆ ಹೋಗಿ ದೂರ ಪ್ರದೇಶವೊಂದರಲ್ಲಿ ನೆಲಸಬಹುದು. ಕಾಲ ಕಳೆದಂತೆ ತಾಯ್ನಾಡಿನ ಭಾಷೆಗೂ ಹೊಸದಾಗಿ ಬಂದು ನೆಲಸಿದ ಪ್ರದೇಶದ ಭಾಷೆಗೂ ವ್ಯತ್ಯಾಸಗಳು ಹೆಚ್ಚುತ್ತಾ ಬಂದು ಅವೆರಡೂ ಸ್ವತಂತ್ರಭಾಷೆಗಳಾಗಿ ಪರಿಣಮಿಸಬಹುದು. (ಇದರ ವಿವರಗಳು ಬೇರೆಯ ಕಡೆ ಬಂದಿವೆ.) ಒಂದು ಭಾಷೆ ಹಲವು

ಭಾಷೆಗಳಾಗಿ ಒಡೆಯುವುದು ಹೀಗೆ. ಮೂಲಭಾಷೆಯೂ ಹೀಗೆ ಒಡೆದು ಈಗ ಹಲವು ಭಾಷೆಗಳಾಗಿರಬೇಕು.[1]

ಆದರೆ ಆ ಮೂಲಭಾಷೆ ಈಗ ಇಲ್ಲ. ಅದರ ಮರಿಗಳು ಬಳಕೆಯಲ್ಲಿವೆ. ಈಗ ಇರುವ ಭಾಷೆಗಳು ಒಂದು ಮೂಲ ಭಾಷೆಯಿಂದ ಬಂದಿವೆ ಎಂದು ಹೇಳಲು ಆಧಾರಗಳೇನು ಎಂಬ ಪ್ರಶ್ನೆ ಬಹು ಸಹಜವಾಗಿ ಏಳುತ್ತದೆ. ಈ ಪ್ರಶ್ನೆಯ ಪರಿಶೀಲನೆ ಇಲ್ಲಿ ಅತ್ಯಗತ್ಯ ವಾಗಿದೆ. ಪ್ರತಿಯೊಂದು ಭಾಷೆಯಲ್ಲೂ ನಿತ್ಯೋಪಯೋಗಿಯಾದ ಪದಗಳೂ (intimate words), ಸಾಂಸ್ಕೃತಿಕ ಪದಗಳೂ (cultural words) ಇರುತ್ತವೆ. ಈ ಹೆಸರುಗಳೇ ಹೇಳುವಂತೆ ದಿನನಿತ್ಯದ ಬಳಕೆಗೆ, ಪರಾತಂಕತೆಗೆ ಅತ್ಯವಶ್ಯಕವಾಗಿ ಬೇಕಾದ ಪದಗಳೇ ನಿತ್ಯೋಪಯೋಗಿಯಾದ ಪದಗಳು. ದೇಹದ ಅಂಗಗಳು, ಸಂಖ್ಯೆಗಳು, ಸಂಬಂಧಸೂಚಕ ಪದಗಳು, ಸರ್ವನಾಮಗಳು, ಹೋಗು, ಬಾ, ತಿನ್ನು, ನಗು, ಅಳು ಇತ್ಯಾದಿ ಕ್ರಿಯೆಗಳನ್ನು ಸೂಚಿಸುವ ಪದಗಳು, ಆಹಾರಕ್ಕೆ ಸಂಬಂಧಿಸಿದ ಪದಗಳು, ವ್ಯವಸಾಯ ಇತ್ಯಾದಿಗಳಿಗೆ ಸಂಬಂಧಿಸಿದ ಪದಗಳು—ಇತ್ಯಾದಿ ಪದಗಳು ನಮ್ಮ ಮೂಲಭೂತ ಆವಶ್ಯಕತೆಗಳು. ಇವು ನಿತ್ಯೋಪಯೋಗಿ ಪದಗಳು. ಧರ್ಮ, ದೈವ, ಶಾಸ್ತ್ರಗಳು, ರಾಜಕೀಯ—ಇತ್ಯಾದಿಗಳಿಗೆ ಸಂಬಂಧಿಸಿದ ಪದಗಳು ಮೂಲಭೂತ ಆವಶ್ಯಕತೆಗಳಲ್ಲ. ಅವುಗಳಿಂದಲೇ ಒಂದು ಭಾಷೆ ಶ್ರೀಮಂತವಾಗುವುದು, ಸಂಸ್ಕೃತಿ ಬೆಳೆಯುವುದು ಎಂಬುದನ್ನು ನಾವು ಮರೆಯಬಾರದು. ಆದರೂ ಅವು ನಮ್ಮ ದಿನನಿತ್ಯದ ಬದುಕಿಗೆ ಅತ್ಯವಶ್ಯಕವಾಗಿ ಬೇಕಾದ ಪದಗಳೆಂದು ಹೇಳಲಾಗುವುದಿಲ್ಲ. ಇವು ಸಾಂಸ್ಕೃತಿಕ ಪದಗಳು. ಒಂದು ಭಾಷೆ ಇನ್ನೊಂದು ಭಾಷೆಯಿಂದ ಅಥವಾ ಭಾಷೆಗಳಿಂದ ಸ್ವೀಕರಿಸುವ ಪದಗಳು ಸಾಮಾನ್ಯವಾಗಿ ಸಾಂಸ್ಕೃತಿಕ ಪದಗಳಾಗಿರುತ್ತವೆ. ನಿತ್ಯೋಪ ಯೋಗಿಯಾದ ಪದಗಳು ಭಾಷೆಯಲ್ಲಿ ಸಾಮಾನ್ಯವಾಗಿ ಉಳಿದುಕೊಂಡು ಬರುತ್ತವೆ. ಇವುಗಳನ್ನು ಭಾಷೆ ಕಳೆದುಕೊಳ್ಳುವುದಿಲ್ಲ. ಈಗ ನಾಲ್ಕು ಭಾಷೆಗಳಿವೆಯೆಂದು ಭಾವಿ ಸೋಣ. ಅವುಗಳ ಸಾಂಸ್ಕೃತಿಕ ಪದಕೋಶದಲ್ಲಿ ಸಾಮ್ಯವಿದ್ದರೆ ಅದು ಅಷ್ಟು ಗಮ ನಾರ್ಹವಲ್ಲ; ಏಕೆಂದರೆ ಆ ನಾಲ್ಕು ಭಾಷೆಗಳೂ ಸಮಾನ ಮೂಲದಿಂದ ಅಥವಾ ಮೂಲಗಳಿಂದ ಆ ಪದಗಳನ್ನು ಸ್ವೀಕರಿಸಿರಬಹುದು. ಆದರೆ ನಿತ್ಯೋಪಯೋಗಿಪದ

[1] ಮೂಲಭಾಷೆಯಿಂದ ಬೇರೆ ಬೇರೆ ಭಾಷೆಗಳು ಹೇಗೆ ಹೊರಟುವು ಎಂಬುದನ್ನು ಎರಡು ರೀತಿಗಳಲ್ಲಿ ವಿವರಿಸಬಹುದು; ಒಂದು—ಮೂಲಭಾಷೆಯಿಂದ ಬೇರೆ ಬೇರೆ ಭಾಷೆಗಳು ಕವಲು ಗಳಾಗಿ ಹೊರಟವು; ಈ ಕವಲುಗಳಿಂದ ಮತ್ತೆ ಬೇರೆ ಬೇರೆ ಕವಲುಗಳು ಹೊರಟುವು. ಇದನ್ನು 'Pedigree Theory' ಎನ್ನುತ್ತಾರೆ. ಇದರ ಪ್ರತಿಪಾದಕ ಆಗಸ್ಟ್ ಶ್ಲೀಷರ್. ಎರಡು—ಮೂಲಭಾಷೆಯಿಂದ ಬೇರೆ ಬೇರೆ ಭಾಷೆಗಳು ತರಂಗ ತರಂಗಗಳಾಗಿ ಹೊರಡುತ್ತವೆ, ಹರಡಿಕೊಳ್ಳು ತ್ತವೆ. ಒಂದು ತರಂಗಕ್ಕೂ ಅದರ ಪಕ್ಕದ ತರಂಗಕ್ಕೂ ಬಹಳ ಸಾಮ್ಯವಿರುವಂತೆ ಅಕ್ಕಪಕ್ಕದ ಭಾಷೆಗಳಿಗೆ ಬಹು ಹತ್ತಿರದ ಸಂಬಂಧವಿರುತ್ತದೆ. ಇದನ್ನು 'Wave Theory' ಎನ್ನುತ್ತಾರೆ. ಇದರ ಪ್ರತಿಪಾದಕ ಜೊಹಾನ್ಸ್‌ಷ್ಮಿಡ್ತ್. ಇವೆರಡನ್ನೂ ಕನ್ನಡದಲ್ಲಿ 'ವೃಕ್ಷವಾದ' ಮತ್ತು 'ತರಂಗ ವಾದ'ಗಳೆಂದು ಕರೆಯಬಹುದು.

ಕೋಶದಲ್ಲಿ ಸಾಮ್ಯವಿದ್ದರೆ ಆ ನಾಲ್ಕು ಭಾಷೆಗಳೂ ಐತಿಹಾಸಿಕವಾಗಿ ಸಂಬಂಧಿಸಿವೆ ಎಂದು ಭಾವಿಸಬೇಕಾಗುತ್ತದೆ. ಅವುಗಳ ಇತಿಹಾಸವನ್ನು ಹೆಜ್ಜೆ ಹೆಜ್ಜೆಗೆ ಅನುಸರಿಸಿ ಕೊಂಡು ಹೋದರೆ ಅವು ಯಾವುದೋ ಒಂದು ಭಾಷೆಯಿಂದ ಹೊರಟುವು ಎಂದು ತಿಳಿದುಬರುತ್ತದೆ. ಆದ್ದರಿಂದ ಅವುಗಳನ್ನು ಸೋದರಭಾಷೆಗಳೆಂದು ಕರೆಯಬಹುದು. ಇದಕ್ಕೆ ಖಚಿತವಾದ ಒಂದು ನಿದರ್ಶನವನ್ನು ಕೊಡಬಹುದು. ಈಗಿನ ಫ್ರೆಂಚ್, ಸ್ಪ್ಯಾನಿಷ್, ಪೋರ್ಚುಗೀಸ್, ಇಟ್ಯಾಲಿಯನ್ ಭಾಷೆಗಳು ಮೂಲತಃ ಲ್ಯಾಟಿನ್ ಭಾಷೆಯಿಂದ ಹೊರಟುವೆಂಬುದಕ್ಕೆ ಐತಿಹಾಸಿಕ ಆಧಾರಗಳಿವೆ. (ಈ ಭಾಷೆಗಳನ್ನು ರೊಮಾನ್ಸ್ ಭಾಷೆಗಳೆಂದು ಕರೆಯುತ್ತಾರೆ) ಇಲ್ಲಿಯ ವೈಶಿಷ್ಟ್ಯವೆಂದರೆ—ಇವುಗಳಿಗೆ ಮೂಲಭಾಷೆಯಾದ ಲ್ಯಾಟಿನ್ ನಮಗೆ ಗೊತ್ತಿದೆ. ಆದರಿಂದ ನಿಷ್ಪನ್ನವಾದ ಭಾಷೆಗಳೂ ಗೊತ್ತಿವೆ. ಇಂಗ್ಲಿಷ್—ten; ಗ್ರೀಕ್—deka; ಲ್ಯಾಟಿನ್—decem; ಸಂಸ್ಕೃತ—dasa; ಗಾಥಿಕ್—taihun ಇತ್ಯಾದಿಗಳನ್ನು ನೋಡಿದರೆ ಈ ಭಾಷೆಗಳು ಐತಿಹಾಸಿಕ ವಾಗಿ ಸಂಬಂಧಿಸಿವೆ, ಮೂಲತಃ ಯಾವುದೋ ಒಂದು ಭಾಷೆಯಿಂದ ಬಂದಿವೆ ಎಂದು ಹೇಳಬೇಕಾಗುತ್ತದೆ. ಹಾಗೆಯೇ ಕನ್ನಡ, ತಮಿಳು, ತೆಲುಗು, ಮಲೆಯಾಳ, ತುಳು, ಕೊಡಗು, ತೊದ ಮುಂತಾದ ಭಾಷೆಗಳು.

ನಿತ್ಯೋಪಯೋಗಿ ಪದಕೋಶದಲ್ಲಿ ಸಾಮ್ಯವಿದ್ದ ಮಾತ್ರಕ್ಕೇ ಎರಡು ಭಾಷೆಗಳು ಐತಿಹಾಸಿಕವಾಗಿ ಪರಸ್ಪರ ಸಂಬಂಧಿಸಿವೆ ಎಂದು ಹೇಳಲಾಗುವುದಿಲ್ಲ. ಎಷ್ಟೋ ಭಾಷೆಗಳು ಇತರ ಭಾಷೆಗಳಿಂದ ನಿತ್ಯೋಪಯೋಗಿ ಪದಗಳನ್ನೂ ಸ್ವೀಕರಿಸಿರಬಹುದು. ಆಧುನಿಕ ಪರ್ಷಿಯನ್ ಭಾಷೆಯಲ್ಲಿ ಅರೇಬಿಕ್ ಪದಗಳ ಬಾಹುಳ್ಯವಿದೆ. ಆದರೆ ನಮಗೆ ಇತರ ಆಧಾರಗಳಿಂದ ಗೊತ್ತಿದೆ—ಪರ್ಷಿಯನ್ ಭಾಷೆಯು ಇಂಡೊ ಯುರೋಪಿಯನ್ ವರ್ಗಕ್ಕೆ ಸೇರಿದ ಭಾಷೆ, ಅರೇಬಿಕ್ ಸೆಮಿಟಿಕ್ ವರ್ಗಕ್ಕೆ ಸೇರಿದ ಭಾಷೆ. ಜಪಾನೀ ಭಾಷೆಯಲ್ಲಿ ಬೇಕಾದಷ್ಟು ಚೀನೀ ಪದಗಳಿವೆ. ಆದರೆ ಅವೆರಡೂ ಬೇರೆ ಬೇರೆ ಮೂಲ ಭಾಷೆಗಳಿಂದ ಬಂದಿವೆ. ಆದ್ದರಿಂದ ನಿತ್ಯೋಪಯೋಗಿ ಪದಕೋಶದಲ್ಲಿ ಸಾಮ್ಯವಿದ್ದ ಮಾತ್ರಕ್ಕೇ ಭಾಷೆಗಳು ಪರಸ್ಪರ ಸಂಬಂಧಿಸಿವೆ ಎಂದು ತಿಳಿಯಬಾರದು. ಭಾಷೆಗಳ ಪರಸ್ಪರ ಸಂಬಂಧವನ್ನು ತಿಳಿಯಲು ಇನ್ನೊಂದು ನಿರ್ಣಾಯಕ ಅಂಶವಿದೆ. ಅದೇ ಧ್ವನಿಸಂವಾದ. (Phonetic Correspondence). ಕೆಲವು ಉದಾಹರಣೆಗಳೊಂದಿಗೆ ಅದನ್ನು ಹೀಗೆ ವಿವರಿಸಬಹುದು.

| ಹಳೆಯ ಇಂಗ್ಲಿಷ್ | ಆಧುನಿಕ ಇಂಗ್ಲಿಷ್ |
|---|---|
| āgan | own |
| bāt | boat |
| gāt | goat |
| stān | stone |

ಇಂತಹ ನೂರಾರು ಉದಾಹರಣೆಗಳಿಂದ ಹಳೆಯ ಇಂಗ್ಲಿಷಿನ [ā]—ಆಧುನಿಕ ಇಂಗ್ಲಿಷಿನ [ow] ಎಂಬುದನ್ನು ತೋರಿಸಬಹುದು:

| ಇಂಗ್ಲಿಷ್ | ಜರ್ಮನ್ |
|---|---|
| tail | zagel |
| tale | zahl |
| tame | zahm |
| ten | zehn |

ಇಂಗ್ಲಿಷಿನ ಪದಾರಂಭದ [t—]=ಜರ್ಮನ್ ಭಾಷೆಯ ಪದಾರಂಭದ [z—] ಎಂಬುದನ್ನು ಈ ನಿದರ್ಶನಗಳಿಂದ, ಇಂತಹ ಇನ್ನೂ ಹಲವಾರು ನಿದರ್ಶನಗಳಿಂದ ತೋರಿಸಬಹುದು. ಸಂಸ್ಕೃತದಲ್ಲಿ ಎಲ್ಲೆಲ್ಲಿ ಪದಾರಂಭದಲ್ಲಿ [P—] ಇದೆಯೋ ಅಲ್ಲೆಲ್ಲಾ ಜರ್ಮಾನಿಕ್ ಭಾಷೆಗಳಲ್ಲಿ (ಜರ್ಮನ್, ಇಂಗ್ಲಿಷ್, ಗಾಥಿಕ್, ಹಳೆಯ ಫ್ರಿಜಿಯನ್ ಇತ್ಯಾದಿ ಭಾಷೆಗಳಲ್ಲಿ) [f—] ಉಂಟು. ಇದೇ ಧ್ವನಿಸಂವಾದ. ಒಂದೋ ಎರಡೋ ಪದಗಳಲ್ಲಿ ಧ್ವನಿಸಂವಾದ ಇದ್ದರೆ ಅದನ್ನು ಆಕಸ್ಮಿಕವೆಂದು ಉದಾಸೀನ ಮಾಡಬಹುದು. ಆದರೆ ಇದು ನೂರಾರು ಪದಗಳಲ್ಲಿ ಕಾಣಿಸಿಕೊಂಡರೆ ಮೂಲಭಾಷೆಯ ಪದವು ಆ ಭಾಷೆಯಿಂದ ಹೊಟ ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ಆಕಾರಗಳನ್ನು ತಾಳಿದೆ ಎಂದು ನಿರ್ಧರಿಸಬೇಕಾಗುತ್ತದೆ. ಮೇಲಿನ ನಿದರ್ಶನದಿಂದ ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳೆರಡೂ ಮೂಲ ಪಶ್ಚಿಮ ಜರ್ಮಾನಿಕ್ (Proto-West Germanic) ಭಾಷೆಯಿಂದ ಬಂದುವೆಂದು ತಿಳಿದುಬರುತ್ತದೆ. ಹಾಗೆಯೇ ಸಂಸ್ಕೃತ ಗ್ರೀಕ್ ಇತ್ಯಾದಿ ಭಾಷೆಗಳು ಮೂಲ ಇಂಡೊ ಯುರೊಪಿಯನ್ನಿನಿಂದ ಬಂದುವು. ದ್ರಾವಿಡ ಭಾಷೆಗಳಿಂದ ಒಂದು ನಿದರ್ಶನವನ್ನು ಕೊಡಬಹುದು.

ಮಲೆಯಾಳಂ—ಚೇಱುಕ
ಕನ್ನಡ—ಕೇಱು
ತೆಲುಗು—ಚೆರುಗು, ಚೇಟ
ನಾಯಿಕಿ—ಕೇದ್
ಗದಬ—ಕೇಟಿ
ಕೋಟ—ಕೇರ್

'ಧಾನ್ಯವನ್ನು ಕಸಕಡ್ಡಿಯಿಂದ ಪ್ರತ್ಯೇಕಿಸು' ಎಂಬ ಅರ್ಥದಲ್ಲಿ ಈ ಬೇರೆ ಬೇರೆ ಭಾಷೆಗಳಲ್ಲಿರುವ ಪದಗಳು ಇವು. ಈ ಪದಗಳ ಆರಂಭದಲ್ಲಿ ಕೆಲವೆಡೆ [k—] ಉಂಟು, ಕೆಲವೆಡೆ [c—] ಉಂಟು. ದ್ರಾವಿಡ ಭಾಷಾಶಾಸ್ತ್ರದ ಒಂದು ಧ್ವನಿನಿಯಮದ ಪ್ರಕಾರ ಮೂಲ ಭಾಷೆಯಲ್ಲಿ [i] [e] ಮುಂತಾದ ಪೂರ್ವಸ್ವರಗಳ ಹಿಂದೆ [k—] ವ್ಯಂಜನ

ವಿದ್ದರೆ ಆ ವ್ಯಂಜನವು ತಮಿಳು, ಮಲೆಯಾಳ, ತೆಲುಗುಗಳಲ್ಲಿ [c—] ಆಗಿ ಪರಿಣಮಿಸುತ್ತದೆ. ಆ ಸ್ವರಗಳ ಮುಂದೆ ಮೂರ್ಧನ್ಯ ವ್ಯಂಜನವಿದ್ದರೆ ತಮಿಳು, ಮಲಯಾಳಗಳಲ್ಲಿ ತಾಲವ್ಯೀಕರಣವಾಗುವುದಿಲ್ಲ. ಕನ್ನಡದ ಎಲ್ಲೆಡೆಗಳಲ್ಲಿ ಹಾಗೆಯೇ ಸ್ವಸ್ವರೂಪದಲ್ಲಿ ಉಳಿಯುತ್ತದೆ. ಆದ್ದರಿಂದ ಕನ್ನಡ ಪದದ ಆದಿಯಲ್ಲಿ ಕಕಾರವೂ ಮಲೆಯಾಳ, ತೆಲುಗುಗಳ ಪದಗಳಲ್ಲಿ ಆದಿ ಚಕಾರವೂ ಇದೆ. ಇದನ್ನು ಇನ್ನೂ ಹಲವು ನಿದರ್ಶನಗಳಲ್ಲಿ ನೋಡಬಹುದು. ಮೂಲದ್ರಾವಿಡ ಪದಗಳು ಬೇರೆಬೇರೆ ಭಾಷೆಗಳಲ್ಲಿ ಬೇರೆಬೇರೆ ರೂಪಗಳನ್ನು ತಾಳಿದುವು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಒಂದು ಮೂಲಭಾಷೆಯಿಂದ ಹೊರಟ ಭಾಷೆಗಳು, ಅವುಗಳಿಂದ ಹೊರಟ ಇತರ ಭಾಷೆಗಳು–ಇವುಗಳೆಲ್ಲವನ್ನು ಸೇರಿಸಿ ಒಂದು 'ಭಾಷಾವಂಶ'ವೆಂದು ಕರೆಯಬಹುದು. ಈ ವಂಶದ ತತ್ವವು ಭಾಷಾವರ್ಗೀಕರಣಕ್ಕೆ ಅತ್ಯಂತ ಸಮರ್ಪಕವಾದುದಾಗಿದೆ.[1] ಈ ತತ್ವದ ಪ್ರಕಾರ ಮೂಲ ದ್ರಾವಿಡದಿಂದ ಹೊರಟ ಭಾಷೆಗಳು, ಮತ್ತೆ ಆ ಭಾಷೆಗಳಿಂದ ಹೊರಟಿರಬಹುದಾದ ಭಾಷೆಗಳು—ಇವುಗಳೆಲ್ಲವನ್ನೂ ಒಂದು 'ವಂಶ'ವೆಂದು ಭಾವಿಸಬಹುದು. ಇದನ್ನು ದ್ರಾವಿಡಭಾಷಾವರ್ಗವೆನ್ನಬಹುದು. ಮೂಲ ಇಂಡೊ ಯುರೋಪಿಯನ್ ಭಾಷೆಯ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳಂತಿರುವ ಭಾಷೆಗಳನ್ನೆಲ್ಲ ಸೇರಿಸಿ ಇಂಡೊ ಯುರೋಪಿಯನ್ ಭಾಷಾವರ್ಗವೆನ್ನಬಹುದು.

ಈ ವಾಂಶಿಕ ವರ್ಗೀಕರಣದ ಮೇಲೆ ವಿಂಗಡಣೆಗೊಳ್ಳುವ ಭಾಷಾವರ್ಗಗಳಲ್ಲಿ ಕೆಲವನ್ನು ನೋಡಬಹುದು. **ಇಂಡೊ ಯುರೊಪಿಯನ್ ಭಾಷಾವರ್ಗ:** ಪ್ರಪಂಚದಲ್ಲೆಲ್ಲ ಅತ್ಯಂತ ಪ್ರಮುಖವಾದ ಭಾಷಾವಂಶ ಇದು. ಇದರಲ್ಲಿ ಇಂಗ್ಲಿಷ್, ಜರ್ಮನ್, ಡಚ್ ಮುಂತಾದ 'ಜರ್ಮಾನಿಕ್' ಭಾಷೆಗಳು; ಪೋರ್ಚುಗೀಸ್, ಸ್ಪಾನಿಷ್, ಫ್ರೆಂಚ್, ಇಟಾಲಿಯನ್ ಮುಂತಾದ 'ರೊಮಾನ್ಸ್' ಭಾಷೆಗಳು; ರಷಿಯನ್, ಪೋಲಿಷ್ ಮುಂತಾದ 'ಸ್ಲಾವಿಕ್' ಭಾಷೆಗಳು; ವೆಲ್ಷ್, ಐರಿಷ್ ಮುಂತಾದ 'ಕೆಲ್ಟಿಕ್' ಭಾಷೆಗಳು; ಪರ್ಷಿಯನ್, ಆಫ್ಘನ್ ಮುಂತಾದ 'ಇರಾನಿಯನ್' ಭಾಷೆಗಳು; ಸಂಸ್ಕೃತ, ಹಿಂದಿ, ಉರ್ದು, ಬೆಂಗಾಲಿ, ಮರಾಠಿ, ಅಸ್ಸಾಮಿ, ಗುಜರಾತಿ, ಸಿಂಹಳಿ ಇತ್ಯಾದಿ 'ಇಂಡೊ-ಆರ್ಯನ್' ಭಾಷೆಗಳು; 'ಹಿಟ್ಟೈಟ್' ಭಾಷೆ—ಇವೆಲ್ಲವೂ ಸಮಾವೇಶಗೊಳ್ಳುತ್ತವೆ. **ಫಿನ್ನೋ—ಉಗ್ರಿಕ್ ಭಾಷಾವರ್ಗ:** ಫಿನ್ನಿಷ್ ಹಂಗೇರಿಯನ್ ಇತ್ಯಾದಿ. **ಅಲ್ಟೈಯಿಕ್ ಭಾಷಾವರ್ಗ:** ಟರ್ಕಿಷ್, ಮಂಗೋಲಿಯನ್ ಇತ್ಯಾದಿ. **ಬಾಸ್ಕ್ ಭಾಷಾವರ್ಗ:** ಫ್ರಾನ್ಸ್, ಸ್ಪೈಯಿನ್‌ಗಳ ಪಶ್ಚಿಮದಲ್ಲಿ

---

1 "By relationship of languages we mean, of course, resemblances that can be explained only on the assumption that the languages are divergent forms of a single older language"—BLOOMFIELD.

"Two languages are termed related when they both result from two different evolutions from a single language previously spoken"—MEILLET

ಕೆಲವು ಜನ ಆಡುವ ಭಾಷೆಗಳು. **ಆಫ್ರೋ-ಏಷಿಯಾಟಿಕ್ ಭಾಷಾವರ್ಗ :** ಇದರಲ್ಲಿ ಹೀಬ್ರೂ, ಅರೇಬಿಕ್ ಮುಂತಾದ 'ಸೆಮಿಟಿಕ್' ಭಾಷೆಗಳೂ, ಈಜಿಪ್ಷಿಯನ್, ಬರ್ಬರ್ (ಉತ್ತರ ಆಫ್ರಿಕ, ಸಹಾರಾಗಳಲ್ಲಿ ಆಡುವ ಭಾಷೆ) ಇತ್ಯಾದಿ 'ಹ್ಯಮಿಟಿಕ್' ಭಾಷೆಗಳೂ ಸಮಾವೇಶಗೊಳ್ಳುತ್ತವೆ. **ನೈಜರ್-ಕಾಂಗೊ ವರ್ಗ :** ಇದು ಆಫ್ರಿಕದ ಅತ್ಯಂತ ಪ್ರಮುಖವಾದ ಭಾಷಾವಂಶ. ಇದರಲ್ಲಿ ಗೋಲ್ಡ್‌ಕೋಸ್ಟ್, ಐವರಿಕೋಸ್ಟ್, ನೈಜೀರಿಯದ 'ಕ್ವ' ಶಾಖೆಯ ಭಾಷೆಗಳೂ, ದಕ್ಷಿಣ ಆಫ್ರಿಕದ ಸ್ವಹಿಲಿ, ಕೊಂಗೊ, ಲುಬ ಮುಂತಾದ ಬಂಟುಶಾಖೆಯ ಭಾಷೆಗಳೂ ಸೇರುತ್ತವೆ. **ಸೈನೋ-ಟಿಬೆಟನ್ ಭಾಷಾವರ್ಗ :** ಇದರಲ್ಲಿ 'ಟಿಬೆಟೊ-ಬರ್ಮನ್' ಶಾಖೆಯ ಭಾಷೆಗಳೂ ಚೈನೀಸ್ ಭಾಷೆಯೂ ಅದಕ್ಕೆ ಸಂಬಂಧಿಸಿದ ಇನ್ನು ಹಲವಾರು ಭಾಷೆಗಳೂ ಸೇರುತ್ತವೆ. **ದ್ರಾವಿಡ ಭಾಷಾವರ್ಗ :** ಇದರಲ್ಲಿ ತಮಿಳು, ಮಲೆಯಾಳ, ಕನ್ನಡ, ತೆಲುಗು ಎಂಬ ಗ್ರಾಂಥಿಕ ಭಾಷೆಗಳು (Cultivated Languages), ಬ್ರಾಹುಇ, ಗದಬ, ಗೊಂಡಿ, ಕೋಟ, ಕೊಡಗು, ಕೊಲಾಮಿ, ಕುರುಖ್, ಮಾಲ್ತೊ, ನಾಯಿಕಿ, ಪಾರ್ಜಿ, ತೊದ, ತುಳು ಮೊದಲಾದ ನಿಗ್ರಾಂಥಿಕ ಭಾಷೆಗಳೂ (Uncultivated Languages) ಸಮಾವೇಶ ಗೊಳ್ಳುತ್ತವೆ.[1] **ಮಲಯೊ-ಪಾಲಿನೇಷಿಯನ್ ಭಾಷಾವರ್ಗ :** ಮಲಯ, ಇಂಡೊನೇಷಿಯನ್, ಜಾಪಾನೀಸ್, ಪಾಲಿನೇಷಿಯನ್ ಇತ್ಯಾದಿ ಭಾಷೆಗಳು ಈ ವರ್ಗಕ್ಕೆ ಸೇರಿವೆ. ಹೀಗೆಯೇ **ಆಸ್ಟ್ರೇಲಿಯನ್ ಭಾಷಾವರ್ಗ, ಆಸ್ಟ್ರೋ-ಏಷಿಯಾಟಿಕ್ ಭಾಷಾವರ್ಗ** (ಮಧ್ಯಭಾರತದ ಪರ್ವತಗಳಲ್ಲಿ, ಅಸ್ಸಾಮಿನ ಗಿರಿಗಳಲ್ಲಿ ಆಡುವ ಸಾಂತಾಲಿ, ಖಸಿ, ನಿಕೋಬಾರ್‌ದ್ವೀಪದ ನಿಕೊಬಾರಿಸ್ ಇತ್ಯಾದಿ ಭಾಷೆಗಳು), **ಎಸ್ಕಿಮೊ-ಅಲೆಂಟ್ ಭಾಷಾವರ್ಗ** ಮುಂತಾದ ಹಲವು ವರ್ಗಗಳನ್ನು ಹೆಸರಿಸ ಬಹುದು.

ಒಟ್ಟಿನಲ್ಲಿ ವಾಂಶಿಕವರ್ಗೀಕರಣವು ಪ್ರಪಂಚದ ಭಾಷೆಗಳನ್ನು ಕೆಲವು ನಿರ್ದಿಷ್ಟ ವರ್ಗಗಳಾಗಿ ವಿಂಗಡಿಸಲು ಸಹಾಯವನ್ನು ಮಾಡುತ್ತದೆ. ಒಂದು ವರ್ಗದ ಬೇರೆಬೇರೆ ಭಾಷೆಗಳು ಬೇರೆಬೇರೆ ರಚನೆಗಳನ್ನು ಪಡೆದಿರಬಹುದು. ಆದರೆ ಅದನ್ನು ಇಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ.

---

[1] ವ್ಯವಹಾರದಲ್ಲಿ ಮಾತ್ರವಲ್ಲದೆ, ಲಿಪಿಯಿದ್ದು ಗ್ರಂಥರೂಪವಾದ ಬರವಣಿಗೆಯನ್ನೂ ಹೊಂದಿರುವ ಭಾಷೆಗಳೇ ಗ್ರಾಂಥಿಕ ಭಾಷೆಗಳು. ಕೇವಲ ವ್ಯವಹಾರದಲ್ಲಿದ್ದು ಲಿಪಿಯಾಗಲಿ ಲಿಖಿತ ಬರಹವಾಗಲೀ ಇಲ್ಲದಿರುವ ಭಾಷೆಗಳೇ ನಿಗ್ರಾಂಥಿಕ ಭಾಷೆಗಳು. ಭಾಷೆಗಳನ್ನು ಮೃತಭಾಷೆಗಳೆಂದು (Dead Languages), ಜೀವಂತ ಭಾಷೆಗಳೆಂದು (Living Languages) ವಿಭಾಗಿಸುವುದುಂಟು. ಒಂದಾನೊಂದು ಕಾಲದಲ್ಲಿ ಜನರ ಬಾಯಲ್ಲಿ ಜೀವಂತವಾಗಿದ್ದು ಈಗ ಕೇವಲ ಗ್ರಂಥಸ್ಥವಾಗಿರುವ ಭಾಷೆಗಳೇ ಮೃತಭಾಷೆಗಳು. ಉದಾಹರಣೆಗೆ—ಸಂಸ್ಕೃತ, ಲ್ಯಾಟಿನ್. ಈಗಲೂ ಜನರ ಬಾಯಲ್ಲಿ ನುಡಿಯುತ್ತಿರುವ, ವ್ಯವಹಾರದಲ್ಲಿರುವ ಭಾಷೆಗಳೇ ಜೀವಂತಭಾಷೆಗಳು. ಉದಾಹರಣೆಗೆ—ಕನ್ನಡ, ತುಳು, ಇಂಗ್ಲಿಷ್, ರಷಿಯನ್ ಇತ್ಯಾದಿ.

# 4 ಭಾಷಾವ್ಯತ್ಯಾಸ

ಭಾಷೆಯೆಂಬುದು ನಿಂತ ನೀರಲ್ಲ, ಹರಿಯುವ ಹೊಳೆಯಂತೆ. ನಿರಂತರವಾಗಿ ವ್ಯತ್ಯಾಸಗೊಳ್ಳುವುದೇ ಅದರ ಪ್ರಮುಖ ಲಕ್ಷಣ. ಇದನ್ನು ಎಲ್ಲ ಜೀವಂತ ಭಾಷೆಗಳಲ್ಲೂ ಗಮನಿಸಬಹುದು ('ಮೃತಭಾಷೆ'ಗಳ ವಿಷಯ ಬೇರೆ. ಅವು ವ್ಯತ್ಯಾಸಗೊಳ್ಳುವುದೇ ಇಲ್ಲ). ಇದನ್ನೇ 'ಭಾಷಾವ್ಯತ್ಯಾಸ' ಎಂದು ಕರೆದಿರುವುದು.

ಭಾಷಾವ್ಯತ್ಯಾಸಗಳನ್ನು ತೋರಿಸಲು ಯಾವುದಾದರೂ ಭಾಷೆಯ ಎರಡು ಅವಸ್ಥೆಗಳನ್ನು ಹೋಲಿಸಿದರೆ ಸಾಕು. ಹಳೆಯ ಇಂಗ್ಲಿಷಿಗೂ ಹೊಸ ಇಂಗ್ಲಿಷಿಗೂ ಹಲವು ವ್ಯತ್ಯಾಸಗಳಿವೆ. ವೈದಿಕ ಸಂಸ್ಕೃತಕ್ಕೂ ಲೌಕಿಕ ಸಂಸ್ಕೃತಕ್ಕೂ ಬೇಕಾದಷ್ಟು ವ್ಯತ್ಯಾಸಗಳಿವೆ. ಪರ್ಷಿಯನ್ನರ ಭಾಷೆಯನ್ನು ತೆಗೆದುಕೊಂಡರೆ ಡೇರಿಯಸ್ಸನ ಶಾಸನಗಳ ಭಾಷೆಗೂ, ಪಾರ್ಸಿಗಳ ಪವಿತ್ರಗ್ರಂಥಗಳ ಭಾಷೆಯಾದ ಅವೆಸ್ತಾಕ್ಕೂ, ಮುಂದೆ ಬಂದ ವ್ಯಾಖ್ಯಾನಗಳ ಭಾಷೆ ಪಹ್ಲವಿಗೂ, ಫಿರ್ದೂಸಿ ಮುಂತಾದ ಕವಿಗಳ ಹಳೆಯ ಪರ್ಷಿಯನ್ ಭಾಷೆಗೂ ಗಣನೀಯ ವ್ಯತ್ಯಾಸಗಳಿವೆ. ಪರ್ಷಿಯನ್ ಭಾಷೆಯ ಬೇರೆ ಬೇರೆ ಘಟ್ಟಗಳು ಇವು. ಮರಾಠಿ ಭಾಷೆಯನ್ನು ತೆಗೆದುಕೊಂಡರೆ ಹಳೆಯ ಮರಾಠಿ→ಜ್ಞಾನೇಶ್ವರನ ಮರಾಠಿ→ಏಕನಾಥನ ಮರಾಠಿ→ಆಧುನಿಕ ಮರಾಠಿ ಎಂಬ ಘಟ್ಟಗಳನ್ನು ಕಾಣಬಹುದು. ಕನ್ನಡ ಭಾಷೆಯೂ ಅದರ ಮೊಟ್ಟಮೊದಲನೆಯ ಬರಹವಾದ ಹಲ್ಮಿಡಿ ಶಾಸನದಿಂದ (ಸು. ಕ್ರಿ.ಶ. 450) ಇಲ್ಲಿನವರೆಗೆ ಅನೇಕ ವ್ಯತ್ಯಾಸಗಳನ್ನು ಪಡೆದು ವಿಕಾಸವಾಗಿದೆ. ನಾಲ್ಕು ಘಟ್ಟಗಳು—ಪೂರ್ವ ಹಳಗನ್ನಡ (ಸು. 450-800), ಹಳಗನ್ನಡ (ಸು. 800–1050), ನಡುಗನ್ನಡ (ಸು. 1050–1800), ಹೊಸಗನ್ನಡ (ಸು. 1800ರಿಂದ ಈಚೆಗೆ). ಹತ್ತನೇ ಶತಮಾನದ ಪಂಪ ಅಕಸ್ಮಾತ್ ಈ ದಿನ ತನ್ನ ಸಮಾಧಿಯಿಂದ ಎದ್ದುಬಂದು ಕನ್ನಡದ ಒಂದು ದಿನಪತ್ರಿಕೆಯನ್ನು ಓದಿದನೆಂದರೆ, ಅವನು ಕನ್ನಡದ ಅಗ್ರಕವಿಯೇ ಆಗಿರಬಹುದು, ತಬ್ಬಿಬ್ಬಾಗುತ್ತಾನೆ. ಕನ್ನಡ ಅಷ್ಟು ದೊಡ್ಡ ಪ್ರಮಾಣದಲ್ಲಿ ವ್ಯತ್ಯಾಸಗೊಂಡಿದೆ. ಹಾಗೆಯೇ ಈ ಕಾಲದ ಒಬ್ಬ ವ್ಯಕ್ತಿ ಪಂಪನ ಕೃತಿಗಳನ್ನೋದಿ ಅರ್ಥಮಾಡಿಕೊಳ್ಳಬೇಕಾದರೆ ವಿಶೇಷ ಶ್ರಮಪಡಬೇಕಾಗುತ್ತದೆ.

ಭಾಷೆಗಳು ಏಕೆ ವ್ಯತ್ಯಾಸವಾಗುತ್ತವೆ? ಈ ಪ್ರಶ್ನೆಗೆ ಉತ್ತರಿಸುವುದು ಸ್ವಲ್ಪ ಕಷ್ಟವೇ. ಭಾಷೆಯನ್ನು ಬಳಸುವವರು ವ್ಯಕ್ತಿಗಳು. ನಮ್ಮ ಅನುಭವಕ್ಕೆ ಬಂದಿರುವುದನ್ನೇ ಗಮನಿಸಿದರೆ ನಾವು ಒಂದು ಸಾರಿ ಮಾತನಾಡಿದಂತೆ ಮತ್ತೊಮ್ಮೆ ಮಾತನಾಡುವುದಿಲ್ಲ, ಮಾತನಾಡಲು ಸಾಧ್ಯವೂ ಇಲ್ಲ. ನಮ್ಮ ಜೀವನದಲ್ಲೇ ನಮ್ಮ ಅನುಭವಗಳು, ಸಂಸ್ಕಾರಗಳು. ಸಂಪರ್ಕಗಳು ಬೇರೆಬೇರೆಯಾದಂತೆ ನಮ್ಮ ಮಾತೂ ಬೇರೆಯಾಗುತ್ತಾ ಹೋಗುತ್ತದೆ. ದಿನದಿನವೂ ನಾವು ಹೊಸರೀತಿಯ ಉಚ್ಚಾರಗಳನ್ನು ಹೊಸಪದಗಳನ್ನು ಕಲಿಯುತ್ತಾ ಹೋಗುತ್ತೇವೆ. ಹೀಗಿರುವಾಗ ಸಾವಿರಾರು ಜನ ಬಳಸುವ ಭಾಷೆಯೂ ವ್ಯತ್ಯಾಸಗೊಳ್ಳುವುದು ಅನಿವಾರ್ಯ. ಭಾಷೆಗೆ ಸ್ವತಂತ್ರ ಅಸ್ತಿತ್ವವಿಲ್ಲ. ಅದು ಮನುಷ್ಯನನ್ನು ಸಂಪೂರ್ಣವಾಗಿ ಅವಲಂಬಿಸಿದೆ. (ಇದು ಆಡುನುಡಿಯನ್ನು ಗಮನದಲ್ಲಿಟ್ಟುಕೊಂಡು ಹೇಳಿದ ಮಾತು.)* ಮನುಷ್ಯ ಅಥವಾ ಮನುಷ್ಯರು ವ್ಯತ್ಯಾಸಗೊಂಡಂತೆ ಅದೂ ವ್ಯತ್ಯಾಸಗೊಳ್ಳುತ್ತದೆ.

ಭಾಷಾವ್ಯತ್ಯಾಸಕ್ಕೆ ಕೆಲವು ಕಾರಣಗಳನ್ನು ಕೊಡಬಹುದು. ಮೊದಲನೆಯದು ಸೌಲಭ್ಯಾಕಾಂಕ್ಷೆ. ಭಾಷೆಯಲ್ಲಿ ನಡೆಯುವ ಅನೇಕ ವ್ಯತ್ಯಾಸಗಳಿಗೆ ಇದು ಪ್ರಧಾನ ಕಾರಣವಾಗಿದೆ. ಇತರ ಕ್ಷೇತ್ರಗಳಲ್ಲಿನಂತೆಯೇ ಭಾಷಾಕ್ಷೇತ್ರದಲ್ಲೂ ಮನುಷ್ಯ ಕ್ಲೇಶದಾಯಕವಾದುದನ್ನು ಬಿಟ್ಟುಬಿಡುತ್ತಾನೆ. ಇಲ್ಲವೇ ಅದನ್ನು ಸುಲಭವಾಗುವಂತೆ ಪರಿವರ್ತಿಸುತ್ತಾನೆ. ಇಂಗ್ಲಿಷಿನ 'Knight' ಎಂಬ ಪದದಲ್ಲಿ ಮೊದಲು kn—ಎಂಬ ವ್ಯಂಜನಗಳೆರಡನ್ನೂ ಕೂಡಿಸಿ ಉಚ್ಚರಿಸುತ್ತಿದ್ದರು. ಆದರೆ ಆ ಉಚ್ಚಾರವು ಕೆಲವರಿಗೆ ಕಷ್ಟವಾಗಿ ಕಂಡುಬಂದು ಅವರ ಉಚ್ಚಾರಣೆಯಲ್ಲಿ [k—]ವು ಬಿದ್ದುಹೋಗಿರಬೇಕು. ಕ್ರಮೇಣ [k]ದ ಉಚ್ಚಾರಣೆಯಿಲ್ಲದುದೇ ನಿಯಮವಾಯಿತು. ಕನ್ನಡದಲ್ಲಿಯೂ ಒಂದು ಕಾಲದಲ್ಲಿದ್ದ [ೞ] ಎಂಬ ಧ್ವನಿಯು ಕಾಲಕ್ರಮೇಣ ಮರೆಯಾಗಿ ಹೋಗಲು ಅದರ ಉಚ್ಚಾರಣೆಯಲ್ಲಿದ್ದ ಕ್ಲೇಶವೇ ಕಾರಣವೆಂದು ಕಾಣುತ್ತದೆ. [ಱ] ಎಂಬ ಧ್ವನಿಯ ವಿಷಯದಲ್ಲೂ ಇದೇ ಮಾತನ್ನು ಹೇಳಬಹುದು. [ಗಱ್ದೆ] ಎಂಬುದು [ಗರ್ದೆ] ಆಗಿ [ಗದ್ದೆ] ಎಂದಾಗಲು ಇದೇ ಕಾರಣ. ಗರ್ದೆ → ಗದ್ದೆ—'ರ್ದೆ' ಎಂಬಲ್ಲಿನ ಎರಡು ವ್ಯಂಜನಗಳನ್ನು ಉಚ್ಚರಿಸಲು ನಮ್ಮ ಧ್ವನ್ಯಂಗಗಳು ಎರಡು ಭಿನ್ನರೀತಿಯ ಪ್ರಯತ್ನಗಳನ್ನು ಮಾಡಬೇಕಾಗುತ್ತದೆ. 'ದ್ದೆ' ಎಂಬ ಸಜಾತೀಯ ವ್ಯಂಜನಗಳ ಉಚ್ಚಾರದಲ್ಲಿ ಆ ರೀತಿಯ ತೊಂದರೆಯಿಲ್ಲ. ನಮ್ಮ ಮಾತಿನಲ್ಲಿಯೇ ಹೋಗುತ್ತೇನೆ ಎಂಬುದು ಹೋಗ್ತೇನೆ ಎಂದಾಗಿ, ಕೆಲವರ ಬಾಯಲ್ಲಿ ಹೋತೇನೆ, ಹೋತೆ ಎಂದೂ

---

* ಭಾಷಾವಿಜ್ಞಾನದಲ್ಲಿ ಭಾಷೆ ಎಂದರೆ ಆಡುನುಡಿಯಾದ ಭಾಷೆಯೇ. ಲಿಪಿಬದ್ಧವಾದ ಭಾಷೆ ಗೌಣ. ಅದು ಆಡುನುಡಿಯ ರೂಪಗಳನ್ನು ಹಿಡಿದಿಡುವ ಪ್ರಯತ್ನವೇ ಹೊರತು ಅದೇ ಭಾಷೆಯಲ್ಲ. ಲಿಪಿಬದ್ಧವಾದ ವ್ಯಾಕರಣಶುದ್ಧವಾದ ಭಾಷೆಯೇ ನಿಜವಾದ ಭಾಷೆ. ಜನರ ಬಾಯಲ್ಲಿ ಅದು ವಿರೂಪಗೊಳ್ಳುತ್ತದೆ ಎಂದು ಪ್ರಾಚೀನರು ನಂಬಿದ್ದರು. ಆಧುನಿಕರ ಭಾವನೆ ತದ್ವಿರುದ್ಧವಾಗಿದೆ.

ಆಗಬಹುದು. 'ಮಲಗಿಕೋ' ಎಂಬುದು 'ಮಕ್ಕೊ' ಎಂದೂ, 'ತೊಳೆದುಕೋ' ಎಂಬುದು 'ತೊಕ್ಕೊ' ಎಂದೂ ಆಗುವುದು ಇದಕ್ಕೆ. ಇಂತಹ ಸಾವಿರಾರು ನಿದರ್ಶನಗಳನ್ನು ಕೊಡಬಹುದು. ಕೆಲವು ಸಾರಿ ನೆನಪಿಟ್ಟುಕೊಳ್ಳಲು ಕಷ್ಟವಾಗುವಂತಹ ಪದಗಳನ್ನು ಬಿಟ್ಟು ಸುಲಭವಾಗಿ ನೆನಪಿನಲ್ಲಿ ನಿಲ್ಲುವ ಪದಗಳನ್ನು ಬಳಸುತ್ತೇವೆ. ಇಂದ್ರ, ಅಗ್ನಿ, ಯಮ, ವರುಣ ಮುಂತಾದ ದಿಕ್ಕುಗಳ ಹೆಸರುಗಳು ಹೊಸಗನ್ನಡ ಭಾಷೆಯಲ್ಲಿ ಅತಿ ವಿರಳವಾಗಿರುವುದನ್ನು ನೋಡುತ್ತೇವೆ. 'ಆರ್ಯರು ವಾಯುವ್ಯದಿಂದ ಬಂದರು' ಎಂದು ಬಾಲ್ಯದಲ್ಲಿ ಚರಿತ್ರೆಯ ಗ್ರಂಥಗಳಲ್ಲಿ ಓದಿದ್ದು ನೆನಪಿರುವುದರಿಂದ ನಮ್ಮಲ್ಲಿ ಹಲವರಿಗೆ ವಾಯುವ್ಯವು ಪಶ್ಚಿಮ ಮತ್ತು ಉತ್ತರಗಳ ಮಧ್ಯದ ದಿಕ್ಕನ್ನು ಅದು ಸೂಚಿಸುತ್ತದೆ ಎಂಬುದು ಗೊತ್ತು. ನಮ್ಮಲ್ಲಿ ಹಲವರು ಇಂಗ್ಲಿಷಿನ ಪದ್ಧತಿಯನ್ನನುಸರಿಸಿ ಉತ್ತರ-ಪೂರ್ವ, ದಕ್ಷಿಣ-ಪಶ್ಚಿಮ ಎಂದು ಮುಂತಾಗಿ ಬಳಸಿದ್ದೇವೆ, ಬಳಸುತ್ತಿದ್ದೇವೆ. ಹಾಗೆಯೇ [book] ಎಂಬ ಪದದ ಬಹುವಚನ ರೂಪ [beek] ಎಂದೂ, [cow] ಎಂಬ ಪದದ ಬಹುವಚನರೂಪ [kine]ಎಂದೂ ಆಗಬೇಕು. ಆದರೆ ಈ ಬಹುವಚನದ ರೂಪಗಳನ್ನು ನೆನಪಿಡಲು ಸ್ವಲ್ಪ ಶ್ರಮ ಬೇಕು. ಆದಕ್ಕಾಗಿ ಇತರ ನೂರಾರು ರೂಪಗಳ ಸಾದೃಶ್ಯದಿಂದ books, cows ಎಂಬ ರೂಪಗಳನ್ನು ಮಾಡಿಕೊಂಡರು. ಈ ಸೌಲಭ್ಯಾಕಾಂಕ್ಷೆಯ ಫಲವಾಗಿ ಎಷ್ಟೋ ಸ್ವತಂತ್ರ ಪದಗಳು ಪ್ರತ್ಯಯಗಳಾಗಿ ಪರಿಣಮಿಸುವುದೂ ಉಂಟು. ಉದಾ : like >—ly, shape >ship, did >—d (ಬಹುವಚನ ಪ್ರತ್ಯಯ), full >—ful. ಹೀಗೆ ಸೌಲಭ್ಯಾಕಾಂಕ್ಷೆಯು ಭಾಷಾವ್ಯತ್ಯಾಸದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಸೌಲಭ್ಯಾಕಾಂಕ್ಷೆಯನ್ನು ಮಿತವ್ಯಯಾಸಕ್ತಿಯೆಂದೂ (Economy) ಜಡಪ್ರವೃತ್ತಿಯೆಂದೂ (Laziness) ಬೇಕಾದರೆ ಕರೆಯಬಹುದು.

ಎರಡನೆಯ ಕಾರಣ—ಅನ್ಯಭಾಷಾಸಂಸರ್ಗ. ಯಾವ ಮನುಷ್ಯನೂ ಇತರರಿಂದ ಪ್ರತ್ಯೇಕವಾಗಿ ಬಾಳಲು ಇಚ್ಛಿಸುವುದಿಲ್ಲ, ಹೀಗೆ ಬಾಳುವುದು ಸಾಧ್ಯವೂ ಇಲ್ಲ. ಹಾಗೆಯೇ ಒಂದು ಜನಾಂಗವೂ ಕೂಡ. ಅದು ತನ್ನ ಸುತ್ತಮುತ್ತ ಇರುವ ಬೇರೆ ಬೇರೆ ಭಾಷೆಗಳನ್ನಾಡುವ ಜನರ ಜೊತೆಯಲ್ಲಿ ಒಂದಲ್ಲ ಒಂದು ರೀತಿಯ ವ್ಯವಹಾರವನ್ನಿಟ್ಟುಕೊಂಡಿರಬೇಕಾಗುತ್ತದೆ. ಅಂತಹ ಸಮಯದಲ್ಲಿ ಆ ಭಾಷೆಗಳ ಪ್ರಭಾವವು ಈ ಭಾಷೆಯ ಮೇಲಾಗುವುದು ಅನಿವಾರ್ಯ. ಸಾಮಾನ್ಯವಾಗಿ ಈ ಪ್ರಭಾವವು ಸಾಂಸ್ಕೃತಿಕ ಪದಕೋಶಕ್ಕೆ ಸೀಮಿತವಾಗಿರುತ್ತದೆ. ಒಂದು ಭಾಷೆಯು ಅನ್ಯಭಾಷೆಗಳಿಂದ ನಿತ್ಯೋಪಯೋಗಿ ಪದಗಳನ್ನು ಸ್ವೀಕರಿಸುವುದು ಕಡಮೆ. (ಆದರೂ ಇದಕ್ಕೆ ಅಪವಾದಗಳಿಲ್ಲದಿಲ್ಲ.) ಒಂದು ಭಾಷೆಯ ಧ್ವನಿವ್ಯವಸ್ಥೆಯ (Phonology) ಮೇಲೂ ವ್ಯಾಕರಣದ ಮೇಲೂ ಅನ್ಯಭಾಷೆಗಳ ಪ್ರಭಾವವು ಆಗುವುದೇ ಇಲ್ಲವೆನ್ನಬಹುದು. (ಇದಕ್ಕೂ ವಿರಳ ಅಪವಾದಗಳುಂಟು.) ಸಂಸ್ಕೃತದಿಂದ ಕನ್ನಡವು ಸಾವಿರಾರು ಪದಗಳನ್ನು ತೆಗೆದುಕೊಂಡಿದ್ದರೂ ತನ್ನ ವ್ಯಾಕರಣ ವಿಶೇಷಗಳನ್ನು ಮಾತ್ರ ಮಾರ್ಪಡಿಸಿಕೊಂಡಿಲ್ಲ. ಸಂಸ್ಕೃತದಲ್ಲಿನಂತೆ ಕನ್ನಡದಲ್ಲೂ ದ್ವಿವಚನವಿದೆ ಎಂದು ಕೆಲವರು ವೈಯಾಕರಣರು ಹೇಳಿದ್ದರೂ ಅದು

ನಿರಾಧಾರವಾದುದು ಎಂದು ಮತ್ತೆ ಹೇಳಬೇಕಿಲ್ಲ. ಆಧುನಿಕ ಕಾಲದಲ್ಲಿ ಕನ್ನಡವು ಇಂಗ್ಲಿಷಿನಿಂದ ಅಸಂಖ್ಯಾತ ಪದಗಳನ್ನು ಸ್ವೀಕರಿಸಿದ್ದರೂ ಇಂಗ್ಲಿಷಿನ ವಾಕ್ಯರಚನಾ ವಿಧಾನವೇ ಬೇರೆ, ಕನ್ನಡ ವಾಕ್ಯರಚನೆಯ ತತ್ವವೇ ಬೇರೆ. ಆದರೂ ಇಂಗ್ಲಿಷಿನ ವಾಕ್ಯಗಳ ಮಾದರಿಯನ್ನನುಕರಿಸಿ ಕನ್ನಡದಲ್ಲಿ ರಚನೆಯಾಗುವುದುಂಟು. ಸಂಸ್ಕೃತದ ಮೂರ್ಧನ್ಯಗಳು, (ಅಥವಾ ಪರಿವೇಷ್ಟಿತಗಳು—Retroflex sounds) ಎಂದರೆ ಟ ವರ್ಗದ ಧ್ವನಿಗಳು ದ್ರಾವಿಡ ಭಾಷೆಗಳಿಂದ ಸ್ವೀಕೃತವಾದುವು ಎಂದು ವಿದ್ವಾಂಸರು ಹೇಳುತ್ತಾರೆ. ಒಂದು ಭಾಷೆ ತನ್ನ ಸುತ್ತಮುತ್ತಣ ಭಾಷೆಗಳಿಂದ ಅಥವಾ ತಾನು ಸಂಪರ್ಕವನ್ನು ಪಡೆದ ಭಾಷೆಗಳಿಂದ ಎಷ್ಟು ವಿಧವಾಗಿ ಸ್ವೀಕರಿಸುತ್ತದೆ ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ನೋಡುತ್ತೇವೆ. ಒಟ್ಟಿನಲ್ಲಿ ಭಾಷೆಯಲ್ಲಿ ವ್ಯತ್ಯಾಸಗಳು ನಡೆಯಲು ಪರಭಾಷಾಸಂಸರ್ಗವೂ ಪ್ರಮುಖ ಕಾರಣಗಳಲ್ಲೊಂದು ಎಂಬುದನ್ನು ನೆನಪಿನಲ್ಲಿಟ್ಟುಕೊಂಡರೆ ಸಾಕು.

ಸಮಾಜದಲ್ಲಿ ಬಹು ಪ್ರಭಾವಶಾಲಿಗಳಾದ ವ್ಯಕ್ತಿಗಳಿಂದಲೂ ಭಾಷೆ ವ್ಯತ್ಯಾಸಗೊಳ್ಳುವುದುಂಟು. ಆ ವ್ಯಕ್ತಿ ಒಬ್ಬ ಕವಿಯಾಗಿರಬಹುದು, ರಾಜಕಾರಣಿಯಾಗಿರಬಹುದು, ತತ್ವಜ್ಞಾನಿಯಾಗಿರಬಹುದು, ಸಮಾಜಸುಧಾರಕನಾಗಿರಬಹುದು. ಅವನ ಎಲ್ಲ ಚಲನವಲನಗಳನ್ನು ಅವನ ಸುತ್ತಮುತ್ತಣ ಜನರು ಗಮನಿಸುತ್ತಿರುತ್ತಾರೆ, ಹಾಗೆಯೇ ಅವನ ಮಾತಿನ ವಿಧಾನವನ್ನೂ ಉಚ್ಚಾರಣೆಯನ್ನೂ ಆಂಗಿಕಸಂಜ್ಞೆಗಳನ್ನೂ ಅನುಕರಿಸಲು ಪ್ರಯತ್ನಿಸುತ್ತಾರೆ. ಅವನು ಒಂದು ಪದವನ್ನು ತಪ್ಪಾಗಿ ಉಚ್ಚರಿಸುತ್ತಿದ್ದರೆ ಒಮ್ಮೊಮ್ಮೆ ಆ ತಪ್ಪು ಉಚ್ಚಾರಣೆಯೇ ಕ್ರಮೇಣ ನಿಯಮವಾಗಿ ಪರಿಣಮಿಸುವುದುಂಟು. ಅವನು ಬಳಸಿದ ಹೊಸಪದಗಳು ತಕ್ಷಣವೇ ಪ್ರಚಾರವಾಗುವುದುಂಟು. ಗಾಂಧೀಜಿಯವರು ತಾವು ಒಮ್ಮೆ ಬಳಸಿದ "Himalayan blunders" ಎಂಬ ಉಕ್ತಿ ಎಷ್ಟು ಜನಪ್ರಿಯವಾಯಿತು ಎಂಬುದನ್ನು ಒಂದು ಕಡೆ ಹೇಳಿಕೊಂಡಿದ್ದಾರೆ. ಅವರಿಂದಲೇ 'ಸತ್ಯಾಗ್ರಹ', 'ಹರಿಜನ' ಎಂಬ ಪದಗಳು ಪ್ರಚಾರಕ್ಕೆ ಬಂದದ್ದು. ("ಸತ್ಯಾಗ್ರಹ" ಪದವನ್ನು ಅವರಿಗೆ ಬೇರೆಯವರೊಬ್ಬರು ಸೂಚಿಸಿದರು) ಕವಿಗಳೂ ವೃತ್ತಪತ್ರಿಕೆಯವರೂ ಭಾಷಾವ್ಯತ್ಯಾಸದಲ್ಲಿ ಪ್ರಮುಖಪಾತ್ರವನ್ನು ವಹಿಸುತ್ತಾರೆ. ಅವರು ಹೊಸದಾಗಿ ಕಟ್ಟಿದ ಅನೇಕ ಪದಗಳೂ, ಪದಪುಂಜಗಳೂ, ಅಥವಾ ಹೊಸದಾಗಿ ಬಳಸಿದ ಪ್ರಾಚೀನ ಪದಗಳೂ ಮತ್ತೆ ಭಾಷೆಯಲ್ಲಿ ಬಳಕೆಗೆ ಬರುತ್ತವೆ. ಅದರಲ್ಲೂ ವೃತ್ತಪತ್ರಿಕೆಗಳು. 'ನಿಸ್ಸೈನೀಕರಣ,' 'ನಿಶ್ಯಸ್ತ್ರೀಕರಣ,' 'ಶೀತಲಯುದ್ಧ,' 'ಶೀತಲಸಮರ', 'ಕೈಗಾರಿಕಾ ಬೆಳವಣಿಗೆ,' 'ಅಣುಬಾಂಬು,' 'ಬದಲಿ ಹೃದಯ' ಇತ್ಯಾದಿ ನೂರಾರು ಪದಗಳು ವೃತ್ತಪತ್ರಿಕೆಗಳ ಮೂಲಕ ಬಳಕೆಗೆ ಬಂದಿವೆ. ಇಂಗ್ಲಿಷಿನಲ್ಲಿ ಬರುವ ವಾರ್ತೆಯನ್ನು ಆ ಕ್ಷಣದಲ್ಲೇ ಕನ್ನಡಕ್ಕೆ ಅನುವಾದಿಸಿ ಹಾಗೆಯೇ ಅಚ್ಚಿಗೆ ಕಳುಹಿಸಿಕೊಡಬೇಕು. ಆ ಕ್ಷಣಕ್ಕೆ ಹೊಳೆದ ಯಾವುದೋ ಉಕ್ತಿಯನ್ನು ಅನುವಾದದಲ್ಲಿ ಸೇರಿಸಬೇಕಾಗುತ್ತದೆ. ಈ ಉಕ್ತಿಗಳು ಮುಂದೆ ಪ್ರಚಾರಕ್ಕೆ ಬಂದುಬಿಡುತ್ತವೆ.

ಒಂದು ಅಂಶವನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು — ಭಾಷೆಯಲ್ಲಿ ನಡೆಯುವ ಯಾವುದೇ ವ್ಯತ್ಯಾಸವು ಸಾಮಾನ್ಯವಾಗಿ ಮೊದಲು ಒಬ್ಬ ವ್ಯಕ್ತಿಯಿಂದ ಆರಂಭವಾಗಿ, ಅದಕ್ಕೆ ಯೋಗ್ಯತೆ ಅದೃಷ್ಟಗಳಿದ್ದು ಪ್ರಚಾರ ಸಿಕ್ಕಿದ್ದರೆ ಭಾಷೆಯಲ್ಲಿ ಹರಡುತ್ತದೆ. ಆದರೆ ಆ ವ್ಯಕ್ತಿ ಯಾರು ಎಂಬುದು ಬಹುಪಾಲು ಸಂದರ್ಭಗಳಲ್ಲಿ ಗೊತ್ತಾಗುವುದಿಲ್ಲ. 'Tatar' ಎಂಬ ಜನಾಂಗಕ್ಕೆ 'Tartar' ಎಂಬ ಹೆಸರು ಬರಲು ಫ್ರಾನ್ಸಿನ ದೊರೆಯೊಬ್ಬ ಕಾರಣನೆಂದು ಹೇಳುತ್ತಾರೆ. ಕನ್ನಡದ ಇತಿಹಾಸದಲ್ಲಿ ಒಮ್ಮೆ 'ಪ'ಕಾರವು 'ಹ'ಕಾರವಾಗಿ ಪರಿಣಮಿಸಿತು. ಈ ಧ್ವನಿ ವ್ಯತ್ಯಾಸವು ಯಾವನೋ ಒಬ್ಬ ವ್ಯಕ್ತಿಯ ಯಾವುದೋ ಒಂದು ಪದದಲ್ಲಿ ಒಮ್ಮೆ ಕಾಣಿಸಿಕೊಂಡಿರಬೇಕು. ಎಂದು, ಯಾವ ವ್ಯಕ್ತಿ ಯಾವ ಪದ ಎನ್ನುವ ಪ್ರಶ್ನೆಗಳು ಮಾತ್ರ ಪ್ರಶ್ನೆಗಳಾಗಿಯೇ ಉಳಿಯುತ್ತವೆ.

ಭಾಷಾವ್ಯತ್ಯಾಸಗಳಿಗೆ ಶಿಷ್ಟಭಾಷೆಯೂ ಸಹಾಯವನ್ನು ಮಾಡುತ್ತದೆ. ಯಾವುದೇ ಭಾಷೆಯನ್ನು ತೆಗೆದುಕೊಂಡರೂ ವಿದ್ಯಾವಂತರ ಭಾಷೆಗೂ ಹಳ್ಳಿಯ ಅವಿದ್ಯಾವಂತರ ಭಾಷೆಗೂ ದೊಡ್ಡ ಅಂತರವಿರುತ್ತದೆ. ವಿದ್ಯಾವಂತರ ಭಾಷೆ ಬರಹದ ಭಾಷೆಗೆ ಹೆಚ್ಚು ಸಮೀಪವಾಗಿರುತ್ತದೆ. ಅವರು ತಮ್ಮ ಭಾಷೆಯನ್ನು ಹೆಚ್ಚು ಅಭಿಮಾನದಿಂದ ನೋಡುವಂತೆ ಹಳ್ಳಿಯವರ ಭಾಷೆಯನ್ನು ಅಷ್ಟೇ ತಿರಸ್ಕಾರದಿಂದ ಕಾಣುತ್ತಾರೆ. ಅವಿದ್ಯಾವಂತರಿಗೂ ತಮ್ಮ ಭಾಷೆ ಅಷ್ಟು ಉತ್ಕೃಷ್ಟವಲ್ಲವೆಂಬ ಭಾವನೆ ಇರುತ್ತದೆ. ಆದರಿಂದಾಗಿ ಅವರ ಪದಕೋಶದಲ್ಲಿ ಉಚ್ಚಾರಣೆಯಲ್ಲಿ ಹಲವು ವ್ಯತ್ಯಾಸಗಳಾಗುತ್ತವೆ. ಹಳ್ಳಿಯವರು ಪಟ್ಟಣಿಗರೊಡನೆ ಅಥವಾ ವಿದ್ಯಾವಂತರೊಡನೆ ಮಾತನಾಡುವಾಗ ಹಲವು ಪದಗಳನ್ನು ಬೇಕೆಂದೇ ತಮ್ಮ ಮಾತಿನಲ್ಲಿ ಕೈಬಿಡುತ್ತಾರೆ. ಅಂತಹ ಪದಗಳು ಕ್ರಮೇಣ ಅವರ ಉಪಭಾಷೆಯಿಂದ (Dialect) ಮಾಯವಾಗುವ ಸಂಭವವಿರುತ್ತದೆ. ಉದಾಹರಣೆಗೆ ಮೈಸೂರು ನಗರದ ಸುತ್ತಮುತ್ತಣ ಭಾಷೆಯನ್ನಾಡುವ ವಿದ್ಯಾವಂತರ ಮಾತಿನಲ್ಲಿ 'ಒಸಿ' ಎಂಬ ಮಾತು ಅಷ್ಟಾಗಿ ಕೇಳಿಬರುವುದಿಲ್ಲ.[1] ಅವಿದ್ಯಾವಂತರು ಇನ್ನೂ ಆ ಪದವನ್ನು ಬಳಸುತ್ತಿದ್ದಾರೆ. ಕ್ರಮೇಣ ಅದೂ ನಿಂತುಹೋಗಬಹುದು.

ಅನೇಕ ಪದಗಳ ಅರ್ಥವನ್ನು ಸರಿಯಾಗಿ ಗ್ರಹಿಸದಿದ್ದುದರ ಫಲವಾಗಿ ಭಾಷೆಯಲ್ಲಿ ಕೆಲವು ವ್ಯತ್ಯಾಸಗಳಾಗುವುದುಂಟು. ಇದಕ್ಕೆ ಅತ್ಯುತ್ತಮ ಉದಾಹರಣೆ ಸಂಸ್ಕೃತದ 'ಅಸುರ' ಎಂಬ ಪದ. 'ಅಸುರ' ಎಂದರೆ ಮೂಲತಃ ಅಸು ಅಥವಾ ಪ್ರಾಣಕ್ಕೆ ಒಡೆಯನಾದ ದೇವತೆ ಎಂದರ್ಥ. ಅದರ ಆರಂಭದ ಅ— ಎಂಬುದು ನಿಷೇಧಸೂಚಕ ಪೂರ್ವಪ್ರತ್ಯಯ ಎಂದು ತಪ್ಪಾಗಿ ಭಾವಿಸಿ 'ಸುರ' ಎಂಬ ಹೊಸ ಪದವನ್ನು ಸೃಷ್ಟಿಮಾಡಿಕೊಂಡರು. 'ಅಸುರ' ಎಂದರೆ ರಾಕ್ಷಸ, 'ಸುರ' ಎಂದರೆ ದೇವತೆ ಎಂದು ಕ್ರಮೇಣ

---

[1] ನನಗೆ ತಿಳಿದಮಟ್ಟಿಗೆ 'ಒಸಿ' (=ಸ್ವಲ್ಪ) ಎಂಬ ಪದ ಹಿಂದಿನ ಯಾವ ಕೃತಿಯಲ್ಲೂ ಕಂಡುಬಂದಿಲ್ಲ. ಹದಿನೈದನೇ ಶತಮಾನದ ಉತ್ತರಾರ್ಧದಲ್ಲಿದ್ದ ತೋಂಟದ ಸಿದ್ಧಲಿಂಗಯತಿಗಳು ತಮ್ಮ ವಚನವೊಂದರಲ್ಲಿ (528) ಇದನ್ನು ಬಳಸಿದ್ದಾರೆ.

ಬಳಕೆಗೆ ಬಂದುವು. ಇಂಗ್ಲಿಷಿನಲ್ಲಿ 'peas' ಎಂದರೆ ಮೂಲತಃ ಬಟಾಣಿಕಾಳು ಎಂದರ್ಥ. ಆದರೆ ಆ ಪದದ ಕೊನೆಯಲ್ಲಿರುವ -S ಎಂಬುದು ಬಹುವಚನ ಸೂಚಕವೆಂದು ತಿಳಿದು 'pea' ಎಂಬ ಹೊಸಪದವನ್ನು ಸೃಷ್ಟಿಸಿಕೊಂಡರು. ಕನ್ನಡದಲ್ಲೂ 'ಉಕ್ಕಿವ' ಎಂಬುದು 'ಉತ್ಸಾಹ'ದ ತದ್ಭವ ಎಂದು ಭಾವಿಸಿ ತಿರುಮಲಾರ್ಯ, ಮುದ್ದಣರು ಆ ಅರ್ಥದಲ್ಲಿ ಬಳಸಿದರು. ವಾಸ್ತವವಾಗಿ 'ಉಕ್ಕಿವ' ಎಂದರೆ ಮೋಸ ಎಂದರ್ಥ.

ಇವು ಭಾಷಾವ್ಯತ್ಯಾಸಗಳಿಗೆ ಎಲ್ಲೋ ಕೆಲವು ಕಾರಣಗಳು. ಆದರೆ ಇಲ್ಲಿ ಒಂದು ವಿಷಯ ವನ್ನು ನೆನಪಿಟ್ಟುಕೊಳ್ಳಬೇಕು. ಭಾಷೆಯಲ್ಲಿ ವ್ಯತ್ಯಾಸಗಳು ನಡೆಯುವುದು ಒಂದು ಸಹಜ ಕ್ರಿಯೆ ಎಂದೊಡನೆಯೇ ವ್ಯತ್ಯಾಸಗಳು ಸ್ವಚ್ಛಂದವಾಗಿ ಅನಿರ್ಬಂಧಿತವಾಗಿ ನಡೆಯುತ್ತವೆ ಎಂದು ಭಾವಿಸಬಾರದು. ಭಾಷೆಯೆಂಬುದೊಂದು ಸಂಪ್ರದಾಯ. ಸಂಪ್ರದಾಯಗಳ ಅನುಸರಣೆಯಲ್ಲಿ ಒಂದು ಸಮಾಜವು ಎಷ್ಟು ಶ್ರದ್ಧೆಯಿಂದಿರುತ್ತದೆಯೋ ಭಾಷೆಯ ವಿಷಯದಲ್ಲೂ ಅಷ್ಟೇ. ಭಾಷೆಯ ವಿಷಯದಲ್ಲಿ ನಮ್ಮಲ್ಲಿ ಪ್ರತಿಯೊಬ್ಬರೂ ತಮ್ಮದೇ ಆದ ಕ್ಲುಪ್ತಮಾದರಿಯ ಕಲ್ಪನೆಯನ್ನಿಟ್ಟುಕೊಂಡಿರುತ್ತೇವೆ. ಹೀಗೆಯೇ ಒಂದೊಂದು ಗುಂಪೂ ಅಂತಹ ಕ್ಲುಪ್ತಮಾದರಿಗಳನ್ನಿಟ್ಟುಕೊಂಡಿರುತ್ತದೆ (Norms). ಆ ಗುಂಪಿನಲ್ಲಿ ಬೆಳೆದು ಬರುವ ಪ್ರತಿಯೊಬ್ಬ ವ್ಯಕ್ತಿಯೂ ಆ ಮಾದರಿಯಂತೆ ಮಾತನಾಡಬೇಕು. ಇಲ್ಲದಿದ್ದರೆ ಅವರ ಕಣ್ಣಲ್ಲಿ ಅವನು ಹೊಸಬನಾಗಿ ಉಳಿಯುತ್ತಾನೆ. ಬಾಲ್ಯದಲ್ಲಿ ಚಿಕ್ಕ ಹುಡುಗರು ಭಾಷೆಯನ್ನು ಕಲಿಯುತ್ತಿರುವಾಗ ಆ ಮಾದರಿಯನ್ನು ಮುಟ್ಟುವವರೆಗೆ ಉಳಿದವರು ಅವರನ್ನು ತಿದ್ದುತ್ತಲೇ ಇರುತ್ತಾರೆ. ಆದ್ದರಿಂದ ಭಾಷೆಯಲ್ಲಿ ನಿಷ್ಕಾರಣವಾಗಿ ಅನಾವಶ್ಯಕವಾದ ವ್ಯತ್ಯಾಸವೊಂದು ನಡೆದರೆ ಭಾಷಾಸಮಾಜವು ಅದನ್ನು ಒಪ್ಪಿಕೊಳ್ಳುವುದೂ ಇಲ್ಲ, ಸಹಿಸುವುದೂ ಇಲ್ಲ. ಭಾಷೆಯೆಂಬುದು ನಮಗೆ ಬಹು ನಿಕಟವಾದ ವಸ್ತು ; ನಮ್ಮ ಎರಡನೆಯ ಸ್ವಭಾವದಂತಿರುವ ಅಮೂಲ್ಯ ಆಸ್ತಿ. ಆದ್ದರಿಂದ ಅದರಲ್ಲಿ ನಡೆಯುವ ವ್ಯತ್ಯಾಸಗಳು ಶೀಘ್ರವಾಗಿ, ಸಾರ್ವತ್ರಿಕವಾಗಿ, ಸ್ವೇಚ್ಛೆಯಾಗಿ ನಡೆಯಲು ಭಾಷಾಸಮಾಜದ ಪ್ರತಿಭಟನೆಯಿದ್ದೇ ಇರುತ್ತದೆ.[1] ಆದ್ದರಿಂದಲೇ ಬಹುಶಃ ಭಾಷೆಯಲ್ಲಿ ನಡೆಯುವ ವ್ಯತ್ಯಾಸಗಳು ನಿಧಾನ. ಗಡಿಯಾರದಲ್ಲಿ ಗಂಟೆಯನ್ನು ತೋರಿಸುವ ಮುಳ್ಳಿನಂತೆ—ಚಲನೆ ಉಂಟು, ಆದರೂ ಆ ಚಲನೆಯನ್ನು ಕಣ್ಣುಗಳು ಗ್ರಹಿಸಲಾರವು. ಸ್ವಲ್ಪ ಹೊತ್ತಾದ ಮೇಲೆ ಗಂಟೆಯ ಮುಳ್ಳು ಚಲಿಸಿರುವುದು ಗೊತ್ತಾಗುತ್ತದೆ.

1 "Language is the first thing we learn, the last thing we forget, It is the most intimate and clinging to our habits, and almost a second nature and hence its exemption from all sweeping and arbitrary change. The community to whom it belongs, will suffer no finger to be laid upon it without a reason; only such modification as commend themselves to the general sense, as are virtually the carrying out of tendencies universally felt, have a chance of winning approval and acceptance, and so of being adopted into use, and made language".—WHITNEY

ಭಾಷಾವ್ಯತ್ಯಾಸಗಳೂ ಅಷ್ಟೇ. ಅವು ನಡೆದು ಎಷ್ಟೋ ಕಾಲವಾದ ಮೇಲೆ ನಮ್ಮ ಗಮನಕ್ಕೆ ಬರುತ್ತವೆ. ಕನ್ನಡದಲ್ಲಿ ನಲವತ್ತು ಐವತ್ತು ವರ್ಷಗಳ ಹಿಂದೆ ಪ್ರಥಮಾ ವಿಭಕ್ತಿ ಪ್ರತ್ಯಯಂಗಳನ್ನು ತಪ್ಪದೇ ಬಳಸುತ್ತಿದ್ದರು. "ಕಿತ್ತೀಳೆಯುೂ ಕನ್ನಡವೂ" ("Kittel and Kannada"), "ಆಂಡಯ್ಯನೂ ಕನ್ನಡವೆನಿಪ್ಪಾನಾಡೂ" ಎಂಬ ಲೇಖನಗಳನ್ನು ಹೆಸರಿಸಬಹುದು. ಈಗ ನಮಗೆ ಅವು ವಿಚಿತ್ರವಾಗಿ ಕಾಣಿಸುತ್ತವೆ. "ಕಿಟ್ಟಲ್ ಮತ್ತು ಕನ್ನಡ" ಎಂಬುದು ನಮಗೆ ಹೆಚ್ಚು ಪ್ರಿಯವಾಗಬಹುದು. ಪ್ರಥಮಾ ವಿಭಕ್ತಿ ಪ್ರತ್ಯಯಗಳನ್ನು ಕೆಲವೆಡೆ ಬಳಸುವುದು ಅಗತ್ಯವಾದರೂ ಅವುಗಳನ್ನು ಕೈ ಬಿಡುತ್ತಿರುವುದೇ ಹೆಚ್ಚು.

ಭಾಷೆಯಲ್ಲಿ ವ್ಯತ್ಯಾಸಗಳು ನಡೆಯಲು ವಯಸ್ಕರಿಗಿಂತ ಯುವಕರು ಹೆಚ್ಚು ಕಾರಣ ಕರ್ತರು. ವಯಸ್ಕರಿಗೆ ಹೊಸ ಧ್ವನಿಗಳು ಹೊಸ ಪದಗಳ ಬಳಕೆಯಲ್ಲಿ ಅಷ್ಟು ಆಸಕ್ತಿ ಇರುವುದಿಲ್ಲ. ರೂಢಿಯನ್ನು ಬಿಟ್ಟು ಅತ್ತ ಇತ್ತ ಹೋಗಲು ಅವರ ಮನಸ್ಸು ಒಪ್ಪುವು ದಿಲ್ಲ. ಯುವಕರು ಹಾಗಲ್ಲ : ಅವರು ವೈವಿಧ್ಯಪ್ರಿಯರಾದ್ದರಿಂದ ವ್ಯತ್ಯಾಸಪ್ರಿಯರೂ ಆಗಿರುತ್ತಾರೆ. ಆದ್ದರಿಂದ ಭಾಷೆಯಲ್ಲಿ ಹೊಸದೇನಾದರೂ ಕಂಡುಬಂದರೆ ತಕ್ಷಣವೇ ಸ್ವಾಗತಿಸುತ್ತಾರೆ, ಸಾಧ್ಯವಾದರೆ ವ್ಯತ್ಯಾಸಗಳಿಗೆ ತಮ್ಮ ಕಾಣಿಕೆಯೇನಾದರೂ ಇದ್ದರೆ ಸಲ್ಲಿಸುತ್ತಾರೆ.

ಮುಂದಿನ ಅಧ್ಯಾಯಗಳಲ್ಲಿ ಭಾಷಾವ್ಯತ್ಯಾಸದ ಪ್ರಭೇದಗಳನ್ನು ಚರ್ಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ನಾಲ್ಕು ಪ್ರಭೇದಗಳನ್ನು ಗುರುತಿಸಿದೆ. ಭಾಷೆಯ ಧ್ವನಿಗಳಲ್ಲಿ ಹಲವು ವ್ಯತ್ಯಾಸಗಳು ನಡೆಯುತ್ತವೆ; ಒಂದು ಕಾಲದಲ್ಲಿದ್ದ ಧ್ವನಿ ಇನ್ನೊಂದು ಕಾಲಕ್ಕೆ ಬೇರೆಯಾಗಬಹುದು ; ಒಂದೇ ಕಾಲದಲ್ಲಿ ಇನ್ನೂ ಹಲವಾರು ವ್ಯತ್ಯಾಸಗಳು ನಡೆಯಬಹುದು. ಇವೇ **ಧ್ವನಿವ್ಯತ್ಯಾಸಗಳು.** ಒಂದು ಕಾಲದಲ್ಲಿ ಒಂದು ಪದಕ್ಕಿದ್ದ ಅರ್ಥ ಬೇರೆಯಾಗಿ ಇನ್ನೊಂದರ್ಥ ಬರಬಹುದು. ಇವು **ಅರ್ಥವ್ಯತ್ಯಾಸಗಳು.** ಸಾದೃಶ್ಯ ಕಾರಣವಾಗಿ ಭಾಷೆಯಲ್ಲಿ ಹಲವು ಹೊಸ ಪದಗಳು ಸೃಷ್ಟಿಯಾಗಬಹುದು. ಇವೇ **ಸಾದೃಶ್ಯಮೂಲವ್ಯತ್ಯಾಸಗಳು.** ಒಂದು ಭಾಷೆಯಲ್ಲಿ ಅನ್ಯಭಾಷೆಗಳಿಂದ ಅನೇಕ ರೀತಿಯ ಭಾಷಾಸಾಮಗ್ರಿಗಳ ಸ್ವೀಕರಣವು ನಡೆದಿರಬಹುದು. ಇವು **ಪದಕೋಶ ವ್ಯತ್ಯಾಸ ಅಥವಾ ಸ್ವೀಕರಣಗಳು.**

# 5 ಧ್ವನಿವ್ಯತ್ಯಾಸ

ಹಳಗನ್ನಡವನ್ನು ಓದಲು ಪ್ರಯತ್ನಿಸುವ ವ್ಯಕ್ತಿಗೆ ಮೊದಲು ಎದ್ದು ಕಾಣುವ ಅಂಶ ವೆಂದರೆ ಈಗಿನ ಹಲವು ಪದಗಳಿಗೂ ಹಳಗನ್ನಡದ ಪದಗಳಿಗೂ ಇರುವ ವ್ಯತ್ಯಾಸ—

| ಹಳಗನ್ನಡ | ಹೊಸಗನ್ನಡ |
|---|---|
| ಪಾವು | ಹಾವು |
| ಪಜ್ಜೆ | ಹೆಜ್ಜೆ |
| ಪೂ | ಹೂ |
| ಪಲ್ಲಿ | ಹಲ್ಲಿ |
| ಪಿಡಿ | ಹಿಡಿ |
| ಪುಲಿ | ಹುಲಿ |

ಹಳಗನ್ನಡದ [p] ಎಂಬ ಧ್ವನಿಯು ಹೊಸಗನ್ನಡದಲ್ಲಿ [h] ಆಗಿದೆ. ಇಂಗ್ಲಿಷಿನ ಇತಿಹಾಸದಲ್ಲಿ ಹದಿನೈದನೆಯ ಶತಮಾನದಲ್ಲಿ [o] ಎಂಬ ಧ್ವನಿಯು [u] ಎಂಬ ಧ್ವನಿಯಾಯಿತು. cool, stool, tooth, moon, doom, noon ಮುಂತಾದ ಪದಗಳನ್ನು ನೋಡಬಹುದು. (ಉಚ್ಚಾರಣೆಯಲ್ಲಿ [u] ಧ್ವನಿಯು ಬಂದಿದ್ದರೂ ಬರವಣಿಗೆಯಲ್ಲಿ ಮಾತ್ರ ಹಿಂದಿನ [o] ಉಳಿದುಕೊಂಡು ಬಂದಿದೆ.) ಅದೇ ಇಂಗ್ಲಿಷ್ ಭಾಷೆಯ ಇತಿಹಾಸದಲ್ಲಿ [a] ಧ್ವನಿಯು [ow] ಆಗಿ ಪರಿಣಮಿಸಿದುದಕ್ಕೆ ಹಿಂದಿನ ಅಧ್ಯಾಯವೊಂದರಲ್ಲಿ ಉದಾಹರಣೆಗಳನ್ನು ಕೊಟ್ಟಿದೆ.[1] ಹೀಗೆ ಭಾಷೆಯಲ್ಲಿ ನಡೆಯುವ ಧ್ವನಿಗಳಿಗೆ ಸಂಬಂಧಿಸಿದ ವ್ಯತ್ಯಾಸಗಳನ್ನು ಧ್ವನಿವ್ಯತ್ಯಾಸಗಳೆಂದು (Phonetic changes) ಕರೆಯುತ್ತಾರೆ.

---

[1]

| ಹಳೆಯ ಇಂಗ್ಲಿಷ್ | ಹೊಸ ಇಂಗ್ಲಿಷ್ |
|---|---|
| stān | stone |
| bāt | boat |
| rād | road |
| gāt | goat |
| hām | home |

ಧ್ವನಿವ್ಯತ್ಯಾಸಗಳು ನಡೆಯುವ ಕಾರ್ಯವು ವೀಕ್ಷಣೆಗೆ ಒಳಪಡದಷ್ಟು ನಿಧಾನ. ಎಲ್ಲೋ ಒಂದು ಕಡೆ, ಒಬ್ಬ ವ್ಯಕ್ತಿಯ ಉಚ್ಚಾರಣೆಯಲ್ಲಿ ಆರಂಭವಾದ ಒಂದು ಧ್ವನಿ ವ್ಯತ್ಯಾಸವು, ಎಲ್ಲರ ಒಪ್ಪಿಗೆಯನ್ನು ಪಡೆಯುವಂತಿದ್ದರೆ, ಆ ಭಾಷೆಯ ಎಲ್ಲ ಪದಗಳಿಗೂ ವ್ಯಾಪಿಸಿಬಿಡುತ್ತದೆ. ಧ್ವನಿವ್ಯತ್ಯಾಸಗಳ ನಿಯತತೆಯು (Regularity) ಆಶ್ಚರ್ಯವನ್ನು ಹುಟ್ಟಿಸುತ್ತದೆ. ಈ ನಿಯತತೆಯು ಎರಡು ಕಡೆಗಳಲ್ಲಿ ಗೋಚರವಾಗುತ್ತದೆ. (i) ಮೂಲ ಭಾಷೆಯ ಧ್ವನಿಗಳು ಬೇರೆಬೇರೆ ಭಾಷೆಗಳಲ್ಲಿ ಕಾಣಿಸಿಕೊಂಡಿರುವ ರೀತಿಯಲ್ಲಿ. ಉದಾಹರಣೆಗೆ ಮೂಲ ಇಂಡೊ ಯೂರೋಪಿಯನ್ನಿನ ಸ್ವರಗಳ ಮಧ್ಯದ [-s-] ಧ್ವನಿಯು ಗ್ರೀಕಿನಲ್ಲಿ [-h-] ಆಗಿ -ϕ-ಆಯ್ತು. ಇದೇ ಧ್ವನಿಯು ಲ್ಯಾಟಿನ್ ಭಾಷೆಯಲ್ಲಿ -r- ಆಯ್ತು. ಎಂದರೆ ಮೂಲ ಇಂಡೊ ಯುರೋಪಿಯನ್ನಿನ ಪದಗಳಲ್ಲಿ ಎಲ್ಲೆಲ್ಲಿ -s- ಇತ್ತೋ, ಗ್ರೀಕಿನಲ್ಲಿ-ϕ-, ಲ್ಯಾಟಿನ್ನಿನಲ್ಲಿ -r- ಇವೆ. (ii) ಒಂದು ಭಾಷೆಯ ಇತಿಹಾಸದಲ್ಲಿ : ಒಂದು ಭಾಷೆಯ ಇತಿಹಾಸವನ್ನು ತೆಗೆದುಕೊಂಡರೆ ಒಂದು ಧ್ವನಿ ಅಥವಾ ಒಂದು ಧ್ವನಿಗಳ ಸಮೂಹವು ಕ್ರಮಬದ್ಧವಾಗಿ ಬೇರೆ ಧ್ವನಿ ಅಥವಾ ಧ್ವನಿಗಳಾಗಿ ಮಾರ್ಪಾಟಾಗಿರುವುದನ್ನು ಗುರುತಿಸಬಹುದು. ಇದನ್ನು ಬೇಕಾದರೆ ಆ ಭಾಷೆಯ 'ಧ್ವನಿನಿಯಮ'[1] (Phonetic law)ವೆಂದು ಕರೆಯಬಹುದು. ('ನಿಯಮ' ಎಂದು ಕರೆಯುವುದು ಅಷ್ಟು ಸರಿಯಲ್ಲ ; ಏಕೆಂದರೆ ಯಾವ ನಿಯಮವನ್ನೂ ಪೂರ್ವಭಾವಿಯಾಗಿ ಇಟ್ಟುಕೊಂಡು ಧ್ವನಿವ್ಯತ್ಯಾಸಗಳು ನಡೆದಿರುವುದಿಲ್ಲ.) ಈ ಧ್ವನಿ ನಿಯಮಕ್ಕೆ ಕನ್ನಡದಿಂದ ಒಂದು ನಿದರ್ಶನವನ್ನು ಕೊಡಬಹುದು. ಹಳಗನ್ನಡದ [ೞ] ಧ್ವನಿಯು ನಡುಗನ್ನಡದಲ್ಲಿ ಬೇರೆ ಬೇರೆ ಪರಿಸರಗಳಲ್ಲಿ ಬೇರೆ ಬೇರೆ ಧ್ವನಿಗಳಾಗಿ ಪರಿವರ್ತನೆ ಹೊಂದಿತು. ಸ್ವರಗಳ ಮಧ್ಯೆ ಅಥವಾ ಪದಾಂತ್ಯದಲ್ಲಿ ಅದು 'ಳ'ವಾಗಿಯೂ, ವ್ಯಂಜನ ಸಂಯುಕ್ತವಾಗಿರುವಾಗ 'ರ'ವಾಗಿಯೂ ಪರಿಣಮಿಸಿತು. ಆದನ್ನು ಹೀಗೆ ತೋರಿಸಬಹುದು :

V ೞ್ V > V ಳ್ V (ಉದಾ. ಮೞೆ > ಮಳೆ)
—ೞ್ > —ಳ್ (ಉದಾ. ಬಾೞ್ > ಬಾಳ್)
—ೞ್ C— > -ರ್ C— (ಉದಾ. ಗೞ್ದೆ > ಗರ್ದೆ)
V = Vowel ; C = Consonant

ಕನ್ನಡದಲ್ಲಿ 'ೞ'ಕ್ಕೆ ಸಂಬಂಧಿಸಿದಂತೆ ಧ್ವನಿವ್ಯತ್ಯಾಸವು ನಡೆದಾಗ ಒಂದು ಕ್ರಮವನ್ನನುಸರಿಸಿ ಅದು ನಡೆಯಿತು. ಕನ್ನಡ ಭಾಷೆಯ ಧ್ವನಿನಿಯಮಗಳಲ್ಲಿ ಇದು ಒಂದು. ಈ ನಿಯಮವು ಕನ್ನಡದಲ್ಲಿ ಒಂದು ಕಾಲದಲ್ಲಿ ಒಂದು ಧ್ವನಿಗೆ ಅನ್ವಯಿಸುತ್ತದೆ ಎಂಬು

1 "A phonetic law of a language is a statement of the regular practice of that language at a particular time in regard to the treatment of a particular sound or group of sounds in a particular setting."—TUCKER

ದನ್ನು ನೆನಪಿನಲ್ಲಿಡಬೇಕು. ಮೇಲೆ ಹೇಳಿದಂತೆ 'ನಿಯಮ' ಎಂಬ ಮಾತನ್ನು ಬಹುದೂರ ಎಳೆಯಬಾರದು. ನಿಯಮ ಎಂಬುದರ ಬದಲು ಅಭ್ಯಾಸ, ರೂಢಿ (Practice) ಎಂದು ಬೇಕಾದರೆ ಇಟ್ಟುಕೊಳ್ಳಬಹುದು.

ಧ್ವನಿವ್ಯತ್ಯಾಸಗಳ ಈ ಕ್ರಮಬದ್ಧತೆಯನ್ನು (Regularity) ಒಂದು ತತ್ವವೆಂಬಂತೆ ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿದ್ದ ಕೆಲವು ಭಾಷಾವಿಜ್ಞಾನಿಗಳು ಪ್ರತಿಪಾದಿಸಿದರು. ಆಗಸ್ಟ್ ಲೆಸ್ಕಿಯೆನ್ (August Leskien) ಎಂಬಾತನು ಕ್ರಿ.ಶ. 1870ರ ಸರಿಸುಮಾರಿನಲ್ಲಿ "ಧ್ವನಿನಿಯಮಗಳಿಗೆ ಅಪವಾದಗಳೇ ಇಲ್ಲ" ("Phonetic laws have no exceptions") ಎಂದು ಘೋಷಿಸಿದನು ; ಅವನನ್ನೂ ಅವನ ತಂಡದವರನ್ನೂ "Young Grammarians" ಎಂದು ಕರೆದು ಹಾಸ್ಯಮಾಡಿದರು. ಈ ತಂಡದ ಬ್ರುಗ್‌ಮನ್ (Brugmann) ಎಂಬ ಮತ್ತೊಬ್ಬ ಅತ್ಯಂತ ಪ್ರಸಿದ್ಧ ಭಾಷಾವಿಜ್ಞಾನಿಯನ್ನು ಇಲ್ಲಿ ಹೆಸರಿಸಬಹುದು. ಧ್ವನಿವ್ಯತ್ಯಾಸಗಳು ಒಂದು ಕ್ರಮವನ್ನನುಸರಿಸುತ್ತವೆ ; ಧ್ವನಿನಿಯಮಗಳಿಗೆ ಅಪವಾದಗಳೇ ಇಲ್ಲ—ಎಂದು ಒಂದು ರೀತಿಯ ಛಲದಿಂದ ಈ ನವವೈಯಾಕರಣರು ಪ್ರತಿಪಾದಿಸಿದ್ದರಿಂದ ಅನೇಕರ ಉಗ್ರಟೀಕೆಗೆ ಇವರು ಗುರಿಯಾಗಬೇಕಾಯಿತು. ಆದರೂ ಇವರ ಪ್ರತಿಪಾದನೆ ಬಹುಮಟ್ಟಿಗೆ ಸಾಧಾರವಾದುದು ಎಂಬುದನ್ನು ಒಪ್ಪಿಕೊಂಡಿದ್ದಾರೆ.

ಧ್ವನಿನಿಯಮಗಳಿಗೆ ಅಪವಾದಗಳೇ ಇಲ್ಲ ಎಂದಲ್ಲ. ಅಂತಹ ಅಪವಾದಗಳಿದ್ದರೆ ಅದಕ್ಕೆ ಇನ್ನೇನೋ ಕಾರಣವಿರಬೇಕು. ಆ ಪದವನ್ನು ಬೇರೆಯ ಭಾಷೆಯಿಂದ ಸ್ವೀಕರಿಸಿರಬಹುದು ; ಅಥವಾ ಆ ಪದವು ಸಾದೃಶ್ಯಸೃಷ್ಟಿಯಾಗಿರಬಹುದು (Analogic creation). ಕನ್ನಡದ 'ಟ'ವು ಎಷ್ಟು ಕ್ರಮಬದ್ಧವಾಗಿ [ಳ್] ಮತ್ತು [ರ್] ಗಳಾಗಿ ಪರಿವರ್ತನೆಯನ್ನು ಹೊಂದಿತು ಎಂಬುದನ್ನಾಗಲೇ ನೋಡಿದ್ದೇವೆ. ಹಳಗನ್ನಡದಲ್ಲಿ ಒಂದು ಕಾಲಕ್ಕೆ [ಪ್] ಧ್ವನಿಯು [ಹ್] ಧ್ವನಿಯಾಗಿ ಪರಿವರ್ತನೆ ಹೊಂದಿತು. ಒಂದು ಪ್ರದೇಶದಲ್ಲಿ, ಒಂದು ಕಾಲದಲ್ಲಿ, ಒಬ್ಬ ವ್ಯಕ್ತಿಯು ಒಂದು ಪದದಲ್ಲಿ ಆರಂಭವಾದ ಒಂದು ಧ್ವನಿವ್ಯತ್ಯಾಸವು, ಅದಕ್ಕೆ ಅನುಕೂಲವಾದ ಅವಕಾಶವು ಲಭಿಸಿದರೆ, ದೇಶದ ತುಂಬಾ ಹಬ್ಬುತ್ತದೆ, ಇತರ ಪದಗಳಿಗೂ ವ್ಯಾಪಿಸುತ್ತದೆ. [ಪ್]>[ಹ್] ಇಲ್ಲಿಯೂ ಅದನ್ನೇ ನೋಡುತ್ತೇವೆ. ಆದರೂ ಕನ್ನಡದಲ್ಲಿ, 'ಪಿಳ್ಳೆ' ಮುಂತಾದ ಕಡೆ ಈ ವ್ಯತ್ಯಾಸವು ಪ್ರವರ್ತಿಸಲಿಲ್ಲ. (ವಾಸ್ತವವಾಗಿ 'ಹಿಳ್ಳೆ' ಎಂಬ ರೂಪವು ಒಂದು ಶಾಸನದಲ್ಲಿ ಸಿಗುತ್ತದೆ. ಆದರೂ ಆ ರೂಪವು ಬಳಕೆಗೆ ಬರಲಿಲ್ಲ.) ಅಂತಹ ಅಪವಾದಗಳಿಗೆ ಇನ್ನೇನೋ ಕಾರಣವಿರಬೇಕು, ನಮಗೆ ಗೊತ್ತಿಲ್ಲ. ಇನ್ನೂ ಹೆಚ್ಚಿನ ಅಧ್ಯಯನದಿಂದ ಅಂತಹ ಅಪವಾದಗಳನ್ನು ವಿವರಿಸಲು ಸಾಧ್ಯವಾಗಬಹುದು.

ಮೂಲದ್ರಾವಿಡದ [ಕ್] ಧ್ವನಿಯು [ಇ], [ಎ] ಮುಂತಾದ ಪೂರ್ವಸ್ವರಗಳ ಹಿಂದೆ (before front vowels) ಕನ್ನಡದಲ್ಲಿ [ಕ್[ ಆಗಿ ಉಳಿಯುತ್ತದೆ ; ತಮಿಳು, ಮಲೆಯಾಳ, ತೆಲುಗುಗಳಲ್ಲಿ [ಚ್] ಆಗುತ್ತದೆ. ಎಂದರೆ ಎರಡನೆಯ ಉಚ್ಚಾರಾಂಶದಲ್ಲಿ

ಮೂರ್ಧನ್ಯವ್ಯಂಜನವಿದ್ದರೆ ತಮಿಳು, ಮಲಯಾಳಗಳಲ್ಲಿ [ಕ್] ಹಾಗೇ ಉಳಿಯುತ್ತದೆ; ತೆಲುಗಿನಲ್ಲಿ ಪೂರ್ವಸ್ವರಗಳ ಹಿಂದೆ ನಿಯತವಾಗಿ ತಾಲವ್ಯೀಕರಣ ನಡೆಯುತ್ತದೆ. ಆದರೆ ಕನ್ನಡದಲ್ಲಿ ಕೆದರು, ಚೆದರು ಎಂಬ ಎರಡು ರೂಪಗಳೂ ಇವೆ. ಅವುಗಳಲ್ಲಿ 'ಚೆದರು' ಎಂಬುದನ್ನು ವಿವರಿಸುವುದು ಹೇಗೆ ? ಅದನ್ನು ಕನ್ನಡವು ಬೇರೆ ಭಾಷೆಗಳಿಂದ, ಬಹುಶಃ ತೆಲುಗಿನಿಂದ ಸ್ವೀಕರಿಸಿರಬೇಕು. ಅಪವಾದಗಳಿಗೆ ಸಾದೃಶ್ಯವೂ ಒಮ್ಮೊಮ್ಮೆ ಕಾರಣವಾಗುತ್ತದೆ. ಇಂಗ್ಲಿಷಿನಲ್ಲಿ shall > should, will > would ಎಂಬಲ್ಲಿ ಸರಿಹೋಯ್ತು; ಆದರೆ can > could ಎಂಬಲ್ಲಿ ಎರಡನೆಯ ಪದದ "l" ಬರವಣಿಗೆಯಲ್ಲಿ ಬರಲು ಕಾರಣವೇನು ? Should, would ಎಂಬ ಪದಗಳ ಸಾದೃಶ್ಯದ ಮೇಲೆ 'could' ಎಂಬಲ್ಲಿ "l" ಕಾಣಿಸಿಕೊಂಡಿತು.

ಧ್ವನಿವ್ಯತ್ಯಾಸಗಳ ನಿಯತತೆಯನ್ನು ಭಾಷಾವಿಜ್ಞಾನಿಗಳು ಒಪ್ಪಿಕೊಂಡಿದ್ದಾರೆ; ಇದನ್ನು ಒಪ್ಪಿಕೊಳ್ಳುವುದರಿಂದ ಹಲವು ಉಪಯೋಗಗಳಿವೆ.[1] ಮೂಲಭಾಷೆಯು (Proto-language) ಒಂದು ಕ್ರಮವನ್ನನುಸರಿಸಿ ವ್ಯತ್ಯಾಸಗೊಂಡದ್ದರಿಂದ ಈ ದಿನ ನಮಗೆ ದೊರಕುವ ಭಾಷೆಗಳ ಸಹಾಯದಿಂದ ಅವುಗಳಿಗೆ ಮೂಲವಾಗಿದ್ದಿರಬಹುದಾದ ಭಾಷೆಯನ್ನು ಪುನಾ ರಚಿಸಲು ಸಾಧ್ಯವಾಗಿರುವುದು. ಹೀಗೆ ಧ್ವನಿವ್ಯತ್ಯಾಸಗಳ ನಿಯತತೆಯು ತೌಲನಿಕ ಭಾಷಾವಿಜ್ಞಾನಕ್ಕೆ (Comparative Linguistics) ಅಡಿಗಲ್ಲಾಗಿದೆಯೆಂದು ಹೇಳಬಹುದು (ಅದರ ವಿವರಗಳನ್ನು ಇಲ್ಲಿ ಚರ್ಚಿಸುವುದು ಅಪ್ರಸ್ತುತವಾಗುತ್ತದೆ).

ಧ್ವನಿವ್ಯತ್ಯಾಸಗಳು ಸಾಮಾನ್ಯವಾಗಿ ನಡೆಯುವುದು ಮನುಷ್ಯನ ಮಿತವ್ಯಯಾಸಕ್ತಿಯ ಫಲವಾಗಿ. ಕೆಳಗೆ ಕೆಲವು ರೀತಿಯ ಧ್ವನಿವ್ಯತ್ಯಾಸಗಳನ್ನು ಗುರುತಿಸಿದೆ. ಪದಾರಂಭದಲ್ಲಿ ಎರಡು ವ್ಯಂಜನಗಳಿದ್ದರೆ ಅವುಗಳಲ್ಲಿ ಒಂದನ್ನು ಬಿಟ್ಟುಬಿಡುವುದುಂಟು. ಇಂಗ್ಲಿಷಿನಲ್ಲಿ know ಎಂಬಲ್ಲಿ k-ಯನ್ನು ಉಚ್ಚಾರಣೆಯಲ್ಲಿ ಲೋಪ ಮಾಡುತ್ತಾರೆ. kn-ಉಚ್ಚಾರವು ಈಗಲೂ ಜರ್ಮನ್ ಭಾಷೆಯಲ್ಲುಂಟು; ಸ್ಕಾಟ್ಲೆಂಡಿನ ಉತ್ತರ-ಪೂರ್ವದ ಇಂಗ್ಲಿಷ್ ಉಪಭಾಷೆಗಳಲ್ಲುಂಟು. hring > ring ಆಗಲು ಇದೇ ಸೌಲಭ್ಯಾಕಾಂಕ್ಷೆ ಕಾರಣ. ಕನ್ನಡದಲ್ಲಿ ಶ್ರೇಣಿ > ಏಣಿ, ಸ್ನೇಹ > ನೇಹ, ಪ್ರಸಾದ > ಪಸಾದ > ಹಸಾದ, ಸ್ಕಂಭ > ಕಂಬ, ಸ್ಥೂಲ > ತೋಲ, ಇತ್ಯಾದಿಗಳನ್ನು ನೋಡಬಹುದು. ಇವುಗಳಲ್ಲಿ ಹಲವು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದಿವೆ.

ಪದದ ಕೊನೆಯಲ್ಲಿನ ದ್ವಿತ್ವಾಕ್ಷರಗಳನ್ನು ಸರಳಗೊಳಿಸುವುದು ಸಾಮಾನ್ಯ. 'long' 'lamb' ಇತ್ಯಾದಿ ಕಡೆಗಳಲ್ಲಿ ಕೊನೆಯ ವ್ಯಂಜನಾಕ್ಷರವನ್ನು ಉಚ್ಚರಿಸುವುದಿಲ್ಲ. ಮುಂದೆ ಸ್ವರ ಬಂದಾಗ, ಈ ವ್ಯಂಜನಗಳು ಉಚ್ಚಾರಣೆಯಲ್ಲಿ ಗೋಚರವಾಗುತ್ತವೆ.

---

[1] "The regularity of phonetic change—the validity of the phonetic laws is a doctrine based upon observation...this doctrine is now accepted simply because it works".—STURTEVANT

ಪದದ ಕೊನೆಯಲ್ಲಿ ಬರುವ ವ್ಯಂಜನಾಕ್ಷರವು ಕೆಲವೊಮ್ಮೆ ಲೋಪವಾಗುವುದುಂಟು. ಕನ್ನಡದಲ್ಲಿ ಎಣ್ಣೆ (<ಎಳ್ + ನೆಯ್), ಬೆಣ್ಣೆ (<ಬೆಳ್ + ನೆಯ್)ಎಂಬ ಕಡೆ ಅಂತ್ಯ ವ್ಯಂಜನವಾದ 'ಯ್' ಬಿದ್ದುಹೋಗಿದೆ.

ದ್ವಿತ್ವಾಕ್ಷರಗಳ ಮಧ್ಯೆ ಸ್ವರವನ್ನು ತಂದು ವ್ಯಂಜನಗಳನ್ನು ಬಿಡಿಸಿ ಹೇಳುವುದಕ್ಕೆ **ಸ್ವರಭಕ್ತಿ** (Anaptyxis) ಎಂದು ಹೆಸರು. ಖಡ್ಗ > ಖಡುಗ ; ಭಕ್ತಿ > ಬಕುತಿ ; ಯುಕ್ತಿ > ಯುಕುತಿ ; ಹರ್ಷ > ಹರುಷ ; ಬ್ರಹ್ಮ > ಬರ್ಮ > ಬರವು.

ಧ್ವನಿಗಳು ವ್ಯತ್ಯಾಸಗೊಳ್ಳುವ ಪರಿಗಳಲ್ಲಿ **'ಸಮರೂಪಧಾರಣೆ'**(Assimilation) ಎಂಬುದು ಮುಖ್ಯವಾದುದು. ಒಂದು ಪದದಲ್ಲಿರುವ ಎರಡು ಧ್ವನಿಗಳನ್ನು ಉಚ್ಚರಿಸಲು ಧ್ವನ್ಯಂಗಗಳು ಬಹು ಭಿನ್ನವಾದ ಉಚ್ಚಾರಣಾಸ್ಥಾನಗಳನ್ನು ಆಶ್ರಯಿಸಬೇಕಾಗಿದೆಯೆಂದು ಭಾವಿಸೋಣ. ಅಂತಹ ಪರಿಸ್ಥಿತಿಯಲ್ಲಿ ಧ್ವನ್ಯಂಗಗಳಿಗೆ ಸಹಜವಾಗಿಯೇ ಶ್ರಮ ಹೆಚ್ಚು. ಆದರ ಬದಲು ಆ ಎರಡು ಧ್ವನಿಗಳಲ್ಲಿ ಒಂದು ಇನ್ನೊಂದು ಧ್ವನಿಯಾಗಿ ಮಾರ್ಪಾಟಾಗಬಹುದು ಅಥವಾ ಒಂದು ಧ್ವನಿಯು ಇನ್ನೊಂದು ಧ್ವನಿಯ ಉಚ್ಚಾರಣಾಸ್ಥಾನಕ್ಕೆ ಸಮೀಪದಲ್ಲಿ ಹುಟ್ಟುವ ಮತ್ತೊಂದು ಧ್ವನಿಯಾಗಿ ಮಾರ್ಪಾಟಾಗಬಹುದು. ಇವೆರಡರಿಂದಲೂ ಧ್ವನ್ಯಂಗಗಳ ಶ್ರಮವು ಕಡಮೆಯಾಗುತ್ತದೆ. ಎಂದರೆ ಒಂದು ಧ್ವನಿಯು ಇನ್ನೊಂದು ಧ್ವನಿಯಾಗಬಹುದು ಅಥವಾ ಅದಕ್ಕೆ ಸಮಾನವಾದ ಅಥವಾ ಸಮೀಪವಾದ ಧ್ವನಿಯಾಗಬಹುದು. ಇದನ್ನೇ 'ಸಮರೂಪಧಾರಣೆ' ಎಂದು ಕರೆದಿರುವುದು. ಇದನ್ನು ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು. ಗರ್ದೆ > ಗದ್ದೆ, ಕರ್ತೆ > ಕತ್ತೆ, ಉರ್ದು > ಉದ್ದು, ತಿರ್ದು > ತಿದ್ದು, ಪುಷ್ಪ > ಪುಪ್ಪ—ಈ ಕೆಲವು ಸರಳ ನಿದರ್ಶನಗಳನ್ನೇ ತೆಗೆದುಕೊಳ್ಳೋಣ. ಇವುಗಳಲ್ಲಿ ವಿಜಾತೀಯ ಸಂಯುಕ್ತ ವ್ಯಂಜನಗಳಿವೆ. ಅವುಗಳಿಗೆ ಬೇರೆ ಬೇರೆ ರೀತಿಯ ಉಚ್ಚಾರಣಾಸ್ಥಾನಗಳೂ ಬೇರೆ ಬೇರೆ ರೀತಿಯ ಉಚ್ಚಾರಣಾ ಪ್ರಯತ್ನಗಳೂ ಇರುವುದರಿಂದ ಧ್ವನ್ಯಂಗಗಳಿಗೆ ಅವೆರಡನ್ನೂ ಕೂಡಿಸಿ ಉಚ್ಚರಿಸಲು ಸ್ವಲ್ಪ ಶ್ರಮವಾಗುತ್ತದೆ. 'ಗರ್ದೆ' ಎಂಬಲ್ಲಿ 'ರ್' ಎಂಬುದನ್ನು ಉಚ್ಚರಿಸಿ, ಬಳಿಕ ಭಿನ್ನ ಧ್ವನಿಯಾದ 'ದ್'ವನ್ನು ಉಚ್ಚರಿಸಬೇಕು. ಆದರ ಬದಲು, 'ರ್' ಎಂಬುದರ ಸ್ಥಾನದಲ್ಲಿ 'ದ್'ವನ್ನು ತಂದರೆ ಎರಡರ ಉಚ್ಚಾರಣಾಸ್ಥಾನವೂ ಒಂದೇ ಆಗುತ್ತದೆ, ಧ್ವನ್ಯಂಗಗಳಿಗೆ ಶ್ರಮ ಕಡಮೆಯಾಗುತ್ತದೆ. 'ರ್' ಎಂಬುದು 'ದ್' ಎಂಬ ಮುಂದಿನ ವ್ಯಂಜನವನ್ನನುಸರಿಸಿ ಸಮರೂಪಧಾರಣೆ ಮಾಡಿದೆ ಎಂದು ಹೇಳುತ್ತೇವೆ. ಹೀಗೆಯೇ ಉಳಿದ ಪದಗಳನ್ನೂ ವಿವರಿಸಬಹುದು.

ಸಮರೂಪಧಾರಣೆಯನ್ನು ಸ್ವರಗಳ ವ್ಯತ್ಯಾಸದಲ್ಲಿಯೂ ಕಾಣಬಹುದು. ಬಿರಿ > ಬಿರಿಕು > ಬಿರುಕು ; ಮುರಿ > ಮುರಿಕು > ಮುರುಕು ; ತಿಳಿ > ತಿಳಿಸು > ತಿಳುಸು ; ಹಸಿರು > ಹಸುರು. ಈ ಪದಗಳಲ್ಲಿ [ಇ] ಮತ್ತು [ಉ] ಎಂಬ ಎರಡು ಸ್ವರಗಳಿರುವ ಕಡೆ, [ಇ] ಸ್ಥಾನದಲ್ಲಿ [ಉ] ವನ್ನು ತಂದು ಉಚ್ಚರಿಸಿದರೆ ಉಚ್ಚಾರಣೆಗೆ ಸುಲಭವಾಗುತ್ತದೆ. 'ಬಿರಿಕು' ಎಂಬುದರ ಉಚ್ಚಾರಕ್ಕಿಂತ 'ಬಿರುಕು' ಸುಲಭ. ಇದನ್ನು vocalic

harmony ಅಥವಾ harmonic sequence of vowels ಎಂದು ಕರೆಯುತ್ತಾರೆ. ತೆಲುಗಿನಲ್ಲಿ ಇದು ವಿಶೇಷವಾಗಿ ಕಂಡುಬರುತ್ತದೆ. ಉದಾ : ಕತ್ತಿಕಿ, ಕತ್ತುಲಕು, ಕತ್ತುಲು : ಕಲುಗುದುನು, ಕಲಿಗಿತಿನಿ ಇತ್ಯಾದಿ. ಇದಕ್ಕಿಂತ ಸೂಕ್ಷ್ಮವಾದ ಸವರ್ಣರೂಪ ಧಾರಣೆಯು ಕೆಲವು ಕಡೆ ಕಂಡುಬರುತ್ತದೆ. ಈ ಉದಾಹರಣೆಗಳನ್ನು ನೋಡಿ :

ಕುಟಿಲ್ > ಕೊಟಿಲ್
ಪುಸಲ್ > ಪೊಸಲ್
ನಿಲಂ > ನೆಲಂ

ಮೇಲಿನ ಮೂರು ಜೋಡಿಗಳಲ್ಲೂ ಮೊದಲ ಪದದಲ್ಲಿ ಎರಡನೆಯ [ಅ] ಎಂಬುದು ವಿವೃತ ಸ್ವರ (Open vowel). ಮೊದಲನೆಯ ಸ್ವರಗಳಾದ [ಉ] ಮತ್ತು [ಇ]ಗಳು ಸಂವೃತ ಸ್ವರಗಳು (Close vowels). [ಅ] ಎಂಬ ವಿವೃತಸ್ವರದ ಪ್ರಭಾವದಿಂದ [ಉ] ಮತ್ತು [ಇ] ಎಂಬ ಸಂವೃತಸ್ವರಗಳು [ಒ] ಮತ್ತು [ಎ] ಎಂಬ ಅರ್ಧಸಂವೃತಸ್ವರಗಳಾಗಿ (Half close vowels) ಪರಿವರ್ತನೆ ಹೊಂದಿವೆ.

ಮುಂದೆ ಬರುವ ಸ್ವರಗಳ ಪ್ರಭಾವದಿಂದ ಕೆಲವು ವ್ಯಂಜನಗಳು ಆ ಸ್ವರಗಳಿಗೆ ತಕ್ಕುದಾದ ಸವರ್ಣರೂಪಧಾರಣೆ ಮಾಡಬಹುದು. ಇದರಲ್ಲಿ ಬಹುಮುಖ್ಯವಾದುದು **ತಾಲವ್ಯೀಕರಣ** (Palatalisation). ಮುಂದೆ ಬರುವ [ಇ] ಮತ್ತು [ಎ] ಎಂಬ ಪೂರ್ವಸ್ವರಗಳಿಂದಾಗಿ (Front vowels) ಕಂಠ್ಯಧ್ವನಿಗಳು ತಾಲವ್ಯಧ್ವನಿಗಳಾಗಿ ಪರಿವರ್ತಿತವಾಗಬಹುದು. ಮೂಲದ್ರಾವಿಡದ [ಕ] ಧ್ವನಿಯು ತಮಿಳು, ತೆಲುಗು, ಮಲೆಯಾಳಗಳಲ್ಲಿ [ಚ] ಆಗುವುದನ್ನು ಇಲ್ಲಿ ಹೆಸರಿಸಬಹುದು. [ಚ] ವು ತಾಲವ್ಯಧ್ವನಿ (Palatal).

ಒಂದು ಪದದಲ್ಲಿರುವ ವ್ಯಂಜನವು ದುರ್ಬಲವಾದರೆ ಅಥವಾ ಲೋಪವಾದರೆ ಆ ನಷ್ಟವನ್ನು ಭರ್ತಿಮಾಡಲು ಹಿಂದಿನ ಸ್ವರವು ದೀರ್ಘವಾಗುವುದುಂಟು. ಇದನ್ನು **ಪರಿಹಾರದೀರ್ಘೀಕರಣ** (Compensatory Lengthening) ಎನ್ನಬಹುದು.

ಹಳೆಯ ಇಂಗ್ಲಿಷ್ : niht > ಸ್ಕಾಚ್. nīt (= ನೀತ್) ಈ ಉದಾಹರಣೆಯನ್ನು ತೆಗೆದುಕೊಂಡರೆ, ಸ್ಕಾಚ್ ಭಾಷೆಯ ಪದದಲ್ಲಿ [h] ನಷ್ಟವಾದದ್ದರಿಂದ ಆ ನಷ್ಟವನ್ನು ತುಂಬಲು ಹಿಂದಿನ ಸ್ವರವು ದೀರ್ಘವಾಯಿತು. ಇನ್ನೂ ಕೆಲವು ಉದಾಹರಣೆಗಳು :

ಕನ್ನಡ—ಚಮ್ಮಟಿಗೆ > ಚಾಟಿ
ಮಯಣ > ಮೇಣ
ಎಷ್ಟು > ಏಟು (ಕೆಲವರ ಭಾಷೆಯಲ್ಲಿ)
ಪೆಯರ್ > ಪೇರ್ (ತಮಿಳಿನಲ್ಲಿ)

ನಷ್ಟವಾದ ವ್ಯಂಜನವು ಒಂದು ಅನುನಾಸಿಕವಾಗಿದ್ದರೆ ಹಿಂದಿನ ಸ್ವರವು **ಅನುನಾಸಿಕೀಕರಣ**ವಾಗಬಹುದು (Nasalization). ಕನ್ನಡದಲ್ಲಿ ನಾನು ಕೇಳಿರುವ ಒಂದು ಉದಾಹರಣೆಯನ್ನು ಕೊಡಬಹುದು.

ವಮಾಂಸ>ವಾಸ (ಎಂಬ ಚಿಹ್ನೆಯು ಅನುನಾಸಿಕೀಕರಣವನ್ನು ಸೂಚಿಸುತ್ತದೆ). ಲಂಬಾಣಿ ಭಾಷೆಯಿಂದ ಇದಕ್ಕೆ ಉತ್ತಮ ಉದಾಹರಣೆಗಳನ್ನು ಕೊಡಬಹುದು :

ವಂಶ>ವಾಸ
ಧೂಮ>ಧೂ
ಪಂಚ>ಪಾಚ್

ಲ್ಯಾಟಿನ್. ಚಂತಾರೆ>ಫ್ರೆಂಚ್. ಶಾತೆಯೂ ಇದಕ್ಕೆ ಒಳ್ಳೆಯ ಉದಾಹರಣೆ.

ದೀರ್ಘಸ್ವರಗಳು ಹ್ರಸ್ವವಾಗಿ ಸರಳಗೊಳ್ಳುವುದುಂಟು. ಪೂರ್ವದ ಹಳಗನ್ನಡ. ಬಿಲ್ಲಾನ್>ಹಳಗನ್ನಡ. ಬಿಲ್ಲನ್ ; ಇರವಾನ್>ಇರವನ್ ; ತಪ್ಪಾದೆ>ತಪ್ಪದೆ— ಇವುಗಳನ್ನು ಉದಾಹರಣೆಗಳಾಗಿ ಕೊಡಬಹುದು.

ಧ್ವನಿವ್ಯತ್ಯಾಸಗಳಲ್ಲಿ ಬಹು ಸೋಜಿಗವಾದುದು ಅಕ್ಷರಪಲ್ಲಟ. ಒಂದು ಪದದಲ್ಲಿರುವ ಧ್ವನಿಗಳು ಸ್ಥಾನಪಲ್ಲಟವಾಗುವುದೇ **ಅಕ್ಷರಪಲ್ಲಟ** ಅಥವಾ **ವರ್ಣವ್ಯತ್ಯಯ** (Metathesis)

ಕನ್ನಡ—ಅಸಗ>ಅಗಸ
ಕಾಗದ>ಕಾದಗ
ಅರಲ್>ಅಲರ್
ಮರಲ್>ಮಲರ್

ಸಂಸ್ಕೃತದಲ್ಲಿ ನಾಲಿಕೇರ, ನಾರಿಕೇಲ ಎಂಬ ಎರಡು ರೂಪಗಳೂ ಇವೆ. ಲಖ್ನೋ ಪಟ್ಟಣಕ್ಕೆ ಲಖನೌ, ನಖಲೌ ಎಂಬ ಎರಡು ಹೆಸರುಗಳೂ ಉಂಟು. ಹಳೆಯ ಇಂಗ್ಲಿಷಿನಲ್ಲಿ 'ask' ಎಂಬರ್ಥದಲ್ಲಿ āscian, ācsian ಎಂಬ ಎರಡು ರೂಪಗಳೂ ಇವೆ.

ಒಂದು ಪದದಲ್ಲಿ ಸದೃಶವಾಗಿರುವ ಅಕ್ಷರಗಳು ಒಟ್ಟಿಗೆ ಬಂದರೆ ಅವುಗಳಲ್ಲಿ ಒಂದು ಲೋಪವಾಗುವುದುಂಟು. ಇದನ್ನು **ಸದೃಶಾಕ್ಷರಲೋಪ**ವೆನ್ನುತ್ತಾರೆ (Haplology). ವೀರರಾಜಪೇಟೆ>ವೀರಾಜಪೇಟೆ ಎಂದು ಕೆಲವರ ಬಾಯಲ್ಲಿ ಆಗುವುದುಂಟು. ಬೆಳಕು + ಕಿಂಡಿ >ಬೆಳಕಿಂಡಿ ; morpho-phonemics>morphonemics ಇವು ಇನ್ನೂ ಕೆಲವು ಉದಾಹರಣೆಗಳು.

ದ್ವಿತ್ವಾಕ್ಷರದಿಂದ ಆರಂಭವಾಗುವ ಪದವಿದ್ದರೆ ಅದರ ಆರಂಭದಲ್ಲಿ ಸ್ವರವನ್ನು ತಂದು ಉಚ್ಚರಿಸುವುದೇ **ಆದಿಸ್ವರಾಗಮ** (Prosthesis). ಇಂಗ್ಲಿಷಿನ school, stand ಮುಂತಾದುವು ಅನೇಕ ಹಳ್ಳಿಗರ ಬಾಯಲ್ಲಿ ಇಸ್ಕೂಲು, ಇಸ್ಟ್ಯಾಂಡು ಎಂದಾಗುವುದನ್ನು ಇಲ್ಲಿ ನೆನೆಯಬಹುದು. ತಮಿಳಿನಲ್ಲಿ ಯಾವ ಪದವೂ ರ, ಲ ಗಳಿಂದ ಆರಂಭವಾಗ ಕೂಡದು. ಹಾಗೆ ಆರಂಭವಾಗುವ ಪದಗಳನ್ನು ಬೇರೆ ಭಾಷೆಯಿಂದ ಸ್ವೀಕರಿಸಿದರೆ ಅವುಗಳ ಹಿಂದೆ ಸ್ವರವನ್ನು ತಂದು ಉಚ್ಚರಿಸುತ್ತಾರೆ. ಅರಶನ್, ಉಲೋಕಂ (ಉಲಗಂ) ಎಂಬ

ಪದಗಳು ಸಂಸ್ಕೃತದ ರಾಜನ್, ಲೋಕ ಎಂಬ ಪದಗಳ ತದ್ಭವಗಳು. ಇವು ಕೂಡ ಆದಿ ಸ್ವರಾಗಮಕ್ಕೆ ಉದಾಹರಣೆಗಳು.

ಉಚ್ಚಾರಣಾ ಸೌಲಭ್ಯಕ್ಕಾಗಿ ಪದದಲ್ಲಿ ಹೊಸ ಧ್ವನಿಯೊಂದನ್ನು ತಂದು ಉಚ್ಚರಿಸುವುದೂ ಉಂಟು. ಇದನ್ನು 'Glide' (**ಧ್ವನಿಜಾರು**) ಎಂದು ಕರೆಯುತ್ತಾರೆ. '**ml**' ಎಂಬುದನ್ನು ಉಚ್ಚರಿಸುವುದಕ್ಕಿಂತ 'mpl' ಎಂದೋ 'mbl' ಎಂದೋ ಉಚ್ಚರಿಸುವುದು ಸುಲಭವಾಗುತ್ತದೆ. ಅದಕ್ಕೋಸ್ಕರ 'humle' ಎಂಬುದು 'humble' ಎಂದಾಯಿತು. **empty, gamble** ಎಂಬ ಪದಗಳಲ್ಲಿನ [p], [b]ಗಳು ಈಚೆಗೆ ಸೇರಿಕೊಂಡ ಧ್ವನಿಗಳು. ಕನ್ನಡದಲ್ಲೂ ಆಂಬ್ಲಜನಕ (<ಆಮ್ಲಜನಕ,) ತಾಂಬ್ರ (<ತಾಮ್ರ) ಎಂಬ ಪದಗಳ ಉಚ್ಚಾರಣೆಯಲ್ಲೂ ಧ್ವನಿಜಾರುಗಳನ್ನು ಗುರುತಿಸಬಹುದು. ಒಂದು ಧ್ವನಿಯನ್ನು ಉಚ್ಚರಿಸಿ ಇನ್ನೊಂದು ಧ್ವನಿಯ ಉಚ್ಚಾರಣೆಗೆ ಧ್ವನ್ಯಂಗಗಳು ಹೋಗುವಾಗ ಹೊರಡುವ ಧ್ವನಿಗಳೇ ಧ್ವನಿಜಾರುಗಳು (Glides).

ಈ ಪ್ರವೃತ್ತಿಗೆ ವಿರುದ್ಧವಾದ ಒಂದು ಪ್ರವೃತ್ತಿಯು ಕೆಲವೆಡೆ ಕಂಡುಬರುತ್ತದೆ. 'ಶ್ರವ' (=ಶವ), 'ತ್ರೊಂಬತ್ತು' (=ತೊಂಬತ್ತು)—ಇಂತಹ ಕೆಲವೆಡೆಗಳಲ್ಲಿ ಅನವಶ್ಯಕವಾಗಿ ರೇಫವನ್ನು ತಂದು ಉಚ್ಚರಿಸುವುದುಂಟು. ಹಾಗೆ ರೇಫವನ್ನು ತಂದದ್ದರಿಂದ ಉಚ್ಚಾರಣೆಯು ಕ್ಲಿಷ್ಟತೆ ಹೆಚ್ಚಿತೇ ಹೊರತು ಸೌಲಭ್ಯವೇನೂ ಸಾಧಿತವಾದಂತಾಗಲಿಲ್ಲ. ಹಾಗೆ ತಪ್ಪಾಗಿ ಉಚ್ಚರಿಸುವವರು ತಾವು ನಿಜವಾದ ನಾಗರಿಕ ರೂಪಗಳನ್ನೇ ಬಳಸುತ್ತಿರುವೆವೆಂದು ಭಾವಿಸುತ್ತಾರೆ.

ಹಳಗನ್ನಡ ಮತ್ತು ನಡುಗನ್ನಡಗಳಲ್ಲಿ ನಡೆದ ಧ್ವನಿವ್ಯತ್ಯಾಸಗಳ ಫಲವಾಗಿ ಕನ್ನಡದಿಂದ ಅನೇಕ ಪದಗಳು ಮರೆಯಾಗಿ ಹೋದುವು. [ೞ್] ಮತ್ತು [ಳ್] ಧ್ವನಿಗಳೂ, [ಱ್] ಮತ್ತು [ರ್] ಧ್ವನಿಗಳೂ ಪ್ರತ್ಯೇಕವಾಗಿರುವವರೆಗೆ ಕೆಳಗಿನ ಪದಗಳೂ ಅವುಗಳ ಭಿನ್ನ ಭಿನ್ನ ಅರ್ಥಗಳೂ ಪ್ರಚಾರದಲ್ಲಿದ್ದುವು.

| | |
|---|---|
| ಅರಿ | (=to cut) |
| ಅಱಿ | (=to know) |
| ಅರೆ | (=half) |
| ಅಱೆ | (=rock) |
| ಬಾಳೆ | (=a kind of fish) |
| ಬಾೞೆ | (=plantain) |
| ಆಳ್ | (=servant) |
| ಆೞ್ | (=to sink) |

[ಱ್] ವು [ರ್] ಆಗಿ, [ೞ್] ವು [ಳ್] ಆಗಿ ಪರಿವರ್ತಿತವಾದಾಗ ಮೇಲಿನ ಒಂದೊಂದು ಜೋಡಿಯ ಎರಡು ಪದಗಳೂ ಸಮಾನರೂಪದ ಪದಗಳಾದುವು (Homonyms). ಒಂದು ಭಾಷೆಯಲ್ಲಿ ಸಮಾನರೂಪದ ಪದಗಳಿದ್ದರೆ ಅರ್ಥಕಾರಣಕ್ಕಾಗಿ ಎಷ್ಟೋಸಾರಿ ಅವುಗಳಲ್ಲಿ ಒಂದು ಹೋಗಬಹುದು. ಕೆಲವು ಶತಕಗಳ ಹಿಂದೆ 'let' ಎಂಬ ಮಾತಿಗೆ 'ತಡೆ', 'ಬಿಟ್ಟುಬಿಡು' ಎಂಬ ಅರ್ಥವಿದ್ದುವು. ಇವೆರಡೂ ಭಿನ್ನ ಮೂಲದಿಂದ ಬಂದುವು. 'let him' ಎಂದಾಗ ಅವನನ್ನು ಬಿಟ್ಟುಬಿಡು, ಅವನನ್ನು ನಿಲ್ಲಿಸು ಎಂದು ಎರಡು ಅರ್ಥಗಳಾಗಬಹುದು. ಆದ್ದರಿಂದ 'ತಡೆ' ಎಂಬ ಅರ್ಥವು ಹೋಯಿತು. ಹಾಗೆಯೇ 'ಅಱಿ' (=to know) ಈ ಪದವು ಉಳಿಯಿತು; 'ಅರಿ' (=to cut) ಈ ಪದವು ಹೋಯಿತು, 'ಆೞ್' (=to sink) ಈ ಪದವು ಹೋಯಿತು; 'ಆಳ್' (=servant) ಈ ಪದವು ಉಳಿಯಿತು. ಅವು (=cow) ಹಾವು (=snake) ಈ ಎರಡು ಪದಗಳಲ್ಲಿ 'ಹಾವು' ಎಂಬಲ್ಲಿ ಹ ಕಾರವನ್ನು ಸರಿಯಾಗಿ ಉಚ್ಚರಿಸದಿದ್ದರೆ ಎಷ್ಟು ಅನರ್ಥವಾಗುತ್ತದೆ! 'ಆವು ಬಂದಿತು' ಎಂದಾಗ ಸರಿಯಾಗಿ ಅರ್ಥಗ್ರಹಣವಾಗದೇ ಇರಬಹುದು. ಬಹುಶಃ ಈ ಕಾರಣಕ್ಕಾಗಿ ಇರಬೇಕು—'ಅವು' ಎಂಬ ರೂಪ ಹೋಗಿ ಅದರ ಅರ್ಥದಲ್ಲಿ ಅದರ ಬಹುವಚನರೂಪವು ರೂಢಿಗೆ ಬಂದಿತು. ಅವು + ಕಳ್ → ಆಕಳ್—ನ್ಯಾಯವಾಗಿ ಇದರ ಅರ್ಥ 'ಹಸುಗಳು' ಎಂದು; ಆದರೆ ಹಸು ಎಂಬ ಏಕವಚನದಲ್ಲಿ ಬಳಕೆಯಾಗುತ್ತಿದೆ.

# 6 | ಅರ್ಥವ್ಯತ್ಯಾಸ

Semantics ಎಂದರೆ ಅರ್ಥವಿಜ್ಞಾನ. ಗ್ರೀಕಿನ 'Semantikos' ಎಂಬುದು 'Sema' ಎಂಬುದರಿಂದ ನಿಷ್ಪನ್ನವಾದುದು. 'Sema' ಎಂದರೆ ಚಿಹ್ನೆ (Sign) ಎಂದರ್ಥ. ಭಾಷೆಯಲ್ಲಿ ಪದಗಳೆಲ್ಲವೂ ಚಿಹ್ನೆಗಳು (ಅಥವಾ ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಸಂಕೇತಗಳು.) Semantics ಅಥವಾ ಅರ್ಥವಿಜ್ಞಾನವು ಭಾಷೆಯಲ್ಲಿ ಸಂಕೇತರೂಪ ಗಳಾದ ಪದಗಳು, ಅವುಗಳಿಗಿರುವ ಅರ್ಥಗಳು—ಇವುಗಳನ್ನು ಚರ್ಚಿಸುತ್ತದೆ. ಸಾಮಾನ್ಯ ಅರ್ಥವಿಜ್ಞಾನವು ಅರ್ಥವೆಂದರೇನು, ಪದ ಮತ್ತು ಅರ್ಥಗಳಿಗಿರುವ ಸಂಬಂಧ ಇತ್ಯಾದಿಗಳನ್ನು ಚರ್ಚಿಸುತ್ತದೆ. ಐತಿಹಾಸಿಕ ಅರ್ಥವಿಜ್ಞಾನವು ಅರ್ಥವ್ಯತ್ಯಾಸ ಗಳನ್ನು ಚರ್ಚಿಸುತ್ತದೆ.

ಅರ್ಥವೆಂದರೇನು ಎಂಬ ಪ್ರಶ್ನೆ ಮೇಲ್ನೋಟಕ್ಕೆ ಸುಲಭವಾಗಿ ಕಂಡರೂ ಅದರ ವಿವರಣೆ ಅಷ್ಟು ಸರಳವಾಗಿಲ್ಲ. 'ನಾಯಿ' ಎಂದರೆ ಅರ್ಥವೇನು ಎಂಬ ಪ್ರಶ್ನೆಗೆ 'dog' ಎಂದೋ 'ಶ್ವಾನ' ಎಂದೋ ಉತ್ತರಿಸಿದರೆ ಅದರ ಅರ್ಥವನ್ನು ಹೇಳಿದಂತಾಗಲಿಲ್ಲ. ಕನ್ನಡ ಪದಕ್ಕೆ ಸಂವಾದಿಯಾಗಿ ಇತರ ಭಾಷೆಗಳಲ್ಲಿರುವ ಪದಗಳನ್ನು ಹೇಳಿದಂತಾಯಿತು ಅಷ್ಟೇ. ನಾವು ನಾಯಿಯನ್ನು ನೋಡಿ (ಇದು ವಸ್ತು) 'ನಾಯಿ' ಎಂಬ ಪದವನ್ನು ಉಚ್ಚರಿಸುತ್ತೇವೆ ಎಂದಿಟ್ಟುಕೊಳ್ಳೋಣ. ಹಾಗೆ ಆ ಪದ ನಮ್ಮ ಬಾಯಿಂದ ಬರುವ ಮುನ್ನ ಆ ಪ್ರಾಣಿಯು ನಮ್ಮ ಮನಸ್ಸಿನಲ್ಲಿ ಪ್ರತಿಫಲಿತವಾಗಿರುತ್ತದೆ. ಇದನ್ನು ಚಿತ್ರ ವೆಂದು ಕರೆಯೋಣ. ವಸ್ತುವಿಗೂ ಚಿತ್ರಕ್ಕೂ ನೇರವಾದ ಸಂಬಂಧವಿರುವಂತೆ, ಚಿತ್ರಕ್ಕೂ ಪದಕ್ಕೂ ನೇರವಾದ ಸಂಬಂಧವಿರುವಂತೆ, ವಸ್ತುವಿಗೂ ಪದಕ್ಕೂ ನೇರವಾದ ಸಂಬಂಧ ವಿರುವುದಿಲ್ಲ. ನಾವು ಉಚ್ಚರಿಸುವ ಪದವು ವಸ್ತುವನ್ನು ಪ್ರತಿನಿಧಿಸುತ್ತದೆಯೋ ಅಥವಾ ವಸ್ತುವಿನ 'ಚಿತ್ರ'ವನ್ನು ಪ್ರತಿನಿಧಿಸುತ್ತದೆಯೋ? ಅಲ್ಲದೆ, 'ನಾಯಿ' ಎಂಬ ಪದ ವನ್ನೇ ತೆಗೆದುಕೊಂಡರೆ—ಅದರ ಕೋಶಾರ್ಥ ಎಲ್ಲರಿಗೂ ಸಮಾನವಾಗಿದ್ದರೂ ಅದರ ಸಾಂದರ್ಭಿಕ ಅರ್ಥಗಳು ಹಲವು ಬಗೆಯವಾಗಿರುತ್ತವೆ. ಅದು ಬೇರೆ ಬೇರೆ ಸಂದರ್ಭಗಳಲ್ಲಿ ದುಷ್ಟತನಕ್ಕೆ, ಮೂರ್ಖತನಕ್ಕೆ, ಆತಿಯಾಸೆಗೆ, ಪ್ರಾಮಾಣಿಕತೆಗೆ ಸಂಕೇತವಾಗ ಬಹುದು. ಒಂದೇ ಪದ ಕೇಳುವವರ ಸುಸ್ಕಾರ, ಅನುಭವಗಳಿಗನುಗುಣವಾಗಿ ಬೇರೆ ಬೇರೆ ಚಿತ್ರಗಳನ್ನೂ ಭಾವಗಳನ್ನೂ ತರಬಹುದು. ಆದ್ದರಿಂದ ನಾಯಿ ಎಂಬ ಪದದ

ಅರ್ಥ ಎಲ್ಲ ಸಂದರ್ಭಗಳಲ್ಲೂ ಎಲ್ಲ ಕಾಲಗಳಲ್ಲೂ ಎಲ್ಲ ವ್ಯಕ್ತಿಗಳಿಗೂ ಒಂದೇ ಬಗೆಯಾಗಿರುವುದಿಲ್ಲ. ನಾಯಿಯಂತಹ ಸ್ಥೂಲವಾಚಕ ಪದದ ಅರ್ಥದ ಜಟಿಲತೆಯೇ ಹೀಗಿರುವಾಗ ಅಮೂರ್ತವಾದ ಗುಣಗಳನ್ನೂ ಭಾವಗಳನ್ನೂ ಹೇಳುವ ಪದಗಳ ಅರ್ಥ ಇನ್ನೂ ಅನೇಕ ಸಮಸ್ಯೆಗಳನ್ನು ತಂದೊಡ್ಡುತ್ತದೆ. ನಾಯಿ ಎಂಬ ಪದಕ್ಕೆ ಮೂಲವಾಗಿ ಒಂದು ಪ್ರಾಣಿಯನ್ನು ತೋರಿಸಬಹುದು. ದಯೆ, ಸತ್ಯ, ಜ್ಞಾನ, ಗುಣ ಮುಂತಾದ ಪದಗಳಿಗೆ ಮೂಲವಸ್ತುಗಳು ಇರುವುದಿಲ್ಲ ; ಅವುಗಳ ವಿಷಯವಾಗಿ ನಮ್ಮಲ್ಲಿ ಒಂದು ರೀತಿಯಾದ ಭಾವನೆಯಿರುತ್ತದೆ, ಅಷ್ಟೇ. ಭಾಷೆಯಲ್ಲಿ ಎಷ್ಟೋ ಪದಗಳಿಗೆ ಅರ್ಥವೆಂಬುದೇ ಇರುವುದಿಲ್ಲ. 'the' ಮುಂತಾದ ಪದಗಳು ವಾಕ್ಯರಚನೆಗೆ ಸಹಾಯ ಮಾಡುವ ಪದಗಳು ಮಾತ್ರ. ಆದ್ದರಿಂದ 'ಅರ್ಥ'ವೆಂಬುದನ್ನು ವಿವರಿಸುವುದು ಅಷ್ಟು ಸುಲಭವಲ್ಲವೆಂಬುದು ಇಷ್ಟರಿಂದ ಸ್ಪಷ್ಟವಾಗುತ್ತದೆ. ಬಹು ಸ್ಥೂಲವಾಗಿ ಹೇಳುವುದಾದರೆ—ಮಾತನಾಡುವವನು ಒಂದು ಪದವನ್ನು ಬಳಸುವ ಸನ್ನಿವೇಶ, ಕೇಳುವವನಲ್ಲಿ ಅದು ಉಂಟುಮಾಡುವ ಪ್ರತಿಕ್ರಿಯೆ—ಇವು ಆ ಪದದ ಅರ್ಥ.[1] ವಸ್ತು ಮತ್ತು ಅದಕ್ಕಿರುವ ಹೆಸರು (ಅಥವಾ ಪದ) ಇವುಗಳಿಗಿರುವ ಪರಸ್ಪರ ಸಂಬಂಧವೇ ಅರ್ಥ ಎಂದೂ ಕೆಲವರು ವಿವರಿಸುವುದುಂಟು.

ಒಂದೊಂದು ಪದಕ್ಕೂ ಒಂದೊಂದು ಅರ್ಥವುಂಟು ಎಂಬುದು ನಮ್ಮೆಲ್ಲರ ಅನುಭವ. ಶಬ್ದ ಮತ್ತು ಅರ್ಥಗಳಿಗೆ ಪರಸ್ಪರ ಸಂಬಂಧವಿದೆಯೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಆ ಸಂಬಂಧ ನಿತ್ಯವಾದುದೇ ಅಥವಾ ಯಾದೃಚ್ಛಿಕವಾದುದೇ (Arbitrary) ಎಂಬ ವಿಷಯದಲ್ಲಿ ಪ್ರಾಚೀನರಿಗೂ ಆಧುನಿಕರಿಗೂ ಮತಭೇದವುಂಟು. ಪ್ರಾಚೀನ ಭಾರತ, ಗ್ರೀಕ್, ಲ್ಯಾಟಿನ್, ಅರೇಬಿಕ್ ವಿದ್ವಾಂಸರು ಶಬ್ದ ಮತ್ತು ಅರ್ಥಗಳಿಗಿರುವ ಸಂಬಂಧವು ನಿತ್ಯವೆಂದೂ ಸಹಜವೆಂದೂ ನಂಬಿದ್ದರು. ಇವರ ಪ್ರಕಾರ ನೆಲ ಎಂಬ ವಸ್ತುವಿಗೂ ಅದನ್ನು ಸೂಚಿಸುವ 'ನೆಲ' ಎಂಬ ಪದಕ್ಕೂ ಇರುವ ಸಂಬಂಧ ಸಹಜವಾದುದು, ಒಂದು ರೀತಿಯಾಗಿ ದೈವನಿರ್ಮಿತವಾದುದು. ಆದರೆ ಆಧುನಿಕರು ಇದನ್ನು ಎಳ್ಳಷ್ಟೂ ಮಾನ್ಯ ಮಾಡುವುದಿಲ್ಲ. ಭಾಷೆಯು ಉದ್ಗಾರಗಳಿಂದ ಆರಂಭವಾಯಿತು ಎಂದು ವಾದಿಸುವ ವಿದ್ವಾಂಸರು—ಹವ್‌ಬೋಲ್ಟ್, ಪೇಜೆಟ್, ಹಿಲ್ಮರ್, ಪಿಂಕಾಟ್ ಮುಂತಾದವರು—ಭಾಷೆಯು ಆರಂಭದಲ್ಲಿ ಉದ್ಗಾರವಾಗಿತ್ತೇ ಹೊರತು ನಿರೂಪಕವಾಗಿರಲಿಲ್ಲವೆಂದೂ ಆರಂಭದ ಪದಗಳಿಗೂ ಅರ್ಥಕ್ಕೂ ತೀರ ನಿಕಟವಾದ ಸಂಬಂಧವಿತ್ತೆಂದೂ ಹೇಳುವರು. ಅವರ ಪ್ರಕಾರ ಪದಗಳು ಅನುಕರಣಶೀಲವಾಗಿದ್ದುವು—ಭಾಷೆಯು ಉಗಮವಾದ ಪ್ರಾರಂಭದ ದೆಸೆಯಲ್ಲಿ.

---

1 "We have defined the *meaning* of a linguistic form as the situation in which the speaker utters it and the response which it calls forth in the hearer"—BLOOMFIELD

ಆದರೆ ಈ ಅಭಿಪ್ರಾಯಗಳನ್ನು ಬಹುಜನ ವಿದ್ವಾಂಸರು ಒಪ್ಪುವುದಿಲ್ಲ. ವ್ಹಿಟ್ನಿ ಟಕರ್, ಸೇಸ್, ಗ್ರೇ, ಸಸ್ಸೂರ್ ಮುಂತಾದವರ ಪ್ರಕಾರ ಅನುಕರಣಪದಗಳನ್ನು ಬಿಟ್ಟು ಉಳಿದೆಲ್ಲ ಪದಗಳಿಗೂ ಅರ್ಥಕ್ಕೂ ಇರುವ ಸಂಬಂಧ ಯಾದೃಚ್ಛಿಕವಾದುದು—ಎಂದರೆ ನಾವು ಒಂದು ಪದಕ್ಕೆ ಒಂದು ಅರ್ಥವನ್ನು ಒಪ್ಪಿಕೊಂಡಿರುವುದರಿಂದ ಆ ಪದಕ್ಕೆ ಆ ಅರ್ಥವಿರುತ್ತದೆ. ಶಬ್ದದಲ್ಲೇ ಅರ್ಥವನ್ನು ಸೂಚಿಸುವಂಥದು ಏನೂ ಇರುವುದಿಲ್ಲ. ನೆಲಕ್ಕೂ 'ನೆಲ' ಎಂಬ ಪದಕ್ಕೂ ಯಾವ ರೀತಿಯ ಸಂಬಂಧವೂ ಇಲ್ಲ. ಸಂಪ್ರದಾಯ ಮಾತ್ರ ಆ ಸಂಬಂಧವನ್ನು ಕಲ್ಪಿಸಿದೆ. ಒಂದು ಪದಕ್ಕಿರುವ ಅರ್ಥವು ಕಾಲಕ್ರಮೇಣ ವ್ಯತ್ಯಾಸಗೊಳ್ಳುವುದೂ ಇದನ್ನೇ ದೃಢಪಡಿಸುತ್ತದೆ.

ಮೂರನೆಯ ವಾದವೂ ಉಂಟು. ಅನುಕರಣ ಪದಗಳಲ್ಲೂ ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧವು ಆಕಸ್ಮಿಕವಾದುದು. ಎಲ್ಲಾ ಭಾಷೆಗಳಲ್ಲೂ ಒಂದೇ ರೀತಿಯಾದ ಅನುಕರಣ ಪದಗಳಿರುವುದಿಲ್ಲ. ಒಟ್ಟಿನಲ್ಲಿ ಸಸೂರನ ವಾದವು ಅಂಗೀಕಾರಾರ್ಹವಾದುದು. ಶಬ್ದಕ್ಕೂ ಅರ್ಥಕ್ಕೂ ಯಾವ ಆಂತರಿಕ ಸಂಬಂಧವೂ ಇಲ್ಲವಾದುದರಿಂದ ಅವುಗಳಿಗಿರುವ ಸಂಬಂಧವು ಯಾದೃಚ್ಛಿಕವಾದುದು. ಆ ಸಂಬಂಧವು ಒಂದು ರೀತಿಯಲ್ಲಿ ಸಹಜವಾದುದು, ಒಂದು ಅರ್ಥದಲ್ಲಿ. ಏಕೆಂದರೆ ಭಾಷೆಯನ್ನು ಕಲಿಯುವವರು ತಮಗೆ ಅರಿವಿಲ್ಲದೆಯೇ ಆಯಾ ಸಂದರ್ಭಗಳಿಂದ ಆಯಾ ಪದಗಳನ್ನು ಕಲಿತುಕೊಳ್ಳುತ್ತಾರೆ.

ಒಂದು ಪದವನ್ನು ಒಂದು ಸನ್ನಿವೇಶದಲ್ಲಿ ಬಳಸುತ್ತಿದ್ದು ಅದನ್ನು ಕಾಲಾನಂತರ ಇನ್ನೊಂದು ಸನ್ನಿವೇಶದಲ್ಲಿ ಬಳಸಲಾರಂಭಿಸಿದರೆ ಆ ಪದವು 'ಅರ್ಥವ್ಯತ್ಯಾಸ'ವನ್ನು ಪಡೆಯಿತು ಎಂದು ಹೇಳುತ್ತೇವೆ. ಆ ಇನ್ನೊಂದು ಸನ್ನಿವೇಶವು ಹಿಂದಿನ ಸನ್ನಿವೇಶಕ್ಕಿಂತ ಸಂಪೂರ್ಣ ಭಿನ್ನವಾಗಿರಬಹುದು, ಅಥವಾ ತಕ್ಕಮಟ್ಟಿಗೆ ಸದೃಶವಾಗಿರಬಹುದು. ಒಟ್ಟಿನಲ್ಲಿ ಪದದ ಅರ್ಥವ್ಯಾಪ್ತಿಯ ವ್ಯತ್ಯಾಸವೇ ಅದರ ಅರ್ಥವ್ಯತ್ಯಾಸ. ಹಳೆಯ ಅರ್ಥಕ್ಕೆ ಹೊಸದೊಂದು ಪದವು ಬಳಕೆಯಾದಾಗ ಅಥವಾ ಹೊಸ ಅರ್ಥದಲ್ಲಿ ಹಳೆಯ ಪದವೊಂದು ಬಳಕೆಯಾದಾಗ ಅರ್ಥವ್ಯತ್ಯಾಸವಾಯಿತೆಂದು ಕರೆಯುತ್ತೇವೆ. 'Wife' ಎಂಬ ಪದಕ್ಕೆ ಒಂದು ಕಾಲದಲ್ಲಿ ಸ್ತ್ರೀ ಎಂಬ ಅರ್ಥವಿದ್ದು ಈಗ ಹೆಂಡತಿ ಎಂಬ ಅರ್ಥ ಬಂದಿದೆ. (ಮೂಲಾರ್ಥವು House-wife ಮುಂತಾದ ಕಡೆಗಳಲ್ಲಿ ಉಳಿದುಕೊಂಡು ಬಂದಿದೆ.) ಕನ್ನಡದಲ್ಲಿ ಒಂದು ಕಾಲದಲ್ಲಿ 'ಅಮ್ಮ(ನ್)' ಎಂಬ ಪದಕ್ಕೆ ತಂದೆ ಎಂಬ ಅರ್ಥವಿದ್ದು ಕ್ರಮೇಣ ಅದಕ್ಕೆ ತಾಯಿ ಎಂಬ ಅರ್ಥವು ಪ್ರಾಪ್ತವಾಯಿತು. ಇದನ್ನೇ ಅರ್ಥವ್ಯತ್ಯಾಸವೆಂದು ಕರೆಯುವುದು.

ಒಂದು ಭಾಷೆಯ ಇತಿಹಾಸದಲ್ಲಿ ಒಂದು ಕಾಲದಲ್ಲಿದ್ದ ಅರ್ಥವು ಹೋಗಿ ಇನ್ನೊಂದು ಅರ್ಥವು ಬರಬಹುದು (ಮೇಲಿನ ಎರಡು ಪದಗಳು ಇದಕ್ಕೆ ನಿದರ್ಶನಗಳು). ಮೂಲ ಭಾಷೆ ಕವಲೊಡೆದುದರ ಪರಿಣಾಮವಾಗಿ ಉದ್ಭವಿಸಿದ ಸೋದರ ಭಾಷೆಗಳಲ್ಲೂ ಒಂದು ಪದ ಅಥವಾ ಜ್ಞಾತಿಪದಗಳು ಬೇರೆ ಬೇರೆ ಅರ್ಥಗಳನ್ನು ಹೊಂದಿರಬಹುದು. ಸಂಸ್ಕೃತ. ಧೂಮ (=ಹೊಗೆ), ಗ್ರೀಕ್. ಥುಮೊಸ್ (=ಆತ್ಮ); ಸಂಸ್ಕೃತ. ಆತ್ಮಾ

(=soul), ಗ್ರೀಕ್. ಅತ್ಮೊಸ್ (=ಹೊಗೆ); ಸಂಸ್ಕೃತ. ಗೃಹ, ಹಿಂದಿ. ಘರ್ (=ಮನೆ). ಆದರೆ ಬೆಂಗಾಲಿ. ಘರ್ (=ಕೊಠಡಿ); ಸಂಸ್ಕೃತದಲ್ಲಿ 'ನೀಲ'ವು blue ಬಣ್ಣವನ್ನು ಸೂಚಿಸಿದರೆ ಗುಜರಾತಿಯ 'ಲೀಲೋ'ವು ಹಸುರನ್ನು ಸೂಚಿಸುತ್ತದೆ. ಕನ್ನಡದ 'ನೀರ್' ಎಂಬ ಪದಕ್ಕೆ ಬ್ರಾಹೂಇಯಲ್ಲಿ ಪಾನಕ ಎಂಬರ್ಥವೂ ಇದೆ. ಕನ್ನಡದಲ್ಲಿ 'ಕಣ' ಎಂದರೆ ತೆನೆಗಳನ್ನು ಒಕ್ಕುವ ಪ್ರದೇಶವಾದರೆ ಕೋತ ಭಾಷೆಯಲ್ಲಿ ಈ ಅರ್ಥದ ಜೊತೆಗೆ ನರ್ತನ ಮಾಡುವ ಪ್ರದೇಶ ಎಂಬ ಅರ್ಥವೂ ಉಂಟು.

ಒಂದು ಭಾಷೆಯು ಬೇರೆಯ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿದಾಗ ಅನೇಕ ಅರ್ಥ ವ್ಯತ್ಯಾಸಗಳಾಗಬಹುದು. ಇಂಗ್ಲಿಷಿನ 'clock' ಪದವು ಗುಜರಾತಿಯಲ್ಲಿ 'ಕಲಾಕ್' ಎಂದಾಗಿ ಗಂಟೆ (=hour) ಎಂಬರ್ಥವನ್ನು ಪಡೆದಿದೆ. ತೆಲುಗಿನಿಂದ ಕನ್ನಡವು ಸ್ವೀಕರಿಸಿದ 'ಪೆದ್ದ' ಎಂಬ ಶಬ್ದಕ್ಕೆ ಮೂಲತಃ ದೊಡ್ಡ ಮನುಷ್ಯ ಎಂಬರ್ಥವಿದ್ದರೆ ಕನ್ನಡದಲ್ಲಿ ಮೂರ್ಖ, ದಡ್ಡ ಎಂಬರ್ಥಗಳಿವೆ. ಸಂಸ್ಕೃತದಿಂದ ಕನ್ನಡವು ಸ್ವೀಕರಿಸಿರುವ ನೂರಾರು ಪದಗಳಲ್ಲಿ ಈ ಅರ್ಥವ್ಯತ್ಯಾಸವನ್ನು ಕಾಣುತ್ತೇವೆ.

| | | | |
|---|---|---|---|
| ಸಂಸ್ಕೃತ | ಅವಸರ (=ಸಮಯ) | ಕನ್ನಡ | ಅವಸರ (=ಆತುರ) |
| " | ಭದ್ರ (=ಮಂಗಳ) | " | ಭದ್ರ (=ರಕ್ಷಿತ) |
| " | ಘರ್ವ (=ಬೆವರು) | " | ಗಮ್ಮ (=ಸೆಖೆ) |

'ಅವಸರ' ಎಂಬ ಪದಕ್ಕೆ ಹಳಗನ್ನಡದಲ್ಲಿ ಮೂಲಾರ್ಥವೇ ಬಳಕೆಯಲ್ಲಿದ್ದಿತೆಂಬುದನ್ನು ಇಲ್ಲಿ ಸ್ಮರಿಸಬಹುದು.

ಸಂಸ್ಕೃತದಿಂದ ಕನ್ನಡವು ಸ್ವೀಕರಿಸಿರುವ ಒಂದು ಪದವು ತಕ್ಕಮಟ್ಟಿಗೆ ಸ್ವಸ್ವರೂಪದಲ್ಲಿಯೂ ಬಳಕೆಯಾಗುತ್ತಿದ್ದು ಅದರ ತದ್ಭವವೂ ಅದರ ಜೊತೆಜೊತೆಗೇ ಬಳಕೆಯಾಗುತ್ತಿದ್ದರೆ ಅಂತಹ ಪದಗಳಲ್ಲಿ ಸ್ವಸ್ವರೂಪದಲ್ಲಿ ಬಳಕೆಯಾಗುತ್ತಿರುವ ಪದಕ್ಕೆ ಉತ್ತಮಾರ್ಥವೂ ತದ್ಭವಕ್ಕೆ ಹೀನಾರ್ಥವೂ ಪ್ರಾಪ್ತವಾಗಿರುವುದು ಕಂಡುಬರುತ್ತದೆ. ಕೆಳಗಿನ ಪಟ್ಟಿಯು ಇದನ್ನು ಸ್ಪಷ್ಟಪಡಿಸುತ್ತದೆ. ಜೋಡಿಯಲ್ಲಿನ ಮೊದಲನೆಯ ಪದವು ಸ್ವಸ್ವರೂಪದ ಪದ (ತತ್ಸಮ); ಎರಡನೆಯ ಪದ ತದ್ಭವ. (ಈ ತದ್ಭವಗಳಲ್ಲಿ ಬಹುಪಾಲು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದಿವೆಯೆಂಬುದನ್ನು ಗಮನಿಸಬೇಕು).

| | | |
|---|---|---|
| ಕನ್ನಡ— | ಯೋಗಿ | (=ದೊಡ್ಡ ಋಷಿ) |
| | ಜೋಗಿ | (=ಭಿಕ್ಷುಕ) |
| | ಸಂಸ್ಥೆ | (=Organisation) |
| | ಸಂತೆ | (=bazar) |
| | ಪರಿಷತ್ | (=academy) |
| | ಪರ್ಸೆ | (=ಗುಂಪು) |

| | |
|---|---|
| (ಯಾತ್ರೆ | (=ತೀರ್ಥಯಾತ್ರೆ) |
| (ಜಾತ್ರೆ | (=ಜನಗಳ ಗುಂಪು, ಸಂತೆ) |
| (ದೈವ | (=God) |
| (ದೆವ್ವ | (=ghost) |
| (ಚಾಮುಂಡಿ | (=ಒಬ್ಬ ದೊಡ್ಡ ದೇವತೆ) |
| (ಚೌಡಿ | (= ಒಬ್ಬ ಕ್ಷುದ್ರ ದೇವತೆ) |
| (ವೀರ | (=a hero) |
| (ಬೀರ | (= ಒಬ್ಬ ಕ್ಷುದ್ರವ್ಯಕ್ತಿ) |
| (ಶಿಲ್ಪಿ | (=a sculptor) |
| (ಚಿಪ್ಪಿಗ | (=a tailor) |
| (ಬ್ರಹ್ಮ | (=ತ್ರಿಮೂರ್ತಿಗಳಲ್ಲೊಬ್ಬ) |
| (ಬೊಮ್ಮ | (= ಒಬ್ಬ ಕ್ಷುದ್ರದೇವತೆ) |
| (ತಾಂಬೂಲ | (=ಎಲೆ, ಅಡಿಕೆ ಇತ್ಯಾದಿ) |
| (ತಂಬುಲ | (= ಎಂಜಲು). |

ಈ ಪಟ್ಟಿಯನ್ನು ಇನ್ನೂ ಸಾಕಷ್ಟು ಬೆಳೆಸಬಹುದು. ಒಂದು ಭಾಷೆಯಲ್ಲಿ ಒಂದೇ ಅರ್ಥವನ್ನು ಹೇಳಲು ಎರಡು ಪದಗಳಿದ್ದರೆ ಆಗ ಆ ಎರಡು ಪದಗಳಿಗೂ ಸ್ವಲ್ಪ ಭಿನ್ನವಾದ ಅರ್ಥಗಳನ್ನು ಆರೋಪಿಸುವುದು ಭಾಷಾಪ್ರವೃತ್ತಿ. ಬಹುಶಃ ಈ ಪ್ರವೃತ್ತಿಯ ಫಲವೇ ಇರಬಹುದು—ತದ್ಭವಗಳಿಗೆ ಭಿನ್ನವಾದ ಅರ್ಥ ಬಂದಿರುವುದು. ಸಂಸ್ಕೃತವು ನಮಗೆ ಮೊದಲಿಂದಲೂ ಪೂಜ್ಯಭಾಷೆಯಾದ್ದರಿಂದ ಅದರ ಪದಗಳನ್ನು ಬಹುಮಟ್ಟಿಗೆ ಹೋಲುವ ಪದಗಳಿಗೆ ಅಥವಾ 'ಸಮಸಂಸ್ಕೃತ'ಗಳಿಗೆ ( =ತತ್ಸಮ. ಉದಾ : ಸಂಸ್ಥಾ-**ಸಂಸ್ಥೆ**) ಉತ್ತಮಾರ್ಥವೂ, ಹೆಚ್ಚು ವಿರೂಪಗೊಂಡಿರುವ ಪದಗಳಿಗೆ (ಸಂಸ್ಥಾ-ಸಂಸ್ಥೆ-**ಸಂತೆ**) ಹೀನಾರ್ಥವೂ ಬಂದಿರಲು ಸಾಧ್ಯ. ಮೇಲಿನ ಮಾತುಗಳು ಎಲ್ಲ ತದ್ಭವಗಳಿಗೂ ಅನ್ವಯಿಸುವುದಿಲ್ಲ.

ಒಂದು ಭಾಷೆಯ ಬೇರೆ ಬೇರೆ ಉಪಭಾಷೆಗಳಲ್ಲಿ ಒಂದು ಪದಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗಿರುವುದುಂಟು. 'ತಿಂಡಿ' ಎಂಬ ಪದಕ್ಕೆ ದಕ್ಷಿಣ ಕರ್ನಾಟಕದಲ್ಲಿ ತಿನ್ನಲು ಯೋಗ್ಯವಾದ ವಸ್ತು ಎಂಬರ್ಥವಿದ್ದರೆ ಉತ್ತರ ಕರ್ನಾಟಕದಲ್ಲಿ ತೀಟೆ ಎಂಬರ್ಥವಿದೆ. ಮೈಸೂರಿನ ಕಡೆ 'ಆಹ್ವಾನ' ಎಂದರೆ Invitation ಎಂಬರ್ಥವಿದ್ದರೆ, ಉತ್ತರ ಕರ್ನಾಟಕದಲ್ಲಿ Challenge ಎಂಬರ್ಥವಿದೆ. 'ಅಮ್ಮ' ಎಂದರೆ ಮೈಸೂರು ಉಪಭಾಷೆಯಲ್ಲಿ ತಾಯಿ ಎಂದರ್ಥ ; ಉತ್ತರ ಕರ್ನಾಟಕದಲ್ಲಿ ವಿಧವೆ ಎಂದರ್ಥ. ಒಂದು ಭಾಷೆಯ ಉಪಭಾಷೆಗಳನ್ನು ಗುರುತಿಸಲು ಈ ಬೇರೆ ಬೇರೆ ಅರ್ಥಗಳೂ ಸಹಾಯ ಮಾಡುತ್ತವೆ.

ಅರ್ಥವ್ಯತ್ಯಾಸದ ಪ್ರಭೇದಗಳಲ್ಲಿ ಮುಖ್ಯವಾಗಿ ನಾಲ್ಕು ಅಥವಾ ಐದನ್ನು ಹೆಸರಿಸಬಹುದು :

(i) ಅರ್ಥಸಂಕೋಚ (Narrowing)
(ii) ಅರ್ಥವಿಕಾಸ (Widening)
(iii) ಹೀನಾರ್ಥಪ್ರಾಪ್ತಿ (Degeneration)
(iv) ಉತ್ತಮಾರ್ಥಪ್ರಾಪ್ತಿ (Elevation)
(v) ಅರ್ಥಾಂತರ (Transference)

(i) **ಅರ್ಥಸಂಕೋಚ** : ಒಂದು ಕಾಲದಲ್ಲಿ ವಿಸ್ತಾರವಾದ ಅರ್ಥವಿದ್ದು ಕ್ರಮೇಣ ಆ ಅರ್ಥವು ಸಂಕುಚಿತವಾದರೆ ಅದನ್ನು ಅರ್ಥಸಂಕೋಚವೆಂದು ಕರೆಯುತ್ತಾರೆ. ಅರ್ಥ ಸಂಕೋಚವು ಎಲ್ಲಾ ಭಾಷೆಗಳಲ್ಲೂ ಸಾಮಾನ್ಯ, ಆದ್ದರಿಂದ ಇದಕ್ಕೆ ಹೆಚ್ಚು ಉದಾ ಹರಣೆಗಳು ಸಿಕ್ಕುತ್ತವೆ. ಹಳೆಯ ಇಂಗ್ಲಿಷಿನಲ್ಲಿ meat ಎಂದರೆ ಆಹಾರ ಎಂಬ ವಿಸ್ತಾರ ವಾದ ಅರ್ಥವಿದ್ದಿತು. ಬೈಬಲ್ಲಿನಲ್ಲಿ ಸಸ್ಯಾದಿಗಳನ್ನು ಕುರಿತು ಹೇಳುವಾಗ ಬರುವ "To you they shall be for meat" ಎಂಬ ಮಾತುಗಳನ್ನು ಇಲ್ಲಿ ಸ್ಮರಿಸಬಹುದು. ಕ್ರಮೇಣ ಈ ಪದಕ್ಕೆ ತಿನ್ನಲು ಯೋಗ್ಯವಾದ ಮಾಂಸ ಎಂಬರ್ಥವು ಬಂದಿತು. ಇಂಗ್ಲಿಷಿ ನಲ್ಲಿ wife ಎಂಬ ಪದಕ್ಕೆ ಸ್ತ್ರೀ ಎಂಬ ಅರ್ಥವಿದ್ದು ಈಗ ಹೆಂಡತಿ ಎಂಬ ಸಂಕುಚಿತವಾದ ಅರ್ಥವಿದೆ. ಈ ಎರಡು ಪದಗಳ ಮೂಲಾರ್ಥವು sweet-meats, house-wife ಮುಂತಾದ ಪದಗಳಲ್ಲಿ ಕಂಡುಬರುತ್ತದೆ. ಹಳೆಯ ಇಂಗ್ಲಿಷಿನಲ್ಲಿ 'hund' ಎಂದರೆ ನಾಯಿ ಎಂಬರ್ಥವಿದ್ದು, ಅದರ ರೂಪಾಂತರವಾದ 'hound' ಎಂಬ ಪದಕ್ಕೆ ಈಗ ಒಂದು ಜಾತಿಯ ನಾಯಿ, ಬೇಟೆನಾಯಿ ಎಂಬರ್ಥವಿದೆ. 'deer' ಎಂದರೆ ಪ್ರಾಣಿ— ಇದು ಮೂಲಾರ್ಥ. ಈಗ ಜಿಂಕೆ ಎಂಬರ್ಥದಲ್ಲಿ ಬಳಕೆಯಾಗುತ್ತಿದೆ. ಕನ್ನಡದಲ್ಲಿ ಪೊನ್ ಎಂದರೆ ಲೋಹ ಎಂಬ ವಿಶಾಲವಾದ ಅರ್ಥವಿದ್ದಿತು. ಅದು 'ಕಬ್ಬಿಣ' ಎಂಬ ಪದದಲ್ಲಿ ಉಳಿದುಕೊಂಡು ಬಂದಿದೆ (ಕರ್‌ಪೊನ್ > ಕರ್ಬೊನ್ > ಕಬ್ಬುನ > ಕಬ್ಬಿಣ. ಕರ್ + ಪೊನ್ = ಕರಿಯ ಲೋಹ, Iron.) ಕ್ರಮೇಣ ಆ ಪದಕ್ಕೆ ಚಿನ್ನ ಎಂಬ ಅರ್ಥ ಬಂದು, ಚಿನ್ನದಿಂದ ಮಾಡಿದ ನಾಣ್ಯ (ಹೊನ್ನು) ಎಂಬ ಅರ್ಥದಲ್ಲಿ ಅರ್ಥವು ಇನ್ನೂ ಸಂಕೋಚ ವಾಯ್ತು. ಒಡವೆ ಎಂದರೆ ಮೂಲಾರ್ಥ ಆಸ್ತಿಯೆಂದು, ಈಗ ಆಭರಣ ಎಂದಾಗುತ್ತದೆ. ಅಣಕ ಎಂದರೆ ಕಾಟ ಎಂದರ್ಥ ; ಈಗ ಅಣಕಿಸು ಎಂಬ ಸಂಕುಚಿತವಾದ ಅರ್ಥವಿದೆ. ಮೀನ್ ಪದಕ್ಕೆ 'ಮಿನುಗುವ ವಸ್ತು' ಎಂಬರ್ಥದಲ್ಲಿ ಮತ್ಸ್ಯ, ನಕ್ಷತ್ರ ಎಂಬರ್ಥಗಳಿ ದ್ದುವು. ಈಗ ಮತ್ಸ್ಯ ಎಂಬರ್ಥದಲ್ಲಿ ಮಾತ್ರ ಬಳಕೆಯಲ್ಲಿದೆ. 'ನೆಯ್' ಎಂದರೆ ಮೂಲಾರ್ಥ ಜಿಡ್ಡು ಎಂದು. ಇದನ್ನು ಬೆಣ್ಣೆ (ಬೆಳ್ + ನೆಯ್), ಎಣ್ಣೆ (ಎಳ್ + ನೆಯ್) ಮುಂತಾದ ಕಡೆಗಳಲ್ಲಿ ನೋಡಬಹುದು. ಆದರೆ ಅದು ಕೋತ, ನಾಯ್ಕಿ ಭಾಷೆಗಳಲ್ಲಿ ತುಪ್ಪ ಎಂದಾಗಿದೆ. ತಮಿಳಿನಲ್ಲೂ ಜಿಡ್ಡು, ಎಣ್ಣೆ ಎಂಬರ್ಥಗಳ ಜೊತೆಯಲ್ಲಿ ಬೆಣ್ಣೆ, ತುಪ್ಪ, ಜೇನುತುಪ್ಪ ಎಂಬರ್ಥಗಳಿವೆ. ಇಲ್ಲೆಲ್ಲಾ ಅರ್ಥಸಂಕೋಚವಾಗಿದೆ. ಸಂಧ್ಯಾ ಎಂದರೆ ಸಂಸ್ಕೃತದಲ್ಲಿ ಪ್ರಾತಃಕಾಲ ಸಾಯಂಕಾಲಗಳೆರಡೂ ಆಗುತ್ತವೆ. ಅದರ ತದ್ಭವವಾದ 'ಸಂಜೆ' ಪದಕ್ಕೆ ಕನ್ನಡದಲ್ಲಿ ಸಾಯಂಕಾಲ ಎಂಬ ಅರ್ಥ ಮಾತ್ರವಿದೆ.

(ii) **ಅರ್ಥವಿಕಾಸ :** ಹಿಂದೆ ಸಂಕುಚಿತವಾದ ಅರ್ಥವಿದ್ದು ಕ್ರಮೇಣ ವಿಶಾಲವಾದ ಅರ್ಥವು ಪ್ರಾಪ್ತವಾದರೆ ಅದನ್ನು ಅರ್ಥವಿಕಾಸ ಎಂದು ಕರೆಯುತ್ತಾರೆ. ಇದಕ್ಕೆ ಉದಾಹರಣೆಗಳು ಹೆಚ್ಚಾಗಿ ಸಿಗುವುದಿಲ್ಲ. ಇಂಗ್ಲಿಷಿನಲ್ಲಿ 'dogge' ಎಂಬ ಪದಕ್ಕೆ ಒಂದು ವಿಶಿಷ್ಟ ಜಾತಿಯ ನಾಯಿ ಎಂಬರ್ಥವಿದ್ದು ಈಗ ಅದರ ರೂಪಾಂತರವಾದ 'dog' ಎಂಬ ಪದವು ಒಟ್ಟು ನಾಯಿಗಳ ಜಾತಿಯನ್ನೇ ಸೂಚಿಸುತ್ತದೆ. 'place' ಎಂಬ ಪದಕ್ಕೆ ಅಗಲವಾದ ಬೀದಿ ಎಂಬರ್ಥವಿದ್ದು, ಈಗ ಒಟ್ಟು ಪ್ರದೇಶ ಎಂಬರ್ಥವಿದೆ. ಕನ್ನಡದಲ್ಲಿ 'ಓಲೆ' ಎಂಬ ಪದವು ತಾಳೆಯಗರಿಯಿಂದ ಮಾಡಿದ ಕಿವಿಯ ಆಭರಣವನ್ನು ಸೂಚಿಸುತ್ತಿದ್ದು, ಈಗ ಬೇರೆ ಸಾಮಗ್ರಿಗಳಿಂದ ಬೇರೆ ಬೇರೆ ರೀತಿಗಳಲ್ಲಿ ಮಾಡಿದ ಕಿವಿಯ ಆಭರಣಗಳನ್ನು ಸೂಚಿಸುತ್ತದೆ. ಬೆಂಡೋಲೆ, ಮುತ್ತಿನೋಲೆ, ವಜ್ರದೋಲೆ ಇತ್ಯಾದಿಗಳಲ್ಲಿ ಇದನ್ನು ಕಾಣಬಹುದು. ಎಣ್ಣೆ (<ಎಳ್ + ನೆಯ್) ಎಂಬುದು ಮೂಲತಃ ಎಳ್ಳಿನಿಂದ ತೆಗೆದ ಜಿಡ್ಡನ್ನು ಸೂಚಿಸುತ್ತಿದ್ದು, ಈಗ ಒಟ್ಟು 'Oil' ಎಂಬರ್ಥದಲ್ಲಿ ಬಳಕೆಯಾಗುತ್ತಿದೆ. ಎಳ್ಳಿನಿಂದ ತೆಗೆದ ಜಿಡ್ಡು ಎಂದು ಹೇಳಬೇಕಾದರೆ 'ಎಳ್ಳೆಣ್ಣೆ' ಎಂದು ಹೇಳಬೇಕಾಗುತ್ತದೆ.

ಅರ್ಥವಿಕಾಸವನ್ನು ಇನ್ನೊಂದು ರೀತಿಯ ಪದಗಳಲ್ಲಿ ಕಾಣಬಹುದು. ಒಬ್ಬ ವ್ಯಕ್ತಿಯ ಹೆಸರು ಒಂದು ಗುಣಕ್ಕೆ ಅಥವಾ ಸ್ವಭಾವಕ್ಕೆ ಪ್ರತಿನಿಧಿಯಾಗಿ ನಿಲ್ಲಬಹುದು. ಅಂತಹ ಸಮಯದಲ್ಲಿ ವಿಶಾಲವಾದ ಅರ್ಥವು ಪ್ರಾಪ್ತವಾಗುತ್ತದೆ. 'ಅವನೊಬ್ಬ ಭೀಮ', 'ಇವಳೊಬ್ಬಳು ತಾಟಕಿ', 'ಇವನು ಮೀರಸಾದಿಕ್, ಇವನನ್ನು ನಂಬಬಾರದು', 'ಇವನದು ತೊಗಲಕನ ರಾಜ್ಯಭಾರ' ಇತ್ಯಾದಿ ಕಡೆಗಳಲ್ಲಿ ಅರ್ಥವಿಕಾಸವನ್ನು ಗುರುತಿಸಬಹುದು. ತಾಟಕಿ ಎಂದರೆ ದುಷ್ಟೆ ಎಂಬ, ಮೀರಸಾದಿಕ್ ಎಂದರೆ ಮೋಸಗಾರ ಎಂಬ ಅರ್ಥಗಳು ಬಂದಿವೆ.

(iii) **ಹೀನಾರ್ಥಪ್ರಾಪ್ತಿ :** ಒಂದು ಕಾಲದಲ್ಲಿ ಉತ್ತಮಾರ್ಥವಿದ್ದು ಕ್ರಮೇಣ ಆ ಪದಕ್ಕೆ ಕೆಟ್ಟ ಅರ್ಥವು ಪ್ರಾಪ್ತವಾದರೆ ಅದನ್ನು ಹೀನಾರ್ಥಪ್ರಾಪ್ತಿ ಎಂದು ಕರೆಯುತ್ತಾರೆ. ಇದಕ್ಕೆ ಎಲ್ಲ ಭಾಷೆಗಳಲ್ಲೂ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ಹಳೆಯ ಇಂಗ್ಲಿಷಿನಲ್ಲಿ 'knave' ಎಂದರೆ ಬಾಲಸೇವಕ ಎಂಬರ್ಥವಿದ್ದು ಈಗ ಮೂರ್ಖ, ಮೋಸಗಾರ ಎಂಬರ್ಥಗಳಿವೆ. ಹಿಂದಿಯಲ್ಲಿ ಗಂವಾರ್ (ಗುಜರಾತಿ. ಗಮಾರ್) ಎಂದರೆ ಗ್ರಾಮದವನು, ಹಳ್ಳಿಯವನು ಎಂದರ್ಥ. ಕ್ರಮೇಣ ದಡ್ಡ ಎಂಬರ್ಥ ಬಂದಿತು. 'Heathen' ಎಂದರೆ 'One who lived on the heath' ಎಂದರ್ಥ. ಕ್ರಮೇಣ ಕ್ರಿಶ್ಚಿಯನ್ ಧರ್ಮದ ತತ್ತ್ವಗಳನ್ನು ಅರಿಯದ ಅಜ್ಞಾನಿ, ಪಾಪಿ ಎಂಬರ್ಥಗಳು ಬಂದುವು. ಕನ್ನಡದಲ್ಲಿ ಆಳ್ ಎಂದರೆ ಹಿಂದೆ ಶೂರ ಎಂಬರ್ಥವಿತ್ತು, ಈಗ ಸೇವಕ ಎಂದಾಗಿದೆ ; ಕೂಳ್ ಎಂದರೆ ಆಹಾರ (ತಣ್ + ಕೂಳ್ → ತಂಗೂಳ್ ಎಂಬಲ್ಲಿ ಇದನ್ನು ಕಾಣಬಹುದು), ಈಗ ಇದಕ್ಕೆ ಕೆಟ್ಟ ಅರ್ಥವಿದೆ ; 'ದೇಗುಲ'ದ ಮೂಲರೂಪ 'ದೇವಕುಲ' (=ದೇವಸ್ಥಾನ)—ಈಗ ಹಾಳು ದೇಗುಲ ಎಂಬಲ್ಲಿ ಅದಕ್ಕೆ ಹೀನಾರ್ಥ

ಬಂದಿದೆ. ಕನ್ನಡದ ಅನೇಕ ತದ್ಭವಗಳಿಗೆ ಹೀನಾರ್ಥ ಪ್ರಾಪ್ತಿಯಾಗಿರುವುದನ್ನು ಹಿಂದೆಯೇ ನೋಡಿದ್ದೇವೆ. (ದೇಗುಲವೂ ಅಂತಹ ತದ್ಭವವೇ). ಗಾಳಿ ಎಂಬ ಪದಕ್ಕೆ ಕೆಲವೆಡೆಗಳಲ್ಲಿ ಪಿಶಾಚಿ ಎಂಬರ್ಥವೂ ಇದೆ. ಅಮ್ಮ ಎಂಬ ಪದಕ್ಕೆ ಕೆಲವೆಡೆಗಳಲ್ಲಿ ವಿಧವೆ ಎಂಬರ್ಥವಿದೆ. ಅಬ್ಬೆ ಎಂಬುದು ಒಂದು ಕಾಲಕ್ಕೆ ಕನ್ನಡದಲ್ಲಿ ತಾಯಿ ಎಂಬ ಅರ್ಥವನ್ನು ಕೊಡುತ್ತಿತ್ತು. ಈಗ ಅದು ಮಧ್ಯಕರ್ನಾಟಕದಲ್ಲಿ 'ಬೇ' ಎಂದಾಗಿ ಕೆಳವರ್ಗದ ಸ್ತ್ರೀಯರನ್ನು ಸಂಬೋಧಿಸುವ ಪದವಾಗಿ ಪರಿಣಮಿಸಿದೆ. ನಮಗೆ ಗೊತ್ತಿರುವಂತೆಯೇ ಕಾಂಗ್ರೆಸ್, ಟೋಪಿ ಮುಂತಾದ ಪದಗಳಿಗೆ ಎಂತಹ ಹೀನಾರ್ಥಗಳು ಬಂದಿವೆ!

(iv) **ಉತ್ತಮಾರ್ಥಪ್ರಾಪ್ತಿ**: ಒಂದು ಕಾಲಕ್ಕೆ ನೀಚಾರ್ಥವಿದ್ದು ಕ್ರಮೇಣ ಉತ್ತಮವಾದ ಅರ್ಥವು ಲಭ್ಯವಾದರೆ ಅದನ್ನು ಉತ್ತಮಾರ್ಥಪ್ರಾಪ್ತಿ ಎಂದು ಕರೆಯುತ್ತಾರೆ. ಇದು ಬಹಳ ವಿರಳವಾದ್ದರಿಂದ ಉದಾಹರಣೆಗಳು ಬಹಳ ಕಡಮೆ. ಹಳೆಯ ಇಂಗ್ಲಿಷಿನಲ್ಲಿ 'Knight' ಎಂಬ ಪದಕ್ಕೆ ಸೇವಕ ಎಂಬರ್ಥವಿದ್ದು ಈಗ ಅದೊಂದು ಶ್ರೇಷ್ಠ ಪ್ರಶಸ್ತಿಯ ಹೆಸರಾಗಿದೆ. 'Fame' ಎಂದರೆ 'ವರದಿ' ಎಂಬರ್ಥವಿದ್ದು ಈಗ 'ಒಳ್ಳೆಯ ವರದಿ', 'ಕೀರ್ತಿ' ಎಂಬ ಅರ್ಥ ಬಂದಿದೆ.

(v) **ಅರ್ಥಾಂತರ**: ಒಂದು ಪದದ ಅರ್ಥವು ಹಿಗ್ಗದೆ, ಕುಗ್ಗದೆ, ಹೀನವಾದ ಅಥವಾ ಉತ್ತಮವಾದ ಅರ್ಥಗಳನ್ನು ಪಡೆಯದೆ, ಆ ಪದವು ಕೇವಲ ಬೇರೆಯದಾದ ಅರ್ಥವನ್ನು ಪಡೆದರೆ ಅದನ್ನು ಅರ್ಥಾಂತರವೆಂದು ಕರೆಯುತ್ತಾರೆ. ಅವಸರ, ಭದ್ರ ಮುಂತಾದ ಹಿಂದೆ ನಾವು ನೋಡಿದ ಪದಗಳು ಇದಕ್ಕೆ ಉದಾಹರಣೆಗಳು. ಹಳಗನ್ನಡದ 'ಅಮ್ಮ' ಪದಕ್ಕೆ ತಂದೆ ಎಂಬರ್ಥ ಹೋಗಿ ತಾಯಿ ಎಂಬರ್ಥವು ಬಂದದ್ದನ್ನು ಇಲ್ಲಿ ಸ್ಮರಿಸಬಹುದು. ಇದೂ ಅರ್ಥಾಂತರಕ್ಕೆ ನಿದರ್ಶನವೇ.

ಅರ್ಥವ್ಯತ್ಯಾಸದಿಂದ ಭಾಷೆಯ ಬೆಳವಣಿಗೆಗೆ, ತನ್ಮೂಲಕ ಮನುಷ್ಯನ ಸಂಸ್ಕೃತಿಯ ಬೆಳವಣಿಗೆಗೆ ಆಗಿರುವ ಒಂದು ಮಹೋಪಕಾರವನ್ನು ಇಲ್ಲಿ ಸ್ಮರಿಸಬಹುದು. ಭಾಷೆಯ ಅತ್ಯಂತ ಪ್ರಾಚೀನ ಅವಸ್ಥೆಯಲ್ಲಿ ಎಲ್ಲ ಪದಗಳೂ ಸ್ಥೂಲವಾದ ಎಂದರೆ ಮೂರ್ತವಾದ ವಸ್ತುಗಳನ್ನೂ ಕ್ರಿಯೆಗಳನ್ನೂ ಸೂಚಿಸುತ್ತಿದ್ದುವು. ಮನುಷ್ಯನ ಬುದ್ಧಿ ವಿಕಾಸವಾದಂತೆ ಭಾವಗಳನ್ನು ವ್ಯಕ್ತಪಡಿಸಬೇಕಾಗಿ ಬಂದಾಗ ಮೂರ್ತವಸ್ತು ಮತ್ತು ಕ್ರಿಯೆಗಳನ್ನು ಸೂಚಿಸುತ್ತಿದ್ದ ಪದಗಳನ್ನೇ ಅದಕ್ಕೆ ಬಳಸಿಕೊಂಡನೆಂದು ಕಾಣುತ್ತದೆ. ಎಂದರೆ ಪದಗಳು ಸ್ಥೂಲಾರ್ಥದ ಜೊತೆಗೆ ಸೂಕ್ಷ್ಮಾರ್ಥವನ್ನೂ ಸೂಚಿಸುವಂತೆ ಮಾಡಿಕೊಂಡರು. ಇದಕ್ಕೆ ಎಲ್ಲ ಭಾಷೆಗಳಿಂದಲೂ ನೂರಾರು ಪದಗಳನ್ನು ಉದಾಹರಿಸಬಹುದು. ಇಂಗ್ಲಿಷಿನಲ್ಲಿ 'Forget' ಎಂಬುದರ ಮೂಲಾರ್ಥ ಕಳೆದುಕೊ ಎಂದು; ಈಗ 'ಮನಸ್ಸಿನಿಂದ ಕಳೆದುಕೋ, ಮರೆ' ಎಂದರ್ಥ. (ಕನ್ನಡದ 'ಮರೆ'ಯೂ ಕೂಡ ಇಂಥದೇ ಶಬ್ದ). 'Forgive' ಎಂದರೆ ಬಿಟ್ಟುಬಿಡು ಎಂಬುದು ಮೂಲಾರ್ಥ; ಈಗ ಕ್ಷಮಿಸು ಎಂದಾಗುತ್ತದೆ. 'Understand' ಎಂದರೆ ಮಧ್ಯೆ ನಿಲ್ಲು ('to stand among') ಎಂದು; ಈಗ ತಿಳಿದುಕೊ ಎಂದಾಗುತ್ತದೆ. 'To *hit* upon a point,' 'A *heated* debate',

'He has a *bright* future', '*Sharp* intellect' ಮುಂತಾದ ಕಡೆಗಳಲ್ಲಿ ಅಮೂರ್ತವಾದ ಭಾವಗಳನ್ನು ಮೂರ್ತಸೂಚಕ ಪದಗಳ ಮೂಲಕ ಹೇಳುವ ಪ್ರಯತ್ನವಿದೆ. ಕನ್ನಡದಲ್ಲೂ '**ಕೊಳಕ**ದ ಮನುಷ್ಯ,' '**ಬೆಲೆ**ಯುಳ್ಳ ಮಾತುಗಳು,' '**ತಿಳಿ**ಮನಸ್ಸು,' '**ಹರಿತ**ವಾದ ಬುದ್ಧಿ' ಮುಂತಾದ ಕಡೆಗಳಲ್ಲಿ ಇದನ್ನು ನೋಡಬಹುದು. ಇಂತಹ ಕಡೆಗಳಲ್ಲೆಲ್ಲ ಆಗಿರುವುದು ಇಷ್ಟೆ. ಕತ್ತಿ ಹರಿತವಾಗಿರುವುದನ್ನು ನಾವು ನೋಡಬಹುದು. ಅದು ವಸ್ತುಗಳನ್ನು ಕತ್ತರಿಸಿ ಬಿಡಿಸಿ ಒಳರಹಸ್ಯವನ್ನು ತೋರಬಲ್ಲುದು. ಹಾಗೆಯೇ ಬುದ್ಧಿಯು ವಿಷಯಗಳನ್ನು ವಿಶ್ಲೇಷಿಸಿ ಒಳರಹಸ್ಯಗಳನ್ನು ಬಿಡಿಸಿ ತೋರಿಸುತ್ತಿದ್ದರೆ, ಆಗ ಅದರ ಗುಣವನ್ನು ಹೇಳಲು ಕತ್ತಿಗೆ ಬಳಸುತ್ತಿದ್ದ ವಿಶೇಷಣವನ್ನೇ ಬಳಸಿದರು. 'ಅವನ ಬುದ್ಧಿ **ಮಂಕು**,' 'ರಹಸ್ಯವನ್ನು **ಭೇದಿಸು**', 'ಅವನ **ನಡೆ**,' '**ವಕ್ರ** ಬುದ್ಧಿ'—ಇವು ಇನ್ನೂ ಹಲವು ಉದಾಹರಣೆಗಳು. ಸ್ಥೂಲವಾಚಕ ಪದಗಳು ಅರ್ಥವ್ಯತ್ಯಾಸವನ್ನು ಹೊಂದಿ ಬಹು ಸೂಕ್ಷ್ಮವಾದ ಅರ್ಥಗಳನ್ನು ಕೊಡಲು ಆರಂಭವಾದದ್ದು ಹೀಗೆ.

ಅರ್ಥವ್ಯತ್ಯಾಸಗಳು ಹೇಗೆ ನಡೆಯುತ್ತವೆ ಎಂಬುದನ್ನು ನಾವು ಪರಿಶೀಲಿಸಲು ಸಾಧ್ಯವಿಲ್ಲ. ಒಂದು ಅರ್ಥವ್ಯತ್ಯಾಸ ಹೇಗೋ ಆರಂಭವಾಗಿ ತಕ್ಕಮಟ್ಟಿಗೆ ಪ್ರಚಾರಕ್ಕೆ ಬಂದಮೇಲೆ ಅದು ನಮಗೆ ಗೋಚರವಾಗುತ್ತದೆ. ಅರ್ಥವ್ಯತ್ಯಾಸಗಳು ಏಕೆ ನಡೆಯುತ್ತವೆ ಎಂಬ ಪ್ರಶ್ನೆಗೆ ಉತ್ತರಿಸುವುದು ಇನ್ನೂ ಕಷ್ಟ. ಅರ್ಥವ್ಯತ್ಯಾಸದ ನಿಯಮಗಳನ್ನು ಪಟ್ಟಿಮಾಡುವುದು ಸಾಧ್ಯವಿಲ್ಲ. ಆದರೂ ಕೆಲವು ವಿದ್ವಾಂಸರು ಅರ್ಥವ್ಯತ್ಯಾಸಗಳಿಗೆ ಕೆಲವು ಕಾರಣಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಕೆಳಗೆ ಪ್ರಸ್ತಾಪಿಸಲಾಗಿದೆ.

**1. ಆಲಂಕಾರಿಕ ಭಾಷೆ**: ಮಾತನಾಡುವವನಿಗೆ ತನ್ನ ಅರ್ಥವನ್ನು ಸ್ಪಷ್ಟಪಡಿಸುವ ಆಕಾಂಕ್ಷೆ ಇದ್ದೇ ಇರುತ್ತದೆ. ಅದಕ್ಕಾಗಿ ಉಪಮೆಗಳನ್ನು ಬಳಸುತ್ತಾನೆ. 'Hazy notion,' 'Weighty argument', 'Sweet words' ಇತ್ಯಾದಿ ಉಕ್ತಿಗಳು ಈ ಪ್ರವೃತ್ತಿಯ ಫಲ. ಅಮೂರ್ತಭಾವಗಳನ್ನು ಮನುಷ್ಯನು ಪ್ರಕಟಪಡಿಸುವ ವಿಧಾನವನ್ನು ಕುರಿತು ಹಿಂದೆ ನಡೆಸಿದ ಚರ್ಚೆಯಲ್ಲಿ ಇದರ ವಿವರಗಳು ಸಿಕ್ಕುತ್ತವೆ.

**2. ಪರಿಸರದ ವ್ಯತ್ಯಾಸ**: ಬೇರೆ ಬೇರೆ ಪರಿಸರಗಳ (Environments) ಫಲವಾಗಿ ಒಂದು ಪದವು ಬೇರೆ ಬೇರೆ ಅರ್ಥಗಳನ್ನು ಹೊಂದಬಹುದು. ವೇದದಲ್ಲಿ 'ಉಷ್ಟ್ರ' ಎಂದರೆ ಕಾಡುಕೋಣ ಎಂಬರ್ಥವಿದ್ದು ಕ್ರಮೇಣ ಆ ಪದಕ್ಕೆ ಒಂಟೆ ಎಂಬ ಅರ್ಥವು ಬಂದಿತು ಎಂದರೆ ಜನರು ಕೋಣಗಳಿದ್ದ ನಾಡಿನಿಂದ ಒಂಟೆಗಳಿದ್ದ ನಾಡಿಗೆ ವಲಸೆ ಹೋದರೆಂಬುದಕ್ಕೆ ಇದು ಸೂಚನೆ. ಚರ್ಚಿನ ಆವರಣದಲ್ಲಿ Father, Mother, Sister ಪದಗಳು ಬೇರೆ ಅರ್ಥಗಳನ್ನು ಪಡೆಯುವುದನ್ನು ಎಲ್ಲರೂ ಬಲ್ಲರು. 'pen' ಎಂಬುದು ಹಕ್ಕಿಯ ಪುಕ್ಕವನ್ನು ಸೂಚಿಸುತ್ತದೆ. ಒಂದು ಕಾಲದಲ್ಲಿ ಹಕ್ಕಿಯ ಗರಿಯನ್ನು ಬರವಣಿಗೆಯ ಸಾಧನವಾಗಿ ಬಳಸುತ್ತಿದ್ದರು ; ಆದ್ದರಿಂದ ಆ ಪದಕ್ಕೆ

'ಬರವಣಿಗೆಯ ಸಾಮಗ್ರಿ' ಎಂಬರ್ಥವಿದ್ದಿತು. ಈಗ ಬರೆಯಲು ಹಕ್ಕಿಯ ಗರಿಯನ್ನು ಯಾರೂ ಬಳಸುವುದಿಲ್ಲ. ಆದರೂ pen ಎಂಬ ಮಾತು ಉಳಿದುಕೊಂಡು ಬಂದಿದೆ. ನಮ್ಮಲ್ಲಿ ಹಿಂದೆ ಬರೆಯಲು ತಾಳೆಯ ಓಲೆಗಳನ್ನು ಬಳಸುತ್ತಿದ್ದರು. ಈಗ ಯಾರೂ ಆ ಓಲೆಗಳನ್ನು ಬಳಸುತ್ತಿಲ್ಲ. ಆದರೂ 'ಓಲೆಯನ್ನು ಬರೆ', 'ಕರೆಯೋಲೆ' ಎಂಬಲ್ಲಿ ಆ ಪದ ಉಳಿದುಕೊಂಡು ಬಂದಿದೆ. ನಾಗರಿಕತೆಗಿಂತ ಭಾಷೆಯು ಬಹು ಸಂಪ್ರದಾಯನಿಷ್ಠ (Conservative) ಎಂದು ಹೇಳುತ್ತಾರೆ. ನಾಗರಿಕತೆಯು ವ್ಯತ್ಯಾಸಗೊಂಡರೂ ಭಾಷೆಯು ತನ್ನಲ್ಲಿರುವ ಪದಗಳನ್ನು ಮಾತ್ರ ಅಷ್ಟು ಸುಲಭವಾಗಿ ಬಿಟ್ಟುಕೊಡುವುದಿಲ್ಲ.

**3. ವಿನಯ :** ಜನಗಳೊಡನೆ ವ್ಯವಹರಿಸುವಾಗ ವಿನಯ ಬಹು ಆವಶ್ಯಕ. ಮಾತಿನಲ್ಲೂ ವಿನಯ ಎದ್ದು ತೋರಬೇಕು. ಅದರ ಫಲವಾಗಿ ಇಂಗ್ಲಿಷಿನಲ್ಲಿ ಮುಂದಿರುವ ವ್ಯಕ್ತಿಯನ್ನು ಸಂಬೋಧಿಸಲು, ಗೌರವಾರ್ಥದಲ್ಲಿ, ಬಹುವಚನ ರೂಪವನ್ನು ಬಳಸಿ ಏಕವಚನವನ್ನು ತ್ಯಜಿಸಿದೆ. 'You' ಎಂಬುದು ಮಧ್ಯಮಪುರುಷ ಬಹುವಚನ. ಕನ್ನಡದಲ್ಲೂ ಗೌರವಾರ್ಥದಲ್ಲಿ ನೀವು, ಅವರು ಎಂಬ ರೂಪಗಳನ್ನು ಏಕವಚನದಲ್ಲೂ ಬಳಸುವುದು ಸಾಮಾನ್ಯ.

**4. ಸೌಮ್ಯೋಕ್ತಿ (Euphemism) :** ಕೆಟ್ಟ ಅಥವಾ ಕಠಿನ ಅಥವಾ ಅಮಂಗಳ ವಸ್ತುಗಳನ್ನು ಸೌಮ್ಯವಾದ ಉಕ್ತಿಗಳಲ್ಲಿ ಹೇಳಬೇಕೆಂಬುದು ಮನುಷ್ಯನ ಪ್ರವೃತ್ತಿಗಳಲ್ಲೊಂದು. ಸಾವನ್ನು ಕುರಿತು ಹೇಳುವಾಗ 'To breathe one's last' ಎಂದೋ 'ಕೈಲಾಸವಾಸಿಯಾಗು', 'ವೈಕುಂಠವಾಸಿಯಾಗು', 'ಕೀರ್ತಿಶೇಷನಾಗು', 'ದಿವಂಗತನಾಗು' ಎಂದೋ ಹೇಳುತ್ತಾರೆ. ಉತ್ತರಭಾರತದಲ್ಲಿ ಅಡುಗೆಯವನನ್ನು 'ಮಹಾರಾಜ್' ಎಂದು ಕರೆಯುತ್ತಾರೆ. ಕನ್ನಡದಲ್ಲಿ 'ಗರ್ಭಿಣಿಯಾಗಿದ್ದಾಳೆ' ಎಂದು ಒರಟಾಗಿ ಹೇಳದೆ 'ನೀರು ಹೊಯ್ದುಕೊಂಡಿದ್ದಾಳೆ' ಎಂದು ಹೇಳುತ್ತಾರೆ. ದೇಹದ ಅನೇಕ ಸ್ವಾಭಾವಿಕ ಕ್ರಿಯೆಗಳನ್ನು ಅನ್ಯೋಕ್ತಿಗಳಲ್ಲಿ ಹೇಳುತ್ತಾರೆ. ಮಂಗಳವಾರವು ವಾಸ್ತವವಾಗಿ ಅಮಂಗಳವಾರವೇ ; ಅವರೆ ಅದನ್ನು ಮಂಗಳವಾರವೆಂದೇ ಕರೆಯುತ್ತಾರೆ. ಮಲಮೂತ್ರ ವಿಸರ್ಜನೆಗೆ ಸಂಬಂಧಿಸಿದ ಪದಗಳೂ ಸೌಮ್ಯೋಕ್ತಿಗಳೇ.

**5. ವ್ಯಂಗ್ಯ :** ವ್ಯಂಗ್ಯದಿಂದಾಗಿ ಅನೇಕ ಪದಗಳು ಅರ್ಥವ್ಯತ್ಯಾಸಗೊಳ್ಳುತ್ತವೆ. ಬೃಹಸ್ಪತಿ ವಾಸ್ತವವಾಗಿ ಮಹಾ ಮೇಧಾವಿ. ಆದರೆ ಈಗ 'ದಡ್ಡ' ಎಂಬರ್ಥದಲ್ಲಿಯೂ ಬಳಕೆಯಾಗುತ್ತಿದೆ. ಅಶೋಕನಿಗೆ ಬಹುಪ್ರಿಯವಾಗಿದ್ದ 'ದೇವಾನಾಂಪ್ರಿಯ' ಎಂಬ ವಿಶೇಷಣಕ್ಕೆ ಮುಂದೆ ಮೂರ್ಖ ಎಂಬರ್ಥ ಬರಲು ವ್ಯಂಗ್ಯವೇ ಕಾರಣ.

**6. ಒತ್ತಿ ಹೇಳುವಿಕೆ :** ಮನುಷ್ಯ ತಾನು ಹೇಳುವುದನ್ನು ಒತ್ತಿ ಹೇಳಲು ಎಷ್ಟೋ ಸಾರಿ ಅತ್ಯುಕ್ತಿಗಳನ್ನು ಬಳಸುವುದುಂಟು. ಸಾಮಾನ್ಯವಾದ ಭಾವಗಳನ್ನು ಹೇಳಲು ಉಜ್ವಲವಾದ ಉಕ್ತಿಗಳನ್ನು ಬಳಸುತ್ತಾನೆ. ಅದರ ಫಲವಾಗಿ ಎಷ್ಟೋ ಉಜ್ವಲವಾದ ಉಕ್ತಿಗಳು ಸಪ್ಪೆಯಾಗುತ್ತವೆ. ಇಂಗ್ಲಿಷಿನ 'Awfully nice', ಎಂಬಲ್ಲಿ awfully =very. ಬೆಂಗಾಲಿಯಲ್ಲಿ ಬಹಳ ಎಂಬರ್ಥದಲ್ಲಿ ಭಯಂಕರ್, ಭಯಾನಕ್, ಪ್ರಚಂಡ್

ಎಂಬ ಪದಗಳನ್ನು ಬಳಸುತ್ತಾರೆ. ಉತ್ತರ ಕರ್ನಾಟಕದಲ್ಲೂ 'ಭಯಂಕರ ಚಲೊ' ಎಂದರೆ ತುಂಬಾ ಚನ್ನಾಗಿ ಎಂದರ್ಥ.

**7. ತಪ್ಪು ತಿಳಿವಳಿಕೆ, ಅಜ್ಞಾನ:** ಪದವನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿದ್ದರೆ, ಅದರ ಅರ್ಥವನ್ನು ತಪ್ಪಾಗಿ ತಿಳಿದರೆ ಎಷ್ಟೋಸಾರಿ ಅರ್ಥವ್ಯತ್ಯಾಸಗಳಾಗುವುದುಂಟು. ಕನ್ನಡದಲ್ಲಿ 'ಉಕ್ಕಿವ' ಎಂಬ ಪದವನ್ನು 'ಉತ್ಸಾಹ'ದ ತದ್ಭವ ಎಂದು ಭ್ರಮಿಸಿ ಆ ಅರ್ಥದಲ್ಲಿ ಕೆಲವರು ಬಳಸಿದ್ದಾರೆ. ಆದರೆ 'ಉಕ್ಕಿವ' ಎಂದರೆ ಮೋಸ ಎಂದರ್ಥ. 'ಅಸುರ' ಎಂಬ ಪದದ ಮೂಲಾರ್ಥ ದೇವತೆ, ಅಸುವಿಗೆ ಒಡೆಯ ಎಂದು. ಆದರೆ ಅದರ ಅ- ಎಂಬುದು ನಿಷೇಧಸೂಚಕ ಎಂದು ಭ್ರಮಿಸಿ 'ಸುರ' ಎಂಬ ಪದವನ್ನು ಕಲ್ಪಿಸಿದರು. 'ಸುರ' ಎಂದರೆ ದೇವತೆ ಎಂದೂ 'ಅಸುರ' ಎಂದರೆ ರಾಕ್ಷಸ ಎಂದೂ ಕ್ರಮೇಣ ರೂಢವಾಯಿತು. ಟೀಕೆ, ಟೀಕಿಸು—ಈ ಪದಗಳ ನಿಜವಾದ ಅರ್ಥ ವಿವರಿಸು, ವ್ಯಾಖ್ಯಾನಿಸು ಎಂದು. ಆದರೆ ನಿಂದಿಸು, ದೋಷಾರೋಪಣೆಗಳನ್ನು ಮಾಡು ಎಂಬ ಅರ್ಥಗಳು ಬಂದದ್ದು ತಪ್ಪು ತಿಳಿವಳಿಕೆಯಿಂದ.

ಹಿಂದೆ ಹೇಳಿದಂತೆ ಅರ್ಥವ್ಯತ್ಯಾಸಗಳಿಗೆ ಕಾರಣಗಳನ್ನು ಹೇಳುವುದು ಅಷ್ಟು ಸುಲಭವಲ್ಲ. ಒಂದು ಪದದ ಅರ್ಥವ್ಯತ್ಯಾಸಕ್ಕೆ ಒಂದಲ್ಲ, ಹಲವು ಕಾರಣಗಳಿರಬಹುದು. ನಾವು ಮೇಲೆ ಹೇಳಿದ ಕಾರಣಗಳನ್ನು ಗೆರೆ ಎಳೆದು ಪ್ರತ್ಯೇಕವಾಗಿ ವಿಂಗಡಿಸುವುದು ಅಸಾಧ್ಯ. ಅರ್ಥವ್ಯತ್ಯಾಸದಲ್ಲಿ ಮನುಷ್ಯನ ಮನಸ್ಸು ವ್ಯವಹರಿಸುವುದರಿಂದ ಅದೊಂದು ಜಟಿಲ ಸಮಸ್ಯೆಯೇ ಸರಿ. ಅರ್ಥವ್ಯತ್ಯಾಸಗಳ ಅಧ್ಯಯನವು ಇಡೀ ಭಾಷಾವಿಜ್ಞಾನದಲ್ಲಿ ಅತ್ಯಂತ ಕುತೂಹಲಕಾರಿಯಾದುದು.

# 7 ಭಾಷಾಸ್ವೀಕರಣ

ಮನುಷ್ಯ ಸಮಾಜಜೀವಿ. ಅವನು ತನ್ನ ಸುತ್ತಮುತ್ತಣ ಜನರೊಡನೆ ಒಂದಲ್ಲ ಒಂದು ರೀತಿಯ ಸಂಪರ್ಕವಿಟ್ಟುಕೊಳ್ಳಬೇಕಾಗುತ್ತದೆ; ಅನೇಕ ಆವಶ್ಯಕತೆಗಳಿಗಾಗಿ ಇತರರನ್ನು ಅವಲಂಬಿಸಬೇಕಾಗುತ್ತದೆ. ಹಾಗೆಯೇ ಒಂದು ಸಮಾಜವೂ ಕೂಡ, ಒಂದು ಜನಾಂಗವೂ ಕೂಡ. ಒಂದು ಪ್ರದೇಶದ ಸುತ್ತಮುತ್ತ ದಾಟಿಹೋಗಲಾಗದಂತಹ ಅಡ್ಡಿಗಳಿದ್ದರೆ—ಉದಾ: ದೊಡ್ಡನದಿ, ಎತ್ತರವಾದ ಪರ್ವತ—ಆ ಪ್ರದೇಶದಲ್ಲಿ ವಾಸಮಾಡುವವರು ಸುತ್ತಮುತ್ತಣ ಅಥವಾ ದೂರದ ಜನರೊಡನೆ ಸಂಪರ್ಕವನ್ನಿಟ್ಟುಕೊಳ್ಳದೇ ಇರಬಹುದು, ಅಥವಾ ಬಹು ಕಡಿಮೆ ಸಂಪರ್ಕವಿಟ್ಟುಕೊಳ್ಳಬಹುದು. ಇಂತಹ ಕೆಲವು ಅಪವಾದಗಳನ್ನು ಬಿಟ್ಟರೆ ಒಂದು ಸಮಾಜ ಅಥವಾ ಸಂಸ್ಕೃತಿಯು ಇತರ ಸಮಾಜ ಅಥವಾ ಸಂಸ್ಕೃತಿಗಳೊಡನೆ ಒಂದಲ್ಲ ಒಂದು ರೀತಿಯಲ್ಲಿ ಸಂಪರ್ಕವನ್ನಿಟ್ಟುಕೊಂಡಿರುತ್ತದೆ. ಇದನ್ನು ಸಾಂಸ್ಕೃತಿಕ ಸಂಘರ್ಷವೆಂದು ಕರೆಯುಬಹುದು. ಎರಡು ಸಂಸ್ಕೃತಿಗಳು ಒಂದನ್ನೊಂದು ಅರಿಯುವ ಪ್ರಸಂಗ ಒದಗಿದಾಗ ಒಂದು ಮತ್ತೊಂದರಿಂದ ಅನೇಕ ಹೊಸ ಭಾವನೆಗಳನ್ನೂ ಹೊಸ ವಸ್ತುಗಳನ್ನೂ ಸ್ವೀಕರಿಸುತ್ತದೆ. ಆ ಹೊಸ ಭಾವನೆಗಳ ಮತ್ತು ಹೊಸ ವಸ್ತುಗಳ ಜೊತೆಯಲ್ಲಿ ಅವುಗಳಿಗೆ ಆ ಭಾಷೆಯಲ್ಲಿರುವ ಹೆಸರುಗಳೂ ಪ್ರಯಾಣ ಮಾಡಿ ಹೊಸ ಭಾಷೆಯನ್ನು ಪ್ರವೇಶಿಸುತ್ತವೆ. ಏಳನೆಯ ಶತಮಾನದಲ್ಲಿ ಇಂಗ್ಲೆಂಡಿನ ಜರ್ಮಾನಿಕ್ ಜನರು ಕ್ರಿಶ್ಚಿಯನ್ನರಾದರು. ಅದರ ಫಲವಾಗಿ ರೋಮಿನ ಪಾದ್ರಿಗಳು ಅನೇಕ ಲ್ಯಾಟಿನ್ ಪದಗಳನ್ನು ಬಳಕೆಗೆ ತಂದರು. church, bishop ಮುಂತಾದುವು ಅಲ್ಲಿಂದಲೇ ಬಂದದ್ದು. ಒಂಬತ್ತು, ಹತ್ತು, ಹನ್ನೊಂದನೇ ಶತಮಾನಗಳಲ್ಲಿ ಡೇನಿಷ್ ಜನಾಂಗದ ದಾಳಿಯ ಕಾಲದಲ್ಲಿ ಅನೇಕ ಸ್ಕ್ಯಾಂಡಿನೇವಿಯನ್ ಪದಗಳು ಬಂದುವು. ಉದಾಹರಣೆಗೆ they, them, their, are, call, die, egg ಇತ್ಯಾದಿ. (ಇವು ನಿತ್ಯೋಪಯೋಗಿ ಪದಗಳು. ಇಂತಹ ಪದಗಳನ್ನು ಸ್ವೀಕರಿಸಿರುವುದು ಆಶ್ಚರ್ಯದ ಸಂಗತಿ.) ಹಾಗೆಯೇ ಇಂಗ್ಲಿಷ್ ಭಾಷೆಯು ಫ್ರೆಂಚಿನಿಂದ-annual, cordial, corpse, chamber ಮುಂತಾದ ಪದಗಳನ್ನು ಸ್ವೀಕರಿಸಿದೆ. ಹಿಂದಿಯಿಂದ jungle, toddy ಮುಂತಾದ ಪದಗಳನ್ನೂ ಬೆಂಗಾಲಿಯಿಂದ bungalow ಮುಂತಾದ ಪದಗಳನ್ನೂ ಸ್ವೀಕರಿಸಿದೆ. ಈಚಿನ ಬರಹಗಳಲ್ಲಿ

pundit, avatar ಮುಂತಾದ ಭಾರತೀಯ ಪದಗಳು ಕಾಣಿಸಿಕೊಳ್ಳುತ್ತಿವೆ. ಕನ್ನಡವೂ ಕಾಲದಿಂದ ಕಾಲಕ್ಕೆ ಅನೇಕ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿದೆ. ಸಂಸ್ಕೃತದಿಂದ, ಪ್ರಾಕೃತಗಳಿಂದ, ಸೋದರಭಾಷೆಗಳಾದ ತಮಿಳು, ತೆಲುಗು ಇತ್ಯಾದಿ ಭಾಷೆಗಳಿಂದ, ಪೋರ್ಚುಗೀಸ್, ಅರೇಬಿಕ್, ಹಿಂದೂಸ್ತಾನಿ, ಇಂಗ್ಲಿಷ್ ಮುಂತಾದ ಭಾಷೆಗಳಿಂದ ಯಥೇಷ್ಟವಾಗಿ ಸ್ವೀಕರಿಸಿದೆ. ಕೆಳಗಿನ ಪಟ್ಟಿಯು ಇದನ್ನು ವಿಶದಪಡಿಸುತ್ತದೆ:

**ಸಂಸ್ಕೃತದಿಂದ :** ಧರ್ಮ, ದಯೆ, ಜ್ಞಾನ, ನ್ಯಾಯ, ಭಾಷೆ, ಲೋಕ, ದೇಹ ಇತ್ಯಾದಿ.

**ಪ್ರಾಕೃತಗಳಿಂದ :** ನೆಪ, ನೇಹ, ಪಕ್ಕ, ಸದ್ದು, ಸಕ್ಕರೆ, ಇಂಗಾಲ, ಕಂಬ ಇತ್ಯಾದಿ.

**ದ್ರಾವಿಡ ಭಾಷೆಗಳಿಂದ :** ಪೆದ್ದ, ಚೆವರು, ತೇಂಗೊಳಲು, ಕೆಲಸ, ಅರಸ ಇತ್ಯಾದಿ.

**ಪೋರ್ಚುಗೀಸ್ :** ಪಾದ್ರಿ, ಪಗಾರ, ಇಸ್ತ್ರಿ, ತಂಬಾಕು, ಮೇಜು ಇತ್ಯಾದಿ.

**ಅರೇಬಿಕ್ :** ಅನಾಮತ್ತು, ಆಸಾಮಿ, ಇಲಾಖೆ, ನಾಜೂಕು ಇತ್ಯಾದಿ.

**ಹಿಂದೂಸ್ತಾನಿ :** ಕರಾರು, ಗಿರಾಕಿ, ಚಾಲೀಸು, ತರಕಾರಿ, ಸರಕಾರ, ಶಿಲ್ಕು ಇತ್ಯಾದಿ.

**ಇಂಗ್ಲಿಷ್ :** ರೈಲು, ಕೋರ್ಟು, ಟಿಕೀಟು, ಕಾಲೇಜು, ಮಾರ್ಕೆಟ್ಟು ಇತ್ಯಾದಿ.

ಎಂದರೆ ಯಾವ ಜೀವಂತ ಭಾಷೆಯೂ ಇತರ ಭಾಷೆಗಳಿಂದ ಪದಗಳನ್ನಾಗಲಿ ಇತರ ಭಾಷಾಂಶಗಳನ್ನಾಗಲಿ ಸ್ವೀಕರಿಸದಿರಲು ಸಾಧ್ಯವೇ ಇಲ್ಲ.

ನಾವು ಹಿಂದಿನ ಅಧ್ಯಾಯವೊಂದರಲ್ಲಿ ನೋಡಿದಂತೆ ಸ್ವೀಕರಣಕಾರ್ಯವು ಸಾಮಾನ್ಯವಾಗಿ ನಡೆಯುವುದು ಸಾಂಸ್ಕೃತಿಕ ಪದಕೋಶದಲ್ಲಿ ಮಾತ್ರ. ನಿತ್ಯೋಪಯೋಗಿಯಾದ ಪದಗಳನ್ನು ಒಂದು ಭಾಷೆ ಹಾಗೆಯೇ ಉಳಿಸಿಕೊಳ್ಳುತ್ತದೆ. (ಪರಭಾಷೆಯ ಒತ್ತಡವು ಹೆಚ್ಚಾಗಿ ಒಂದು ಭಾಷೆಯು ನಿತ್ಯೋಪಯೋಗಿಯಾದ ಪದಗಳನ್ನೂ ಸ್ವೀಕರಿಸಿರುವ ನಿದರ್ಶನಗಳು ಕೆಲವಿವೆ. ಉದಾಹರಣೆಗೆ : ಸ್ಕಾಂಡಿನೇವಿಯನ್ನಿನಿಂದ ಇಂಗ್ಲಿಷ್ ; ಕನ್ನಡದಿಂದ ಲಂಬಾಣಿ ಇತ್ಯಾದಿ.) ಮೇಲೆ ನಾವು ನೋಡಿದಂತೆ ಕನ್ನಡವು ತನ್ನ ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸದಲ್ಲಿ ಅನೇಕ ಭಾಷೆಗಳಿಂದ ಸಾವಿರಾರು ಪದಗಳನ್ನು ಸ್ವೀಕರಿಸಿದ್ದರೂ ಅದರ ನಿತ್ಯೋಪಯೋಗಿ ಪದಕೋಶವು ಹೆಚ್ಚು ಕಡಿಮೆ ಸ್ಥಿರವಾಗಿ ಉಳಿದಿದೆ ; ಅದರ ವ್ಯಾಕರಣವೂ ಹಾಗೆಯೇ ಸ್ಥಿರವಾಗಿ ಉಳಿದಿದೆ. ಪರಭಾಷೆಯಿಂದ ಪದವೊಂದು ಸ್ವೀಕೃತವಾದರೆ ಅದು ಕನ್ನಡದಲ್ಲಿ ಕನ್ನಡ ಪದದಂತೆ ವರ್ತಿಸಬೇಕಾಗುತ್ತದೆ. ಇಂಗ್ಲಿಷ್ ಭಾಷೆಯ ತಳಹದಿ ಜರ್ಮಾನಿಕ್ ; ಅದರ ಮೇಲಿನ ಕಟ್ಟಡವು ರೊಮಾನಿಕ್ (ಲ್ಯಾಟಿನ್, ಫ್ರೆಂಚ್ ಇತ್ಯಾದಿ) ಎಂದು ಹೇಳುತ್ತಾರೆ. ಇಂಗ್ಲಿಷಿಗೆ ಬಂದ ಫ್ರೆಂಚ್ ಭಾಷೆಯ ನಾಮಪದಗಳೂ ಕ್ರಿಯಾಪದಗಳೂ ಇಂಗ್ಲಿಷ್ ಪದಗಳಂತೆಯೇ ರೂಪಾಂತರಗಳನ್ನು ಪಡೆಯಬೇಕಾಗುತ್ತದೆ. ಒಂದು ಭಾಷೆಯು ಸಾಮಾನ್ಯವಾಗಿ ನಾಮಪದ, ಗುಣವಾಚಕಗಳನ್ನು ತೆಗೆದುಕೊಳ್ಳುವುದು ಹೆಚ್ಚು ; ಕ್ರಿಯಾಪದಗಳನ್ನೂ ಸ್ವೀಕರಿಸುತ್ತದೆ. ಸಂಖ್ಯಾವಾಚಕಗಳನ್ನು ತೆಗೆದುಕೊಳ್ಳುವುದು ಬಹು ಕಡಿಮೆಯಾದರೂ ಕೆಲವೆಡೆ ಅದೂ ಉಂಟು. ಸರ್ವನಾಮ, ಸಮುಚ್ಚಯ

ಗಳನ್ನು ತೆಗೆದುಕೊಳ್ಳುವುದಿಲ್ಲ. ಸರ್ವನಾಮಗಳನ್ನು ಸ್ವೀಕರಿಸುವುದಂತೂ ಇಲ್ಲವೇ ಇಲ್ಲವೆನ್ನಬಹುದು. ಏಕೆಂದರೆ ಸರ್ವನಾಮಗಳು ಭಾಷೆಯ ಆಂತರಿಕರಚನೆಯಲ್ಲಿ ಸೇರಿ ಹೋಗಿರುತ್ತವೆ.

ಸ್ವೀಕರಣಗಳನ್ನು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು. (1) ಸಾಂಸ್ಕೃತಿಕ ಸ್ವೀಕರಣ (Cultural borrowing)—ಎರಡು ಸ್ವತಂತ್ರ ಭಾಷೆಗಳ ಮಧ್ಯೆ ನಡೆಯುವ ಸ್ವೀಕರಣಕಾರ್ಯ ಇದು. (2) ಉಪಭಾಷಾಸ್ವೀಕರಣ (Dialect borrowing)—ಒಂದು ಭಾಷೆಯ ಎರಡು ಉಪಭಾಷೆಗಳ ಮಧ್ಯೆ ನಡೆಯುವ ಸ್ವೀಕರಣ ಕಾರ್ಯ. ಸಾಂಸ್ಕೃತಿಕ ಸ್ವೀಕರಣದ ಒಂದು ಭಾಗವಾಗಿ ಏಕಪಕ್ಷೀಯ ಸ್ವೀಕರಣವನ್ನು (Intimate borrowing) ಹೆಸರಿಸಬಹುದು. ಏಕಪಕ್ಷೀಯ ಸ್ವೀಕರಣವೂ ಕೂಡ ಎರಡು ಸ್ವತಂತ್ರಭಾಷೆಗಳ ಮಧ್ಯೆ ನಡೆಯತಕ್ಕದ್ದಾದರೂ, ಈ ಸ್ವೀಕರಣವು ಏಕಪಕ್ಷೀಯ ವಾಗಿ ನಡೆಯುವಂತಹುದು.ಎಂದರೆ ಒಂದು ಭಾಷೆ ಮತ್ತೊಂದು ಭಾಷೆಯಿಂದ ಸ್ವೀಕರಿಸು ವುದೇ ಹೊರತು ಆ ಭಾಷೆಗೆ ಏನೂ ಕೊಡಲಾರದು, ಅಥವಾ ಇನ್ನೊಂದು ಭಾಷೆಯು ಈ ಭಾಷೆಯಿಂದ ಏನನ್ನೂ ಸ್ವೀಕರಿಸುವುದಿಲ್ಲ. ಸಾಂಸ್ಕೃತಿಕ ಸ್ವೀಕರಣವು ಪರಸ್ಪರವಾದುದು. ಇಲ್ಲಿ ಒಂದು ಭಾಷೆಯು ಇನ್ನೊಂದು ಭಾಷೆಯಿಂದ ತಾನೂ ಸ್ವೀಕರಿಸಿ ಆ ಭಾಷೆಗೂ ತನ್ನ ಅನೇಕ ಭಾಷಾಂಶಗಳನ್ನು ಹಿಂದಿರುಗಿ ಕೊಡುತ್ತದೆ.

## ಸಾಂಸ್ಕೃತಿಕ ಸ್ವೀಕರಣ

ಸಾಂಸ್ಕೃತಿಕ ಸ್ವೀಕರಣವು ಪರಸ್ಪರವಾದುದು ಎಂದು ಹಿಂದೆಯೇ ಹೇಳಲಾಗಿದೆ. ಒಂದು ಭಾಷೆಯು ಇನ್ನೊಂದರಿಂದ ಹೆಚ್ಚಾಗಿ ಸ್ವೀಕರಿಸಿ, ಪ್ರತಿಯಾಗಿ ಕಡಮೆ ಸಂಖ್ಯೆ ಯಲ್ಲಿ ನೀಡಬಹುದು. ಆದರೂ ಇದು ಪರಸ್ಪರವಾಗಿ ನಡೆಯುವ ಸ್ವೀಕರಣ. ಸಂಸ್ಕೃತ ಮತ್ತು ದ್ರಾವಿಡಭಾಷೆಗಳ ನಡುವೆ ನಡೆದಿರುವ ಸ್ವೀಕರಣಕಾರ್ಯವು ಈ ದೃಷ್ಟಿಯಿಂದ ನೋಡಿದರೆ ಸಾಂಸ್ಕೃತಿಕವೆಂದೇ ಹೇಳಬೇಕಾಗುತ್ತದೆ. ದ್ರಾವಿಡ ಭಾಷೆಗಳು ಸಂಸ್ಕೃತ ಭಾಷೆಯ ಪದಗಳಿಂದ ಕಿಕ್ಕಿರಿದಿವೆ. ಇತರ ಭಾಷೆಗಳಿಂದ ಸ್ವೀಕರಿಸುವ ವಿಷಯದಲ್ಲಿ ಅಷ್ಟು ಆಸಕ್ತಿವಹಿಸದ ತಮಿಳಿನಲ್ಲಿಯೂ ಸಾಕಷ್ಟು ಸಂಖ್ಯೆಯಲ್ಲಿ ಸಂಸ್ಕೃತ ಪದಗಳಿವೆ. ಸಂಸ್ಕೃತವು ತಾನು ಕೊಟ್ಟಿರುವಷ್ಟು ಪ್ರಮಾಣದಲ್ಲಿ ಅಲ್ಲವಾದರೂ, ಗಮನಾರ್ಹ ವಾದಷ್ಟು ಸಂಖ್ಯೆಯ ಪದಗಳನ್ನು ದ್ರಾವಿಡ ಭಾಷೆಗಳಿಂದ ಸ್ವೀಕರಿಸಿದೆ. ಸಂಸ್ಕೃತದ ಕುಂತಲ, ಕಾಕ, ಕೋಕಿಲ, ಮಾಚಲ, ವಿಮಾನ, ನೀರ, ಮುಕುಲ, ಅಟವಿ, ವೈಶಾಖ, ಪಲ್ಲಿ, ವಲ್ಲಿ ಇತ್ಯಾದಿ ಪದಗಳು ಮೂಲತಃ ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿವೆ ಎಂದು ವಿದ್ವಾಂಸರು ಭಾವಿಸುತ್ತಾರೆ.

ಸ್ವೀಕರಣಕಾರ್ಯದಲ್ಲಿ ಭಾಗವಹಿಸುವ ಎರಡು ಭಾಷೆಗಳನ್ನು ಸ್ವೀಕರಿಸುವ ಭಾಷೆ (Borrowing Language), ಕೊಡುವ ಭಾಷೆ (Lending Language) ಎಂದು ನಮ್ಮ ಸೌಕರ್ಯಕ್ಕಾಗಿ ಹೆಸರಿಟ್ಟು ಕರೆಯಬಹುದು. ಸ್ವೀಕರಿಸುವ ಭಾಷೆಯ ಧ್ವನಿ

ವ್ಯವಸ್ಥೆಗೂ ಕೊಡುವ ಭಾಷೆಯ ಧ್ವನಿವ್ಯವಸ್ಥೆಗೂ ವ್ಯತ್ಯಾಸಗಳಿದ್ದರೆ ಆಗ ಸ್ವೀಕರಿಸುವ ಭಾಷೆಯು ತನ್ನ ಧ್ವನಿ ನಿಯಮಗಳಿಗೆ ಇತರ ಭಾಷೆಯ ಪದಗಳನ್ನು ಹೊಂದಿಸಿಕೊಂಡು ಸ್ವೀಕರಿಸುತ್ತದೆ. ಎಂದರೆ ಸ್ವೀಕರಿಸುವ ಭಾಷೆಯು ಕೊಡುವ ಭಾಷೆಯಲ್ಲಿ ತನಗೆ ಪರಿಚಿತವಲ್ಲದ ಧ್ವನಿಗಳೂ ಧ್ವನಿಸಮುದಾಯಗಳೂ ಇದ್ದರೆ ಅವುಗಳನ್ನು ತನ್ನಲ್ಲಿ ಅವುಗಳಿಗೆ ಹತ್ತಿರವಾಗಿರುವ ಧ್ವನಿಗಳಾಗಿ ಪರಿವರ್ತಿಸುತ್ತದೆ. ಇದನ್ನು ಧ್ವನ್ಯಾದೇಶ (Phonetic Substitution)ವೆಂದು ಕರೆಯಬಹುದು. ಇದಕ್ಕೆ ಕನ್ನಡದಿಂದ ಕೆಲವು ನಿದರ್ಶನಗಳನ್ನು ಕೊಡಬಹುದು. ಇಂಗ್ಲಿಷಿನಲ್ಲಿ [z] ಧ್ವನಿಯಿದೆ; ಕನ್ನಡದಲ್ಲಿ ಆ ಧ್ವನಿಯಿಲ್ಲ; ಆದರೆ ಅದಕ್ಕೆ ಹತ್ತಿರವಾದ [ಜ್] ಇದೆ. ಇಂಗ್ಲಿಷಿನ 'zoo' ಎಂಬ ಪದವು ಕನ್ನಡದಲ್ಲಿ 'ಜೂ' ಎಂದಾಗುತ್ತದೆ. ನಮಗೆ ಪರಿಚಿತವಲ್ಲದ ಧ್ವನಿಯ ಸ್ಥಾನದಲ್ಲಿ ನಮ್ಮಲ್ಲಿ ಅದಕ್ಕೆ ಸಮೀಪವಾಗಿರುವ ಧ್ವನಿಯನ್ನು ತಂದಿದ್ದೇವೆ. ಇಂಗ್ಲಿಷಿನ Tea ಎಂಬುದು 'ಟೀ' ಎಂದು ಆಗುತ್ತದೆ. ಇಂಗ್ಲಿಷ್ ಪದದ ಮೊದಲ ವ್ಯಂಜನ [t] ಎಂಬುದರ ಉಚ್ಚಾರಣೆಗೂ ಕನ್ನಡದ 'ಟೀ' ಪದದ ಆರಂಭದ ವ್ಯಂಜನದ ಉಚ್ಚಾರಣೆಗೂ ವ್ಯತ್ಯಾಸವಿದೆ. ಇಂಗ್ಲಿಷಿನ [t] ವು ವರ್ತ್ಸ್ಯಧ್ವನಿ [Alveolar]; ಕನ್ನಡದ [ಟ್] ವು ಮೂರ್ಧನ್ಯ. ನಮ್ಮಲ್ಲಿ ವರ್ತ್ಸ್ಯವಿಲ್ಲ; ಅದಕ್ಕೆ ಬದಲು ಇಲ್ಲಿ ಮೂರ್ಧನ್ಯವನ್ನೇ ಬಳಸಿದ್ದೇವೆ. ಕನ್ನಡದ ಪದಗಳೆಲ್ಲವೂ ಸ್ವರಾಂತಗಳಾಗಿರುವುದರಿಂದ ಕೆಲವು ಪದಗಳು ಸ್ವರಾಂತವಾಗುತ್ತವೆ. Hospital—ಆಸ್ಪತ್ರೆ, Watch—ವಾಚು, Cycle—ಸೈಕಲ್ಲು, Biscuit—ಬಿಸ್ಕತ್ತು, Pension—ಪೆನ್ಶನ್ನು. ಈ ಉದಾಹರಣೆಗಳಲ್ಲೆಲ್ಲಾ ಧ್ವನ್ಯಾದೇಶವನ್ನು ಕಾಣಬಹುದು. ನಾವು ಸ್ವೀಕರಿಸಿರುವ ಪದಗಳಲ್ಲಿ ಮಾತ್ರವೇ ಅಲ್ಲ; ನಾವು ಇಂಗ್ಲಿಷ್ ಭಾಷೆಯನ್ನೇ ಆಡುತ್ತಿದ್ದರೂ ಎಷ್ಟೋ ಪದಗಳನ್ನು ನಮ್ಮ ಭಾಷೆಯ ಧ್ವನಿಗಳಲ್ಲೇ ಉಚ್ಚರಿಸುತ್ತೇವೆ. thin—ಥಿನ್, then—ದೆನ್ ಎಂದು ಉಚ್ಚರಿಸುತ್ತೇವೆ. [th] ಮತ್ತು [ಥ್]ಗಳ, [th] ಮತ್ತು [ದ್]ಗಳ ಉಚ್ಚಾರಣೆ ಸಂಪೂರ್ಣವಾಗಿ ಭಿನ್ನ. ಕನ್ನಡವನ್ನು ಕಲಿಯುವ ಪಾಶ್ಚಿಮಾತ್ಯರೂ ಕೂಡ ಕನ್ನಡವನ್ನು ತಮ್ಮ ಭಾಷೆಯ ಧ್ವನಿಗಳಲ್ಲಿಯೇ ಆಡುತ್ತಾರೆ. ಪಾದ್ರಿಗಳ ಕನ್ನಡವನ್ನು ಎಲ್ಲರೂ ಬಲ್ಲರು. ನಾನು ಪಾಶ್ಚಾತ್ಯರೊಬ್ಬರಿಗೆ ಕನ್ನಡವನ್ನು ಕಲಿಸುವಾಗ, 'ಕಥೆ' ಎಂದು ನಾನು ಹೇಳಿದ್ದನ್ನು ಅವರು 'ಕತ್ತೆ' ಎಂದು ಹೇಳುತ್ತಿದ್ದರು. ಅವರಿಗೆ ಮಹಾಪ್ರಾಣಗಳ ಉಚ್ಚಾರ ಅಪರಿಚಿತವಾಗಿದ್ದುದರಿಂದ 'ಕಥೆ'ಯ ಉಚ್ಚಾರ ತುಂಬಾ ಕಷ್ಟಕೊಡುತ್ತಿತ್ತು. ಸಂಸ್ಕೃತದ ಅನೇಕ ಮಹಾಪ್ರಾಣಗಳ ಉಚ್ಚಾರವು ಆಡುಮಾತಿನಲ್ಲಿ ಅಲ್ಪಪ್ರಾಣವಾಗುವುದು ಇದೇ ಕಾರಣಕ್ಕಾಗಿಯೇ.

ಪರಭಾಷೆಯು ಹೆಚ್ಚು ಸುಪರಿಚಿತವಾಗಿ, ವಿದ್ಯಾವಂತರ ಮೂಲಕ ಅದರ ಪದಗಳು ಹೆಚ್ಚು ವ್ಯತ್ಯಾಸವಾಗದೆ ಪ್ರಚಾರಕ್ಕೆ ಬಂದರೆ ಧ್ವನ್ಯಾದೇಶವನ್ನು ಪಡೆದ ಪದವೂ, ಅಷ್ಟು ವ್ಯತ್ಯಾಸವಾಗದ ಪದವೂ ಎರಡೂ ಕೂಡ ಭಾಷೆಯಲ್ಲಿ ಬಳಕೆಯಾಗಬಹುದು. ಕನ್ನಡದಲ್ಲಿ ಆಸ್ಪತ್ರೆ, Hospital ಎಂಬ ಎರಡು ಪದಗಳೂ ಬಳಕೆಯಲ್ಲಿವೆ. 'ಕಾಪಿ'

ಎಂದು ಹೇಳುತ್ತಿದ್ದ ಹಳ್ಳಿಯವರೂ ವಿದ್ಯಾವಂತರನ್ನನುಸರಿಸಿ ಈಗ 'ಕಾಫಿ' ಎಂದು ಮೂಲಕ್ಕೆ ಹತ್ತಿರವಾಗುವ ರೀತಿಯಲ್ಲಿ ಹೇಳುತ್ತಿದ್ದಾರೆ. ವಿದ್ಯಾವಂತರ ಭಾಷೆಯ ಪ್ರಭಾವವು ಹಳ್ಳಿಯವರ ಭಾಷೆಯ ಮೇಲೆ ಸದಾ ಆಗುತ್ತಿರುತ್ತದೆ. ವಿದ್ಯಾವಂತರನ್ನನುಸರಿಸಹೋಗಿ ಹಳ್ಳಿಯವರು ಅನೇಕ ಕಡೆಗಳಲ್ಲಿ ಅಪಹಾಸ್ಯಕ್ಕೂ ಈಡಾಗುತ್ತಾರೆ. ಇದಕ್ಕೆ ಒಂದು ಸಣ್ಣ ನಿದರ್ಶನವೆಂದರೆ 'ಹ' ಕಾರದ ಉಚ್ಚಾರ. ಹಳ್ಳಿಯವರ ಭಾಷೆಯಲ್ಲಿ 'ಹ' ಕಾರದ ಉಚ್ಚಾರ ಅಸ್ಪಷ್ಟ, ವಿದ್ಯಾವಂತರ ಭಾಷೆಯಲ್ಲಿ ಸ್ಪಷ್ಟ. 'ಹ' ಕಾರವನ್ನು ಉಚ್ಚರಿಸಿದರೆ ತಾವು ನಾಗರಿಕರ ಸಾಲಿಗೆ ಸೇರಬಹುದೆಂದು ಭಾವಿಸಿದ ಹಲವರು 'ಹಂಬಲಿ' (=ಅಂಬಲಿ.) 'ಹಂಬೆಗಾಲು' (=ಅಂಬೆಗಾಲು,) 'ಹಯ್ಯೊ' (=ಅಯ್ಯೊ) ಎಂಬ ಕಡೆಗಳಲ್ಲಿಯೂ ಅದನ್ನು ಉಚ್ಚರಿಸುವುದುಂಟು. ಅವರ ಬಾಯಲ್ಲಿ ಎಷ್ಟೋ ಕಡೆ ಮಹಾಪ್ರಾಣವಿರಬೇಕಾದ ಕಡೆ ಮಹಾಪ್ರಾಣವಿರುವುದಿಲ್ಲ; ಅಲ್ಪಪ್ರಾಣವಿರುವ ಕಡೆ ಮಹಾಪ್ರಾಣವಿರುತ್ತದೆ. ಇದೂ ಅಷ್ಟೇ, ಅದೇ ಪ್ರವೃತ್ತಿಯ ಫಲ.

ಎಷ್ಟೋ ಪದಗಳು ಪರಭಾಷೆಯಿಂದ ಬಂದು ಎಷ್ಟು ವಿರೂಪಗೊಂಡಿರುತ್ತವೆ ಎಂದರೆ ಅವು ದೇಶ್ಯಶಬ್ದಗಳೇ ಸರಿ ಎಂಬ ಭ್ರಮೆಯನ್ನು ತರಿಸುತ್ತವೆ. ಆಸ್ಪತ್ರೆ, ಸಂತೆ (<ಸಂಸ್ಥಾ, ಸಂಸ್ಥೆ), ದೋಣಿ (<ಸಂ. ದ್ರೋಣಿ. ದೋಣಿ ಅಥವಾ ಡೋಣಿ=ಸಣ್ಣ ಕೊಳ—ಈ ಪದವೂ ದ್ರೋಣಿಯಿಂದಲೇ ಬಂದಿದೆ), ಲಾಂದ್ರ (Eng. Lantern), ಬೋನ (ಸಂ. ಭೋಜನ), ಕೆಲಸ (ತಮಿಳು. ಕಿರಿಶೈ<ಸಂ. ಕ್ರಿಯಾ), ತೋಲ (ಸಂ. ಸ್ಥೂಲ)—ಇಂತಹ ಪದಗಳನ್ನು ಐತಿಹಾಸಿಕ ಭಾಷಾವಿಜ್ಞಾನಿ ತೋರಿಸಿಕೊಡದ ಹೊರತು ಅವು ಸ್ವೀಕರಣಗಳೆಂದು ಅನ್ನಿಸುವುದೇ ಇಲ್ಲ. ಹಾಗಾಗಲು ಅವು ಹೆಚ್ಚು ಪ್ರಚಾರದಲ್ಲಿರುವುದೂ ಒಂದು ಕಾರಣವಾಗಿರುತ್ತದೆ. ಪರಭಾಷೆಯ ಪದವನ್ನು ತಮ್ಮ ಭಾಷೆಯ ಪದವೊಂದಕ್ಕೆ ಸಮಾನವಾಗಿರುವಂತೆ ಹೊಂದಿಸಿಕೊಳ್ಳುವ, ನಿಷ್ಪತ್ತಿ ಹೇಳುವ ಒಂದು ಪ್ರವೃತ್ತಿಯೂ ಉಂಟು. ಇದನ್ನು 'Popular Etymology' ಎಂದು ಕರೆಯುತ್ತಾರೆ. ಆ್ಯಂಗ್ಲೊ–ಸ್ಯಾಕ್ಸನ್ ಭಾಷೆಯಲ್ಲಿ 'Guma' ಎಂದರೆ 'Man' ಎಂದೂ Brydguma ಎಂದರೆ 'Bride-man' (=ವರ) ಎಂದೂ ಅರ್ಥವಿತ್ತು. Guma ಎಂಬ ಪದವು ಕ್ರಮೇಣ ಬಳಕೆಯಲ್ಲಿ ತಪ್ಪಿತು. ಅದು 'Groom' ಎಂಬ ಪದಕ್ಕೆ ಸಂಬಂಧಪಟ್ಟದ್ದೆಂದು ಸಾಮಾನ್ಯವಾಗಿ ಭಾವಿಸಿದ್ದರಿಂದ ನವೀನರೂಪ—'Bride-groom' ಎಂಬುದು ಸಿದ್ಧವಾಯಿತು. ಕೆಲವು ಅಗಸರು 'ಬಿಳಿಚಿಂಗ್ ಪವ್‌ಡ್ರು' (=Bleaching powder) ಎಂದು ಉಚ್ಚರಿಸಲು ಕಾರಣ ಆ ಪುಡಿಯಿಂದ ಬಟ್ಟೆಗಳು ಬೆಳ್ಳಗಾಗುವುದರಿಂದ; ಅದಕ್ಕೂ 'ಬಿಳಿ' ಪದಕ್ಕೂ ಸಂಬಂಧವಿದೆಯೆಂದು ಭಾವಿಸಿರುವುದರಿಂದ. ಹಳಗನ್ನಡದ 'ಉಂಬಳಿ' ಪದದ ನಿಜವಾದ ಮೂಲ 'ಉಬ್ಬಲಿಕಾ' (<ಉದ್ಬಲಿ, Free from taxes) ಎಂಬ ಪದ. ಈ ಪದದ ನಿಜವಾದ ಮೂಲ ತಿಳಿಯದೆಹೋದದ್ದರಿಂದ, ಆ ಪದದಲ್ಲಿ ಉಣ್ + ಬಳಿ ಎಂಬ ಪದಗಳಿರುವುವೆಂದು ಕೆಲವರು ಭ್ರಮಿಸಿದರು.

'ಬಟಿ' ಎಂದರೆ ವಂಶ. ವಂಶಪಾರಂಪರ್ಯವಾಗಿ ಉಣ್ಣಲು ಎಂದರೆ ಭೋಗಿಸಲು ಕೊಟ್ಟ ಭೂಮಿಯೇ ಉಂಬಳಿ ಎಂದು ಭಾವಿಸಿ ಅದರ ರೂಪವನ್ನು 'ಉಂಬಟಿ' ಎಂದು ತಿದ್ದಿದರು (ಈ ರೂಪ ಕೇಶಿರಾಜನಲ್ಲಿ ಸಿಗುತ್ತದೆ.) ಇದೂ ಒಂದು ರೀತಿಯ Popular Etymology ಎನ್ನಬಹುದು.

ಕೊಡುವ ಭಾಷೆಯ ನಿಕಟ ಪರಿಚಯದಿಂದಾಗಿ ಸ್ವೀಕರಿಸುವ ಭಾಷೆಯು ಎಷ್ಟೋ ವೇಳೆ ಅಲ್ಲಿಯ ಧ್ವನಿಗಳು ತನಗೆ ಹೊಸವಾಗಿದ್ದರೂ ಅವುಗಳನ್ನು ಸ್ವೀಕರಿಸಬಹುದು. ದ್ರಾವಿಡ ಭಾಷೆಗಳಿಗೆ ಮಹಾಪ್ರಾಣಗಳು ಹೊಸವಾದರೂ ಸಂಸ್ಕೃತ ಮುಂತಾದ ಭಾಷೆಗಳ ಅತಿಪರಿಚಯದಿಂದಾಗಿ ಅವು ಮಹಾಪ್ರಾಣಗಳನ್ನು ಒಪ್ಪಿಕೊಂಡಿವೆ. ಹೊಸಗನ್ನಡದಲ್ಲಿ 'ದನ' (=Cattle) 'ಧನ' (=Wealth) ಮುಂತಾದ ಕಡೆಗಳಲ್ಲಿ ಅರ್ಥವ್ಯತ್ಯಾಸವನ್ನು ತೋರಲು ಮಹಾಪ್ರಾಣವು ಅತ್ಯವಶ್ಯಕವಾಗಿದೆ. (ಬಹುಶಃ 'ದನ' ಎಂಬುದು 'ಧನ'ದ ತದ್ಭವವಿರಬೇಕು. ಪಶುಗಳನ್ನು ಒಂದು ಕಾಲದಲ್ಲಿ ಐಶ್ವರ್ಯವೆಂದೇ ಭಾವಿಸುತ್ತಿದ್ದರು ಎಂಬುದನ್ನು ಇಲ್ಲಿ ನೆನೆಯಬಹುದು.) ಫ್ರೆಂಚ್ ಭಾಷೆಯ ಕೆಲವು ಪದಗಳೊಡನೆ [V-], [Z-] ಮುಂತಾದ ಕೆಲವು ಧ್ವನಿಗಳು ಇಂಗ್ಲಿಷ್ ಭಾಷೆಯನ್ನು ಪ್ರವೇಶಿಸಿ ಅದರ ಧ್ವನಿವ್ಯವಸ್ಥೆಯನ್ನು ಮಾರ್ಪಡಿಸಿರುವುದು ಗಮನಾರ್ಹ.

ಒಂದು ಪದವನ್ನು ಭಾಷೆಯು ಸ್ವೀಕರಿಸಿದಮೇಲೆ ಅದು ಅದರ ಆಸ್ತಿಯಾಗಿಬಿಡುತ್ತದೆ. ಆ ಭಾಷೆಯ ಇತರ ಪದಗಳಂತೆಯೇ ಅದೂ ಬೇರೆ ಬೇರೆ ರೂಪಾಂತರಗಳನ್ನು ತಾಳಬೇಕಾಗುತ್ತದೆ. 'Car' ಎಂಬ ಪದವು 'ಕಾರು' ಎಂದಾದಮೇಲೆ ಅದರ ಬಹುವಚನ 'ಕಾರುಗಳು' ಆಗಬೇಕೇ ಹೊರತು ಬೇರೆ ಆಗಲು ಸಾಧ್ಯವೇ ಇಲ್ಲ. ಕಾರನ್ನು, ಕಾರಿನಿಂದ, ಕಾರಿಗೆ, ಕಾರಿನ, ಕಾರಿನಲ್ಲಿ ಇತ್ಯಾದಿ ವಿಭಕ್ತಿ ಪ್ರತ್ಯಯಗಳನ್ನು ಇತರ ಕನ್ನಡ ಪದಗಳಂತೆಯೇ ತಾಳಬೇಕಾಗುತ್ತದೆ ಅದು.

ಪರಭಾಷೆಯ ಪದಗಳ ಒಂದು ಪ್ರತ್ಯಯವು ಬಹುವಾಗಿ ಬಳಕೆಯಲ್ಲಿದ್ದರೆ ಅದನ್ನು ದೇಶ್ಯಪದಗಳಿಗೂ ಹತ್ತಿಸುವುದುಂಟು. ಲ್ಯಾಟಿನ್-ಫ್ರೆಂಚ್ ಪ್ರತ್ಯಯ-able ಎಂಬುದು agreeable, excusable ಮುಂತಾದ ಸ್ವೀಕೃತ ಪದಗಳಲ್ಲಿ ಮಾತ್ರವಲ್ಲದೆ eatable, bearable ಮುಂತಾದ ಕಡೆಗಳಲ್ಲೂ ಕಾಣಿಸಿಕೊಳ್ಳುತ್ತದೆ. eat, bear ಎಂಬುವು ದೇಶ್ಯಪದಗಳು—ಕಾರ ಎಂಬ ಪ್ರತ್ಯಯವು ಸಂಸ್ಕೃತದ್ದು. ಕುಂಭಕಾರ (>ಕುಂಬಾರ), ಚರ್ಮಕಾರ (>ಚಮ್ಮಾರ) ಇತ್ಯಾದಿಗಳಲ್ಲಿ ಇದನ್ನು ಕಾಣಬಹುದು. ಈ ಪ್ರತ್ಯಯವನ್ನು ತೋಟಗಾರ, ನೇಕಾರ, ಎಲೆಗಾರ ಮುಂತಾದ ಕಡೆಗಳಲ್ಲಿ ದೇಶ್ಯಶಬ್ದಗಳಿಗೂ ಅಂಟಿಸಿರುವುದನ್ನು ನೋಡಬಹುದು.

ಒಂದು ಭಾಷೆಯಿಂದ ಸ್ವೀಕರಣಗಳು ಹೆಚ್ಚಾಗಿದ್ದರೆ ಆ ಭಾಷೆಯ ಪದಗಳ ರಚನೆಯನ್ನು ಅನುಕರಿಸಿ ಸ್ವೀಕರಿಸುವ ಭಾಷೆಯ ಪದಗಳು ಮಾರ್ಪಾಟಾಗಬಹುದು. ಕನ್ನಡದ ಕೈಗಾರಿಕೆ ಪದವನ್ನೇ ತೆಗೆದುಕೊಳ್ಳಬಹುದು. (ಅದರಲ್ಲಿರುವ—ಕಾರ ಪ್ರತ್ಯಯದ ಪ್ರಸ್ತಾಪ ಬೇಡ.) ಅದು 'ಕೈಗಾರಿಕಾ ಪ್ರಗತಿ', 'ಕೈಗಾರಿಕಾಭಿವೃದ್ಧಿ' ಮುಂತಾದ

ಕಡೆಗಳಲ್ಲಿ ಸಂಸ್ಕೃತ ಪದದ ರೂಪವನ್ನು ('ಕೈಗಾರಿಕಾ') ಪಡೆಯುವುದನ್ನು ನಾವು ನೋಡಬಹುದು.

ಒಂದು ಭಾಷೆಯನ್ನಾಡುವವರು ಪರಸಂಸ್ಕೃತಿಯಿಂದ ವಸ್ತುಗಳನ್ನು ಸ್ವೀಕರಿಸಿ ಅವುಗಳ ಜೊತೆಗೆ ಅಲ್ಲಿಯ ಪದಗಳನ್ನೂ ಸ್ವೀಕರಿಸಬಹುದು. ರೇಡಿಯೊ, ರೈಲು, ಕಾಲೇಜು ಇತ್ಯಾದಿಗಳು ಇದಕ್ಕೆ ಉದಾಹರಣೆಗಳು. ಆದರೆ ಕೆಲವೊಮ್ಮೆ ತಮ್ಮಲ್ಲೇ ಇರುವ ಪದಗಳನ್ನು ಹೊಸ ವಸ್ತುಗಳನ್ನು ಸೂಚಿಸಲು ಬಳಸಬಹುದು. ಪಾದ್ರಿಗಳು ಕ್ರಿಶ್ಚಿಯನ್ ಆವರಣದಲ್ಲಿ ಭಾರತೀಯ ಪದಗಳಾದ ಭಗವಾನ್, ಸ್ವರ್ಗ ಮುಂತಾದುವನ್ನು ಬಳಸುತ್ತಾರೆ. ನಮ್ಮಲ್ಲಿ ವಿದ್ಯುತ್, ವಿಮಾನ, ಸ್ನಾತಕ ಮುಂತಾದ ಪದಗಳಿದ್ದುವು. ಅವು ಸೂಚಿಸುತ್ತಿದ್ದ ವಸ್ತುಗಳಿಗೂ ನಾವು ಹೊಸದಾಗಿ ಸ್ವೀಕರಿಸಿದ ವಸ್ತುಗಳಿಗೂ ಬಹು ಹತ್ತಿರದ ಸಂಬಂಧವಿದ್ದಂತೆ ಕಂಡುಬಂದಿತು. ಆದ್ದರಿಂದ ಅವುಗಳನ್ನು electricity, aeroplane, graduate ಎಂಬರ್ಥದಲ್ಲಿ ಬಳಸುತ್ತಿದ್ದೇವೆ. ಹೊಸವಸ್ತುವನ್ನು ಸೂಚಿಸಲು ಸರಿಯಾದ ಪದವು ತನ್ನಲ್ಲಿಲ್ಲದಿದ್ದರೆ ಆ ಹೊಸ ವಸ್ತುವನ್ನು ತನ್ನ ಪದಗಳಲ್ಲಿ ವಿವರಿಸಬಹುದು. Pin ಎನ್ನುವುದು ಬರಿಯ ಸೂಜಿ ಅಲ್ಲ; ಅದರ ತಲೆ ಗುಂಡಗಿರುವುದರಿಂದ ಅದನ್ನು 'ಗುಂಡುಸೂಜಿ' ಎಂದು ಕರೆದರು. ರೈಲನ್ನು 'ಹೊಗೆಬಂಡಿ' ಎಂದು, ರೇಡಿಯೋವನ್ನು 'ಆಕಾಶವಾಣಿ' ಎಂದು, ಟೆಲಿಫೋನನ್ನು 'ದೂರವಾಣಿ' ಎಂದು ವಿವರಿಸಿರುವುದು ಕಂಡುಬರುತ್ತದೆ. ಅಮೆರಿಕದ ರೆಡ್-ಇಂಡಿಯನ್ನರು ವ್ಹಿಸ್ಕಿಯನ್ನು 'ಬೆಂಕಿ-ನೀರು' ಎಂಬರ್ಥ ಬರುವಂತೆ ವಿದ್ಯುತ್ತನ್ನು 'ಆವನ (ಎಂದರೆ ಗುಡುಗಿನ) ಕುಡಿನೋಟ' ಎಂಬರ್ಥ ಬರುವಂತೆ ಅನುವಾದಿಸಿಕೊಂಡಿದ್ದಾರೆ.

ಪರಭಾಷೆಯ ಪದವೇ ವಿವರಣರೂಪವಾಗಿದ್ದರೆ ಅದನ್ನು ಸ್ವೀಕರಿಸುವ ಭಾಷೆಯಲ್ಲಿ ಹಾಗೆಯೇ ಅನುವಾದ ಮಾಡಿಕೊಳ್ಳಬಹುದು. ಇವುಗಳನ್ನು ಭಾಷಾಂತರ-ಸ್ವೀಕರಣಗಳು (Translation-loans) ಎಂದು ಕರೆಯುತ್ತಾರೆ. ಪದಗಳು ಈ ಭಾಷೆಯವೇ ಆದರೂ ಅವುಗಳ ಮಾದರಿ ಮಾತ್ರ ಪರಭಾಷೆಯದು. ನಮ್ಮಲ್ಲಿ 'ಹಂಸ' ಎಂಬ ಪದವೂ 'ಗೀತ' ಎಂಬ ಪದವೂ ಇತ್ತು. Swan-song ಎಂಬುದನ್ನು ನಾವು 'ಹಂಸ-ಗೀತ' ಎಂದು ಅನುವಾದಮಾಡಿಕೊಂಡಿದ್ದೇವೆ. ಪಾಶ್ಚಾತ್ಯರ ಹರ್ಕ್ಯುಲಿಸನ ಸಾಹಸಕ್ಕೆ ಸಮಾನವಾದುದು ನಮ್ಮಲ್ಲಿ ಭಗೀರಥನ ಸಾಹಸ. ಆದ್ದರಿಂದ 'Herculean effort' ಎಂಬುದನ್ನು 'ಭಗೀರಥ-ಪ್ರಯತ್ನ' ಎಂದು ಅನುವಾದಿಸಿಕೊಂಡಿದ್ದೇವೆ. Cry in the wilderness = ಅರಣ್ಯರೋದನ, Superman = ಅತಿಮಾನವ, Cold war = ಶೀತಲಸಮರ, Foreword = ಮುನ್ನುಡಿ–ಇವೆಲ್ಲವೂ ಭಾಷಾಂತರ ಸ್ವೀಕರಣಗಳು. 'ಭಾಷಾಂತರ-ಸ್ವೀಕರಣ' ಎಂಬ ಉಕ್ತಿಯೇ ಭಾಷಾಂತರ-ಸ್ವೀಕರಣಕ್ಕೆ ಒಳ್ಳೆಯ ನಿದರ್ಶನವಾಗಬಲ್ಲುದು.

ಸಾಂಸ್ಕೃತಿಕ ಸ್ವೀಕರಣಗಳಿಂದ ಒಂದು ಜನಾಂಗವು ಇನ್ನೊಂದು ಜನಾಂಗದಿಂದ ಏನನ್ನು ಕಲಿತಿದೆ ಎಂಬುದನ್ನು ನಾವು ತಿಳಿಯಬಹುದು. ಸಂಸ್ಕೃತದಿಂದ ಕನ್ನಡವು

ಸ್ವೀಕರಿಸಿರುವ ಪದಗಳನ್ನು ನೋಡಿದರೆ, ನಮ್ಮ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಜೀವನದ ಮೇಲೆ ಆರ್ಯಸಂಸ್ಕೃತಿಯ ಪ್ರಭಾವವನ್ನು ಗುರುತಿಸಬಹುದು. ಕಳೆದ ಒಂದೆರಡು ಶತಮಾನಗಳಲ್ಲಿ ಕನ್ನಡವು ಪರ್ಷಿಯನ್, ಅರೇಬಿಕ್, ಹಿಂದೂಸ್ಥಾನಿಗಳಿಂದ ನೂರಾರು ಪದಗಳನ್ನು ಸ್ವೀಕರಿಸಿದೆ. ಇವುಗಳಲ್ಲಿ ಬಹುಪಾಲು ಆಡಳಿತಕ್ಕೆ ಸಂಬಂಧಪಟ್ಟವು. ಈಚೆಗೆ ಇಂಗ್ಲಿಷ್ ಭಾಷೆಯಿಂದ ಸ್ವೀಕರಿಸಿರುವ ಪದಗಳನ್ನು ನೋಡಿದರೆ ನಮಗೆ ಇಂಗ್ಲಿಷ್ ಆಧುನಿಕ ಸಂಸ್ಕೃತಿಯ ಹೆಬ್ಬಾಗಿಲಾಗಿ ಪರಿಣಮಿಸಿರುವುದನ್ನು ಗುರುತಿಸಬಹುದು. ಆಧುನಿಕ ವಿಜ್ಞಾನ, ಯಂತ್ರವಿಜ್ಞಾನ, ತತ್ತ್ವಶಾಸ್ತ್ರ, ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ ಇವುಗಳ ಪ್ರಭಾವವು ಕನ್ನಡನಾಡಿನ ಜನಜೀವನದ ಮೇಲೆ ಪೂರ್ಣಪ್ರಮಾಣದಲ್ಲಿ ಆಗಿರುವುದನ್ನು ಗಮನಿಸಬಹುದು. ಪಾಶ್ಚಾತ್ಯರ ಸಂಸ್ಕೃತಿಯಿಂದ ಭಾರತೀಯ ಸಂಸ್ಕೃತಿಯು ಗಣನಾರ್ಹಪ್ರಮಾಣದಲ್ಲಿ ವ್ಯತ್ಯಾಸಗೊಂಡಿರುವುದನ್ನೂ ಗುರುತಿಸಬಹುದು. ಇದಕ್ಕೆ ಬಹುಮಟ್ಟಿಗೆ ಕಾರಣ ಇಂಗ್ಲಿಷ್ ಭಾಷೆ. ಈಚೆಗೆ ಇಂಗ್ಲಿಷ್ ಭಾಷೆಯು ಫ್ರೆಂಚ್‌ಭಾಷೆಯಿಂದ ಮುಖ್ಯವಾಗಿ ಸ್ತ್ರೀಯರ ವೇಷಭೂಷಣಗಳು, ಅಲಂಕಾರಸಾಮಗ್ರಿಗಳು, ಭೋಗಸಾಮಗ್ರಿಗಳು ಇತ್ಯಾದಿಗಳಿಗೆ ಸಂಬಂಧಿಸಿದ ಪದಗಳನ್ನು ಸ್ವೀಕರಿಸಿದೆ. ಆದ್ದರಿಂದ ಒಂದು ಭಾಷೆಯು ಇನ್ನುಳಿದ ಭಾಷೆಗಳಿಂದ ಸ್ವೀಕರಿಸಿರುವ ಪದಗಳ ಅಧ್ಯಯನದಿಂದ ಆ ಭಾಷೆಯನ್ನಾಡುವವರು ಇತರ ಸಂಸ್ಕೃತಿಗಳಿಗೆ ಅಥವಾ ಜನಾಂಗಗಳಿಗೆ ಸಾಂಸ್ಕೃತಿಕವಾಗಿ ಎಷ್ಟು ಋಣಿಗಳಾಗಿದ್ದಾರೆಂಬುದನ್ನು ಅರಿಯಬಹುದು. ಹೀಗೆ ಸ್ವೀಕರಣಗಳ ಅಧ್ಯಯನವು ಒಂದು ನಾಡಿನ ಸಾಂಸ್ಕೃತಿಕ ಅಧ್ಯಯನಕ್ಕೆ ಪೂರಕವಾಗಿ ಪರಿಣಮಿಸಬಲ್ಲುದು.

## ಏಕಪಕ್ಷೀಯ ಸ್ವೀಕರಣ

ಏಕಪಕ್ಷೀಯ ಸ್ವೀಕರಣವು ಸಾಂಸ್ಕೃತಿಕ ಸ್ವೀಕರಣದಂತೆಯೇ ಎರಡು ಸ್ವತಂತ್ರ ಭಾಷೆಗಳ ಮಧ್ಯೆ ನಡೆಯತಕ್ಕುದಾದರೂ ಎರಡಕ್ಕೂ ಒಂದು ಪ್ರಧಾನ ವ್ಯತ್ಯಾಸವಿದೆ. ಅದನ್ನಾಗಲೇ ಹಿಂದೆ ಹೇಳಿದೆ. ಸಾಂಸ್ಕೃತಿಕ ಸ್ವೀಕರಣದಲ್ಲಿ ಎರಡು ಭಾಷೆಗಳೂ ಪರಸ್ಪರ ತೆಗೆದುಕೊಂಡು ಪ್ರತಿಯಾಗಿ ಕೊಟ್ಟಿರುತ್ತವೆ. ಇಲ್ಲಿಯಾದರೋ ಸ್ವೀಕರಣವು ಏಕಪಕ್ಷೀಯವಾದುದು—ಕೆಳಭಾಷೆಯು ಮೇಲುಭಾಷೆಯಿಂದ ಭಾಷಾಂಶಗಳನ್ನು ಸ್ವೀಕರಿಸುತ್ತದೆಯೇ ಹೊರತು ಪ್ರತಿಯಾಗಿ ಏನೂ ಕೊಡಲಾರದು. ಸಾಂಸ್ಕೃತಿಕ ಸ್ವೀಕರಣಗಳ ಸಂಬಂಧವಾಗಿ ಹೇಳಿದ ಅನೇಕ ವಿಷಯಗಳು ಏಕಪಕ್ಷೀಯ ಸ್ವೀಕರಣಗಳಿಗೂ ಅನ್ವಯಿಸುತ್ತವೆ.

ಏಕಪಕ್ಷೀಯ ಸ್ವೀಕರಣದಲ್ಲಿ ಕೆಳ ಭಾಷೆ (Lower Language), ಮೇಲು ಭಾಷೆ (Upper Language) ಎಂದು ಎರಡನ್ನು ಗುರುತಿಸಬಹುದು. ನೀರಿನಂತೆ ಮೇಲು ಭಾಷೆಯಿಂದ ಕೆಳಭಾಷೆಗೆ ಭಾಷಾಂಶಗಳು ಹರಿದುಬರುತ್ತಲೇ ಇರುತ್ತವೆ. ಕೆಳಭಾಷೆ, ಮೇಲುಭಾಷೆಗಳು ಕಾಣಿಸಿಕೊಳ್ಳುವ ಸನ್ನಿವೇಶ ಹೀಗಿರಬಹುದು. ಒಂದು ಪ್ರಬಲ

ನಾಂಗವು ಇನ್ನೊಂದು ದುರ್ಬಲ ಜನಾಂಗವನ್ನು ಗೆದ್ದು ಆಳುತ್ತಿದೆಯೆಂದು ಭಾವಿ ... ಆಗ ಪ್ರಬಲ ಜನಾಂಗದವರಿಗೆ ತಾವು ಶ್ರೇಷ್ಠರೆಂದೂ ದುರ್ಬಲ ಜನಾಂಗ ವರಿಗೆ ತಾವು ಎಷ್ಟೇ ಆಗಲಿ ಕನಿಷ್ಠರೆಂದೂ ಅನ್ನಿಸುವುದು ಸಹಜ. ಹಾಗೆಯೇ ಮ್ಮ ತಮ್ಮ ಭಾಷೆಗಳ ವಿಷಯದಲ್ಲೂ ಆಯಾ ಭಾವನೆಗಳು ಬರುತ್ತವೆ. ಪ್ರಬಲ ಜನಾಂಗದವರಿಗೆ ತಮ್ಮ ಭಾಷೆಯೇ ಶ್ರೇಷ್ಠವೆಂದು ಅನ್ನಿಸುವುದರಿಂದ ದುರ್ಬಲ ಜನಾಂಗದವರ ಭಾಷೆಯಿಂದ ತಾವು ಏನನ್ನೂ ತೆಗೆದುಕೊಳ್ಳಬೇಕಾಗಿಲ್ಲವೆಂಬ ಅಲಕ್ಷ್ಯ ಮನೋಭಾವ ಮೂಡುತ್ತದೆ. ದುರ್ಬಲ ಜನಾಂಗದವರಿಗೆ ತಮ್ಮ ಭಾಷೆಯ ವಿಷಯ ದಲ್ಲಿ ಅಷ್ಟೊಂದು ಅಲಕ್ಷ್ಯವಿರದಿದ್ದರೂ ಪ್ರಬಲ ಜನಾಂಗದವರ ಭಾಷೆ ಶ್ರೇಷ್ಠ ವೆಂದೂ ಅನುಕರಣೀಯವೆಂದೂ ಅವರಿಗೆ ಅನ್ನಿಸುತ್ತದೆ. ಹೀಗೆ ಗೆದ್ದವರ ಭಾಷೆ ಯನ್ನು ಸೋತವರು ಅನುಕರಿಸುತ್ತಾರೆ, ಅಲ್ಲಿಂದ ಇಲ್ಲಿಗೆ ಬೇಕಾದಷ್ಟು ಭಾಷಾಂಶ ಗಳು ಹರಿದುಬರುತ್ತವೆ. ಪ್ರಬಲ ಜನಾಂಗದವರ ಭಾಷೆಯು ಮೇಲುಭಾಷೆಯಾಗಿಯೂ ಸೋತ ಜನಾಂಗದವರ ಭಾಷೆಯು ಕೆಳಭಾಷೆಯಾಗಿಯೂ ಪರಿಣಮಿಸುವುದು ಹೀಗೆ.

ಕೆಳಭಾಷೆಯವರು ಮೇಲುಭಾಷೆಯನ್ನು ಕಲಿಯಲೇಬೇಕಾಗುತ್ತದೆ. ಇಲ್ಲದಿದ್ದರೆ ಗೆದ್ದ ವರ ವಿಡಂಬನೆಗೂ ಹಾಸ್ಯಕ್ಕೂ ಅಲಕ್ಷ್ಯಕ್ಕೂ ಗುರಿಯಾಗಬೇಕಾಗುತ್ತದೆ. ರಾಜಕೀಯ ವಾದ ಕಾರಣಗಳಿಗೂ ಮೇಲುಭಾಷೆಯನ್ನು ಕಲಿಯಬೇಕಾಗುತ್ತದೆ. ಇಲ್ಲದಿದ್ದರೆ ಆಡಳಿತದಲ್ಲಿ ಒಳ್ಳೆಯ ಕೆಲಸಗಳು ಸಿಗದೆ ಇರಬಹುದು. ಗೆದ್ದವರು ತಮ್ಮ ಭಾಷೆಯನ್ನು ಕಲಿತಿರುವವರಿಗೆ ಒಳ್ಳೆಯ ಉದ್ಯೋಗಗಳನ್ನು ಕೊಡುವುದು ಸಹಜವೇ. ಮೇಲು ಭಾಷೆಯವರ ಭಾಷೆಯನ್ನೇ ಹೆಚ್ಚುಹೆಚ್ಚಾಗಿ ಕಲಿತು, ತಮ್ಮ ಭಾಷೆಯ ವಿಷಯದಲ್ಲಿ ಅಲಕ್ಷ್ಯಭಾವನೆಯನ್ನು ಮೂಡಿಸಿಕೊಂಡರೆ ಕ್ರಮೇಣ ಸೋತವರ ಭಾಷೆಯು ನಿರ್ನಾಮ ವಾಗಿ ಹೋಗಿ ಅವರಿಗೆ ಕ್ರಮೇಣ ಮೇಲುಭಾಷೆಯೇ ಮಾತೃಭಾಷೆಯಾಗಿ ಪರಿಣಮಿಸ ಬಹುದು. ಇದನ್ನು ನೀಗ್ರೋಗಳಲ್ಲಿ ಹೆಚ್ಚಾಗಿ ಕಾಣಬಹುದು. ಅಮೆರಿಕದ ನೀಗ್ರೋ ಗಳಿಗೆ ಈಗ ಇಂಗ್ಲಿಷ್ ಭಾಷೆಯು ಮಾತೃಭಾಷೆಯಾಗಿ ಪರಿಣಮಿಸಿದೆ. ಭಾರತದಲ್ಲಿ ಹೊಸದಾಗಿ ಮತಾಂತರಗೊಂಡ ಅನೇಕ ಕ್ರಿಶ್ಚಿಯನ್ನರು ಇಂಗ್ಲಿಷನ್ನೂ, ಅನೇಕ ಮುಸ್ಲಿಮರು ಉರ್ದುವನ್ನೂ ಮನೆಮಾತಾಗಿ ಮಾಡಿಕೊಂಡಿದ್ದಾರೆ. ಇವರು ಹೊಸ ದಾಗಿ ಮತಾಂತರಗೊಂಡಾಗ ಯಾವುದೋ ದೇಶೀಯ ಭಾಷೆ ಇವರ ತಾಯ್ನುಡಿ ಯಾಗಿದ್ದಿತು. ಮತಾಂತರಗೊಂಡಮೇಲೆ ಇವರು ಇಂಗ್ಲಿಷನ್ನೋ ಅಥವಾ ಉರ್ದು ವನ್ನೋ ಮಾತನಾಡದಿದ್ದುದು ಇತರರಿಗೆ ಕೊರತೆಯಾಗಿ ದೋಷವಾಗಿ ಕಾಣಿಸಿರ ಬೇಕು; ಆ ಕಾರಣಕ್ಕಾಗಿ ಅವರು ಅನೇಕ ತೊಂದರೆಗಳನ್ನು ಎದುರಿಸಿರಬಹುದು. ಅಲ್ಲದೆ ತಮ್ಮ ತಾಯ್ನುಡಿಯ ವಿಷಯದಲ್ಲಿ ಅಲಕ್ಷ್ಯವೂ ತಮಗೆ ಹೊಸ ಧರ್ಮ ವೊಂದನ್ನು ಕೊಟ್ಟವರ ಮತ್ತು ಅವರ ಭಾಷೆಯ ವಿಷಯದಲ್ಲಿ ಮೆಚ್ಚುಗೆಯ ಭಾವ ನೆಯೂ ಬಂದಿರಬೇಕು. ಅದರ ಫಲವಾಗಿ ಅವರು ಮೊದಮೊದಲು ಮೇಲುಭಾಷೆಯನ್ನು ಬಹಳವಾಗಿ ಅನುಕರಿಸಲು ಪ್ರಯತ್ನಿಸಿರಬೇಕು. ಅವರ ಮಕ್ಕಳ, ಮೊಮ್ಮಕ್ಕಳ ಕಾಲಕ್ಕೆ

ಆ ಮೇಲುಭಾಷೆಯು ಸಹಜವಾದ ಮನೆಮಾತಾಗಿ ಪರಿಣಮಿಸಿರಬೇಕು. ಆದರೂ ಈಗಲೂ ಕೂಡ ಭಾರತೀಯ ಕ್ರಿಶ್ಚಿಯನ್ನರಲ್ಲಿ ಮತ್ತು ಮುಸ್ಲಿಮರಲ್ಲಿ ಕನ್ನಡವನ್ನು ಮನೆಮಾತಾಗಿ ಉಳ್ಳವರು ಹಲವರಿದ್ದಾರೆ.

ಒಂದು ಪ್ರಾಂತವನ್ನು ಹೊರಗಿನಿಂದ ಬಂದು ಗೆದ್ದವರು ತಮ್ಮ ಜೊತೆಯಲ್ಲಿ ಹೆಂಗಸರನ್ನು ಕರೆತರದಿದ್ದರೆ ತಾವು ಗೆದ್ದ ಪ್ರಾಂತದ ಸ್ತ್ರೀಯರನ್ನು ವಿವಾಹಮಾಡಿಕೊಂಡು ಅಲ್ಲೇ ನೆಲಸುವ ಪ್ರಸಂಗ ಬರುವುದೆಂದು ಇಟ್ಟುಕೊಳ್ಳೋಣ. ಅಂತಹ ಸಂದರ್ಭಗಳಲ್ಲಿ ಗೆದ್ದವರ ಮೇಲುಭಾಷೆಯೇ ಕ್ರಮೇಣ ನಾಶವಾಗಬಹುದು. ಅವರು ಸೋತವರ ಭಾಷೆಯನ್ನೇ ತಮ್ಮ ಮಾತಾಗಿ ರೂಢಿಸಿಕೊಳ್ಳಬಹುದು.

ಕೆಳಭಾಷೆಯವರು ಮೇಲುಭಾಷೆಯನ್ನು ಸರಿಯಾಗಿ ಕಲಿಯದೆ, ಮೇಲುಭಾಷೆಯವರೊಡನೆ ವ್ಯವಹರಿಸಲು ಅವರ ಭಾಷೆಯನ್ನು ಹೇಗೋ ಏನೋ ಹೊಂದಿಸಿಕೊಂಡು ತಮ್ಮದೇ ಆದ ರೀತಿಯಲ್ಲಿ ಆಡುವುದುಂಟು. ಇಂಥ ಭಾಷೆಯನ್ನು 'Jargon' ಎಂದು ಕರೆಯುತ್ತಾರೆ. ಕೆಳಭಾಷೆಯವರು ಮೇಲುಭಾಷೆಯನ್ನಾಡಲು ಮಾಡಿದ ದುರ್ಬಲ ಪ್ರಯತ್ನಗಳ ಫಲ ಇದು. ಆಂಗ್ಲರು ಭಾರತವನ್ನು ಆಳುತ್ತಿದ್ದಾಗ ಆಂಗ್ಲ ಅಧಿಕಾರಿಗಳ ಅಡುಗೆಯವರು ಆಡುತ್ತಿದ್ದ 'Butler English' ಕೂಡ ಒಂದು ರೀತಿಯ ಜಾರ್ಗನ್ನೆಂದೇ ಹೇಳಬಹುದು. ಇಂಗ್ಲಿಷ್ ಭಾಷೆಯ ಜಾರ್ಗನ್ನುಗಳನ್ನು ಪ್ರಪಂಚದಲ್ಲಿ ಹಲವೆಡೆ ಆಡುತ್ತಿದ್ದಾರೆ. ದಕ್ಷಿಣ ಸಮುದ್ರಗಳ ಪಶ್ಚಿಮ ದ್ವೀಪಗಳಲ್ಲಿ ಆಡುವ ಇಂಗ್ಲಿಷ್ ಜಾರ್ಗನ್ನನ್ನು 'ಬೀಚ್-ಲಾ-ಮಾರ್' (Beach-La-Mar) ಎಂದು ಕರೆಯುತ್ತಾರೆ. ಚೀನಾದ ರೇವುಗಳಲ್ಲಿ ಆಡುವ ಇಂಗ್ಲಿಷ್ ಜಾರ್ಗನ್ನನ್ನು 'Pidgin English' ಎಂದು ಕರೆಯುತ್ತಾರೆ. ಬೀಚ್-ಲಾ-ಮಾರದಿಂದ ಕೆಲವು ಉದಾಹರಣೆಗಳನ್ನು ಕೆಳಗೆ ಕೊಡಲಾಗಿದೆ. ಬೆಳ್ಳಿಯ ಪಾತ್ರೆಗಳನ್ನು ಒಲೆಯ ಮೇಲಿಟ್ಟ ಅಡುಗೆಯವನಿಗೆ ಹೇಳಿದ ಮಾತು :

"What for you put diss belonga master in fire ? Him cost plenty money and that fellow kai-kai him" (='Why did you put the master's dishes into the fire ? They cost a lot of money and it has destroyed them')

"You not like soup ? He plenty goodkai-kai" (='Don't you like the soup ? It's very good')

"What man you give him stick" (='To whom did you give the stick ?')

ಜಾರ್ಗನ್ ಎಂಬುದು ಯಾರ ತಾಯ್ನುಡಿಯೂ ಅಲ್ಲ. ಆದರೂ ಜಾರ್ಗನ್ ಕ್ರಮೇಣ ಕೆಲವರ ಮಾತೃಭಾಷೆಯಾಗಿ ಪರಿಣಮಿಸಿದರೂ ಆಶ್ಚರ್ಯವಿಲ್ಲ.

## ಉಪಭಾಷಾಸ್ವೀಕರಣ

ಒಂದು ಭಾಷೆಯ ಉಪಭಾಷೆಗಳಲ್ಲಿ ಪರಸ್ಪರ ನಡೆಯುವ ಸ್ವೀಕರಣವನ್ನು ಉಪಭಾಷಾಸ್ವೀಕರಣವೆಂದು ಕರೆಯಬಹುದು.

ಒಂದು ಭಾಷೆಯು ತಕ್ಕಮಟ್ಟಿಗೆ ವಿಸ್ತಾರವಾದ ಪ್ರದೇಶವೊಂದರಲ್ಲಿ ಹಬ್ಬಿದ್ದರೆ ಅದರಲ್ಲಿ ಅನೇಕ ಉಪಭಾಷೆಗಳಿರುತ್ತವೆಯೆಂಬುದು ಎಲ್ಲರ ಅನುಭವಕ್ಕೆ ಬಂದ ವಿಷಯ. ಈ ಉಪಭಾಷೆಗಳಲ್ಲಿ ಎಲ್ಲಕ್ಕೂ ಸಮಾನವಾದ ಸ್ಥಾನವಿರುವುದಿಲ್ಲ. ಆ ಭಾಷಾ ಪ್ರದೇಶದಲ್ಲಿ ರಾಜಕೀಯವಾಗಿಯೋ ಸಾಂಸ್ಕೃತಿಕವಾಗಿಯೋ ಅಥವಾ ಧಾರ್ಮಿಕವಾಗಿಯೋ, ಅಂತೂ ಯಾವುದೋ ಕಾರಣದಿಂದ ಒಂದು ಭಾಗಕ್ಕೆ ವಿಶೇಷ ಪ್ರಾಶಸ್ತ್ಯ ದೊರಕಿದೆಯೆಂದು ಭಾವಿಸೋಣ. ಆ ಭಾಗದಲ್ಲಿ ಆ ಪ್ರದೇಶದ ರಾಜಧಾನಿ ಇರಬಹುದು, ಯಾವುದೋ ಅತ್ಯಂತ ಪ್ರಮುಖವಾದ ಧಾರ್ಮಿಕ ಸಂಸ್ಥೆಯಿರಬಹುದು, ಅಥವಾ ಒಂದು ಪ್ರಸಿದ್ಧ ವಿದ್ಯಾಕೇಂದ್ರವಾಗಿರುವ ನಗರವಿರಬಹುದು. ಅಂತಹ ಪರಿಸ್ಥಿತಿಯಲ್ಲಿ ಆ ಭಾಗದಲ್ಲಾಡುವ ಉಪಭಾಷೆಯು ಇಡೀ ಭಾಷಾಪ್ರದೇಶಕ್ಕೆ ಪ್ರಮಾಣಭಾಷೆಯಾಗಬಹುದು (Standard Language). ಉಳಿದ ಉಪಭಾಷೆಗಳು ಈ ಪ್ರಮಾಣ ಭಾಷೆಯಿಂದ ಬೇಕಾದಷ್ಟು ಅಂಶಗಳನ್ನು ಗ್ರಹಿಸಬಹುದು. ಇಂಗ್ಲೆಂಡಿನಲ್ಲಿ ಲಂಡನ್ ಮತ್ತು ಅದರ ಸುತ್ತಮುತ್ತಣ ಪ್ರದೇಶದಲ್ಲಿ ಆಡುವ ಭಾಷೆಯು ಇಂಗ್ಲಿಷಿಗೆ ಪ್ರಮಾಣ ಭಾಷೆಯೆಂದು (Standard Language) ಅಂಗೀಕೃತವಾಗಿದೆ. ಇಂತಹ ಪ್ರಮಾಣ ಭಾಷೆಗಳ ಪ್ರಭಾವವು ಉಳಿದ ಉಪಭಾಷೆಗಳ ಮೇಲೆ ಹೇರಳವಾಗಿರುತ್ತದೆ. ಪ್ರಮಾಣ ಭಾಷೆಯ ಪ್ರಭಾವದಿಂದ ಅದರ ಸುತ್ತಮುತ್ತಣ ಸಣ್ಣಪುಟ್ಟ ಉಪಭಾಷೆಗಳು ನಾಶವಾಗಬಹುದು. ಲಂಡನ್ನಿನ ಉಪಭಾಷೆಯು ಪ್ರಮಾಣಭಾಷೆಯೆಂದು ಅಂಗೀಕಾರವಾದ್ದರಿಂದ ಅದರ ಸುತ್ತಮುತ್ತ ಸಮೀಪದಲ್ಲಿ ಪ್ರಾದೇಶಿಕ ಉಪಭಾಷೆ ಯಾವುದೂ ಇಲ್ಲವೆಂದು ಹೇಳುತ್ತಾರೆ. ರೋಮ್ ನಗರವು ಇಟಲಿಯ ರಾಜಕೀಯ-ಸಾಂಸ್ಕೃತಿಕ ಕೇಂದ್ರವಾಗಿ ಪರಿಣಮಿಸಿದಾಗ ಆ ಪಟ್ಟಣದಲ್ಲಿ ಆಡುತ್ತಿದ್ದ ಒಂದು ರೀತಿಯ ಲ್ಯಾಟಿನ್ ಭಾಷೆಯು ಪ್ರಮಾಣಭಾಷೆಯಾಯಿತು. ಅದರ ಫಲವಾಗಿ ಇಟಲಿಯ ಉಳಿದ ಉಪಭಾಷೆಗಳು ನಾಶವಾದುವು. ಈ ಲ್ಯಾಟಿನ್ನಿನಿಂದ ಮುಂದೆ ಫ್ರೆಂಚ್, ಇಟಾಲಿಯನ್ ಮುಂತಾದ ಭಾಷೆಗಳು ಕವಲೊಡೆದುವು. ಕರ್ನಾಟಕದಲ್ಲಿ ಮೈಸೂರು ನಗರ, ಬೆಂಗಳೂರು ನಗರ ಮತ್ತು ಸುತ್ತಮುತ್ತ ಇರುವ ಪಟ್ಟಣಗಳ ವಿದ್ಯಾವಂತರ ಭಾಷೆಯು ಶಿಷ್ಟಭಾಷೆಯೆಂದು ಹಲವರ ಭಾವನೆ. ಈ ಶಿಷ್ಟಭಾಷೆಯ ಪ್ರಭಾವವು ಕನ್ನಡದ ಹಲವು ಉಪಭಾಷೆಗಳ ಮೇಲಾಗಿ ಆ ಉಪಭಾಷೆಗಳಿಗಿರುವ ಅಂತರವು ದಿನೇದಿನೇ ಕಡಮೆಯಾಗುತ್ತಿದೆ.

ಪ್ರಮಾಣಭಾಷೆಯು ಬರಹದ ಭಾಷೆಗೆ ಬಹು ಹತ್ತಿರವಾಗುತ್ತದೆ. ಅದು ಉಳಿದ ಉಪಭಾಷೆಗಳ ಮೇಲೆ ಪ್ರಭಾವವನ್ನು ಬೀರಲು ಅದೂ ಕಾರಣವಾಗಿರುತ್ತದೆ. ಅಲ್ಲದೆ, ಒಂದೊಂದು ಉಪಭಾಷಾ ಪ್ರದೇಶದಲ್ಲೂ ಮತ್ತೆ ವಿದ್ಯಾವಂತರ ಭಾಷೆಗೂ ಅವಿದ್ಯಾ

ವಂತರ ಭಾಷೆಗೂ ಬಹು ಅಂತರವಿರುತ್ತದೆ. ಅವಿದ್ಯಾವಂತರು, ಅದರಲ್ಲೂ ಅವರಲ್ಲಿ ಯುವಕರಾದವರು, ವಿದ್ಯಾವಂತರ ಮಾತನ್ನು, ಉಕ್ತಿಗಳನ್ನು ಅನುಕರಿಸಲು ವಿಶೇಷವಾಗಿ ಪ್ರಯತ್ನಿಸುತ್ತಾರೆ. ತಮ್ಮ ತಮ್ಮ ಸಂಭಾಷಣೆಗಳಲ್ಲಿ ಸಹಜವಾಗಿ ಕಾಣಿಸಿಕೊಳ್ಳುವ ಪ್ರಾದೇಶಿಕ ವೈಲಕ್ಷಣ್ಯಗಳನ್ನು ಉಳಿದವರೊಡನೆ ಸಂಭಾಷಣೆಯಲ್ಲಿ ತೊಡಗಿದಾಗ ಆದಷ್ಟು ಮರೆಮಾಚಲು ಪ್ರಯತ್ನಿಸುತ್ತಾರೆ. ವಿದ್ಯಾವಂತರ ಉಪಭಾಷೆಯು ಅವಿದ್ಯಾವಂತರ ಉಪಭಾಷೆಯ ಮೇಲೆ ಬಹುವಾದ ರೀತಿಯಲ್ಲಿ ತನ್ನ ಪ್ರಭಾವವನ್ನು ಬೀರುತ್ತಿರುತ್ತದೆ. ಅವಿದ್ಯಾವಂತರೂ ಕೂಡ ವಿದ್ಯಾವಂತರಾಡುವ ನುಡಿಗಳನ್ನು ಅಷ್ಟೇ ಆತುರಾತುರವಾಗಿ ಸ್ವೀಕರಿಸುತ್ತಿರುತ್ತಾರೆ.

ಆದರೆ ಈ ಮಾತನ್ನು ಎಲ್ಲ ಉಪಭಾಷೆಗಳಿಗೂ ಅನ್ವಯಿಸಲು ಬರುವುದಿಲ್ಲವೆಂದು ಕಾಣಿಸುತ್ತದೆ. ಎಷ್ಟೋ ಉಪಭಾಷೆಗಳು ಪ್ರಮಾಣಭಾಷೆಯನ್ನಾಡುತ್ತಿರುವ ಜನರ ಮಧ್ಯೆ ಅನೇಕ ವರ್ಷಗಳಿದ್ದರೂ ತಮ್ಮ ತಮ್ಮ ವೈಲಕ್ಷಣ್ಯಗಳನ್ನು ಅಚ್ಚಳಿಯದೆ ಉಳಿಸಿಕೊಂಡು ಬಂದಿರುವುದಕ್ಕೆ ನಿದರ್ಶನಗಳಿವೆ. ಅಂತಹ ಜನರು ತಮ್ಮ ತಮ್ಮ ಗುಂಪಲ್ಲಿ ಒಂದು ರೀತಿಯಾಗಿ, ಹೊರಗೆ ಉಳಿದವರ ಜೊತೆಯಲ್ಲಿ ಇನ್ನೊಂದು ರೀತಿಯಾಗಿ ಮಾತನಾಡುವುದುಂಟು. ಮೈಸೂರು ನಗರದ ಮಧ್ಯೆ ತಮ್ಮ ಉಪಭಾಷೆಗಳ ವೈಲಕ್ಷಣ್ಯಗಳನ್ನು ಪ್ರತಿಜ್ಞೆಮಾಡಿಯೋ ಏನೋ ಎಂಬಂತೆ ಉಳಿಸಿಕೊಂಡಿರುವ ಹಲವು ಗುಂಪುಗಳನ್ನು ಈಗಲೂ ಕಾಣಬಹುದಾಗಿದೆ.

ಬರಹದ ಭಾಷೆಯು ಪ್ರಮಾಣ ಭಾಷೆಗೆ ಹತ್ತಿರವಾಗಿರುತ್ತದೆಯೆಂದು ಮೇಲೆ ಹೇಳಿದೆ. (ಒಂದು ಇನ್ನೊಂದರಿಂದ ರೂಪಿತವಾಗಿರುತ್ತದೆ.) ಬರಹದ ಭಾಷೆಯಂತೆಯೇ ಮಾತನಾಡಲು ಪ್ರಯತ್ನಿಸಿದರೆ ಅದು ಬಹಳ ಕೃತಕವಾಗಿ ಕಾಣಿಸುತ್ತದೆ. ಎಷ್ಟೋ ಪದಗಳು ಆಡುಮಾತಿನಲ್ಲಿ ನಿರ್ನಾಮವಾಗಿ, ಬರಹದ ಭಾಷೆಯಲ್ಲಿ ಉಳಿದುಕೊಂಡು ಮತ್ತೆ ಆಡುಮಾತನ್ನು ಪ್ರವೇಶಿಸಬಹುದು. Sooth, Guise ಮುಂತಾದುವು ಈ ಜಾತಿಗೆ ಸೇರಿದುವು. ಹೊಸಗನ್ನಡ ಲೇಖಕರು ಪೆಂಪು, ಬಾನು ಮುಂತಾದ ಪದಗಳನ್ನು ತಮ್ಮ ಬರಹಗಳಲ್ಲಿ ಹೆಚ್ಚುಹೆಚ್ಚಾಗಿ ಬಳಸುತ್ತಿದ್ದಾರೆ. ಇಂತಹ ಪದಗಳು ನಮ್ಮ ದಿನನಿತ್ಯದ ಸಂಭಾಷಣೆಗಳಲ್ಲಿ ಕ್ರಮೇಣ ಕಾಣಿಸಿಕೊಂಡರೆ ಆಶ್ಚರ್ಯವಿಲ್ಲ. ವಿದ್ವಾಂಸರಿಂದ ಬಳಕೆಯಾಗುವ ಪದಗಳು (Learned Words) ಎಷ್ಟೋ ಸಾರಿ ಆಡುಮಾತನ್ನು ಪ್ರವೇಶಿಸಿ ಸಾಮಾನ್ಯರ ನಾಲಗೆಯ ಮೇಲೂ ನಲಿಯುವುದುಂಟು. 'ಆರ್ಸಿಕಾಲ' (<ಆರ್ಷೇಯಕಾಲ), 'ಸಪ್ನ' (<ಸ್ವಪ್ನ) ಇತ್ಯಾದಿ ಪದಗಳನ್ನು ಇಲ್ಲಿ ಉದಾಹರಿಸಬಹುದು.

ಕನ್ನಡದ ಉಪಭಾಷೆಗಳ ಮೇಲೆ ಏನೂ ಕೆಲಸ ನಡೆದಿಲ್ಲವೆಂದೇ ಹೇಳಬೇಕಾಗಿದೆ. ಅವುಗಳನ್ನು ಗುರುತಿಸುವ ಕೆಲಸವಾಗಲಿ, ಅವುಗಳಲ್ಲಿ ನಡೆದಿರುವ ಸ್ವೀಕರಣ ಕಾರ್ಯವನ್ನು ಕುರಿತಾದ ಕೆಲಸವಾಗಲಿ ನಡೆದಿಲ್ಲವೆಂದೇ ಹೇಳಬೇಕು. ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಧಾರವಾಡದ ಉಪಭಾಷೆ ಮೈಸೂರಿನವರಿಗೆ ಮೈಸೂರಿನವರ ಉಪಭಾಷೆಯು

ಧಾರವಾಡದವರಿಗೆ ಅರ್ಥವಾಗುವುದು ಸ್ವಲ್ಪ ಕಷ್ಟವಾಗುತ್ತಿತ್ತು. ಈ ದಿನ ಅವು ಗಳಿಗಿರುವ ಅಂತರ ಕಡಮೆಯಾಗುತ್ತಿದೆ. ಅವುಗಳ ಮಧ್ಯೆ ಪರಸ್ಪರ ಸ್ವೀಕರಣವು ನಡೆಯುತ್ತಿದೆ. ಯಾವ ಉಪಭಾಷೆಯಿಂದ ಯಾವ ಉಪಭಾಷೆಯು ಹೆಚ್ಚಾಗಿ ಸ್ವೀಕರಿಸುತ್ತಿದೆ ಎಂಬುದರ ನಿರ್ಣಯವಿನ್ನೂ ಆಗಬೇಕಾಗಿದೆ. ಮೈಸೂರಿನವರಿಗೇನೋ ತಮ್ಮ ಉಪಭಾಷೆಯು ಧಾರವಾಡದ ಉಪಭಾಷೆಯಿಂದ ಅತ್ಯಲ್ಪವಾಗಿ ಸ್ವೀಕರಿಸಿದೆ ಯೆಂದೂ ಆ ಉಪಭಾಷೆಯು ತಮ್ಮಿಂದ ಹೆಚ್ಚು ಸ್ವೀಕರಣಗಳನ್ನು ಪಡೆದಿದೆಯೆಂದೂ ತಮ್ಮ ಉಪಭಾಷೆಯಿಂದ ಹೆಚ್ಚು ಪ್ರಭಾವಿತವಾಗಿದೆಯೆಂದೂ ಭಾವನೆಯಿದೆ. ಧಾರ ವಾಡದ ಉಪಭಾಷೆಯನ್ನಾಡುವ ಹಲವರಿಗೆ ತಮ್ಮ ಭಾಷೆಯಲ್ಲಿ ಮಾತ್ರ ಕನ್ನಡದ ಸತ್ವ ಉಳಿದಿದೆಯೆಂಬ ಭಾವನೆಯಿದೆ. ಇಂತಹ ಸಂಗತಿಗಳಲ್ಲಿ ಭಿನ್ನಾಭಿಪ್ರಾಯಗಳಿರು ವುದು ತೀರ ಸಹಜ.

ದಾವಣಗೆರೆ ಮತ್ತು ಅದರ ಸುತ್ತಮುತ್ತಣ ಪ್ರದೇಶದವರಿಗೆ ಮೈಸೂರಿನ ವಿದ್ಯಾ ವಂತರ ಉಪಭಾಷೆಯು ಪ್ರಮಾಣಭಾಷೆ. ಅಲ್ಲಿನ ವಿದ್ಯಾರ್ಥಿಗಳು ಮೈಸೂರು ಬೆಂಗಳೂರುಗಳಲ್ಲಿ ಅಭ್ಯಾಸಮಾಡಿ ತಮ್ಮ ಊರುಗಳಿಗೆ ಹಿಂದಿರುಗಿದಾಗ ಅವರ ಜೊತೆಯಲ್ಲಿ ಮೈಸೂರಿನ ಅನೇಕ ಪದಗಳೂ ಪ್ರಯಾಣಮಾಡಿರುತ್ತವೆ. 'ಬದನೆ ಕಾಯಿ', 'ಪುರಿ', 'ಬೇಗ ಬೇಗ', 'ತುಂಬ', 'ಕೊಂಚ' ಅಥವಾ 'ಸ್ವಲ್ಪ' ಇತ್ಯಾದಿ ಪದಗಳು. ಇವು 'ಮುಳ್ಗಾಯಿ', 'ಮಂಡಕ್ಕಿ', 'ಗಡಗಡ', 'ಭಾಳ', 'ಒಂದೀಟು' ಇತ್ಯಾದಿ ಪದಗಳಿಗಿಂತ ಶ್ರೇಷ್ಠವೆಂಬ ಭಾವನೆ ಅಲ್ಲಿಯ ಜನರಿಗೆ ಬಂದರೆ ಆಶ್ಚರ್ಯವಿಲ್ಲ. ಅಲ್ಲಿಯ ಜನರಿಗೆ 'ಪುರಿ', 'ಮಂಡಕ್ಕಿ' ಎಂಬ ಎರಡು ಪದಗಳೂ ಗೊತ್ತು. 'ಪುರಿ' ಎಂಬುದು ನಿಧಾನವಾಗಿ ಅಲ್ಲಿ ಹಬ್ಬುತ್ತಿದೆ. ವಿದ್ಯಾರ್ಥಿಗಳು ಮಾತ್ರವೇ ಅಲ್ಲ. ಅಲ್ಲಿಯ ಇತರ ವಿದ್ಯಾವಂತರೂ ಹೊರಗಿನಿಂದ ಬಂದ ಅಧಿಕಾರಿಗಳೂ ಇವರೂ ಮೈಸೂರು-ಬೆಂಗಳೂರು ಕಡೆಯ ಪದಗಳು ಆ ಕಡೆ ಪ್ರಸಾರವಾಗಲು ಕಾರಣಕರ್ತರಾಗಿರುತ್ತಾರೆ. ಮೈಸೂರು ಮಹಾರಾಜರ 'ರಾಜಧಾನಿ', ವಿದ್ಯೆಯ ಕೇಂದ್ರ ಎಂಬ ಭಾವನೆಯೂ ಅಲ್ಲಿಯ ಪದಗಳಿಗೆ ದೊರಕುವ ಪ್ರಾಶಸ್ತ್ಯಕ್ಕೆ ಕಾರಣ. ಹಾಗೆಯೇ ದಾವಣಗೆರೆ ಕಡೆಯ 'ಸೇಂಗ' ಎಂಬ ಪದವು ಮೈಸೂರು ಉಪಭಾಷೆಯಲ್ಲಿ ಕ್ರಮೇಣ ಸ್ಥಾಪಿತವಾಗುತ್ತಿರು ವುದನ್ನು ಗುರುತಿಸಬಹುದು. ವಿದ್ಯಾವಂತರ ಭಾಷೆಯು ಅಷ್ಟೊಂದು ವಿದ್ಯಾವಂತರಲ್ಲ ದವರ ಭಾಷೆಯನ್ನು ಮಾರ್ಪಡಿಸುತ್ತಿರುವುದಕ್ಕೆ ಒಂದು ಸಣ್ಣ ನಿದರ್ಶನವನ್ನು ಕೊಡ ಬಹುದು. ಮೈಸೂರಿನ ಸುತ್ತಮುತ್ತಣ ಹಳ್ಳಿಗಳಲ್ಲಿ 'ಒಸಿ' (=ಸ್ವಲ್ಪ) ಎಂಬ ಪದ ಬಳಕೆಯಲ್ಲಿದೆ. ಆ ಹಳ್ಳಿಗಳಿಂದ ಪಟ್ಟಣಕ್ಕೆ ಬಂದ ವಿದ್ಯಾವಂತರು ಇತರರ ಮುಂದೆ ಆ ಪದವನ್ನು ಬಳಸಲು ಸ್ವಲ್ಪ ಸಂಕೋಚಪಡುತ್ತಾರೆ. ಹಾಗೆಯೇ ಹಳ್ಳಿಯವರು ಪಟ್ಟಣಿ ಗರೊಡನೆ ಮಾತನಾಡುವಾಗ ಎಷ್ಟೋಸಾರಿ ಆ ಪದದ ಬದಲು 'ಸ್ವಲ್ಪ' ಎಂಬ ಪದವನ್ನು ಬಳಸುವುದುಂಟು. ಹೀಗೆ 'ಒಸಿ' ಎಂಬ ಪದದ ಸ್ಥಾನ ಅಭದ್ರವಾಗುತ್ತ ಬಂದು ಕ್ರಮೇಣ ಆ ಪದವು ಲುಪ್ತವಾಗಿ ಹೋಗಬಹುದು. ಮಾತನಾಡುವಾಗ 'ಹೇಳಿ'

ಎಂಬುದನ್ನು ಪದೇಪದೇ ಹೇಳುವ (ಉದಾ : 'ಇಲ್ಲೇಳಿ', 'ಹೌದೇಳಿ', 'ಮಾದೇಳಿ') ಒಂದು ಪರಿಪಾಠಿಯು ವಿದ್ಯಾವಂತರಲ್ಲಿ ಸಂಪೂರ್ಣವಾಗಿ ಮಾಯವಾಗಿದೆ. ಹಳ್ಳಿಗರ ಭಾಷೆಯಲ್ಲೂ ಕ್ರಮೇಣ ಇದು ಮಾಯವಾಗುವ ಸಂಭವ ಹೆಚ್ಚು. ವಿದ್ಯಾವಂತರ ಭಾಷೆಯಿಂದಾಗಿ ಪ್ರಾದೇಶಿಕ ವೈಲಕ್ಷಣ್ಯಗಳು ನಾಶವಾಗಿ ಹೋಗುವ ಇಂತಹ ಉದಾಹರಣೆಗಳನ್ನು ಎಲ್ಲ ಉಪಭಾಷೆಗಳಿಂದಲೂ ಭಾಷೆಗಳಿಂದಲೂ ಕೊಡಬಹುದು.

## ಲಂಬಾಣಿ ಭಾಷೆಯಲ್ಲಿ ಕನ್ನಡ ಸ್ವೀಕರಣಗಳು

ಲಂಬಾಣಿಗಳು ಕನ್ನಡಿಗರ ಮಧ್ಯೆ ಅಲ್ಲಲ್ಲಿ ಗುಂಪುಗುಂಪಾಗಿ ವಾಸಿಸುತ್ತಿರುವ ಜನ. ಮುಸಲ್ಮಾನರು ಉತ್ತರದಿಂದ ದಕ್ಷಿಣಕ್ಕೆ ದಾಳಿಯಿಟ್ಟು ಬಂದಾಗ ಅವರ ಸೇನೆಯ ಜೊತೆಯಲ್ಲಿ ದಕ್ಷಿಣಕ್ಕೆ ಬಂದು ಇಲ್ಲೇ ನೆಲಸಿಬಿಟ್ಟರು. ಇವರ ಮೂಲಸ್ಥಾನ ಬಹುಶಃ ರಾಜಾಸ್ಥಾನ್ ; ಇವರ ಭಾಷೆ ಇಂಡೋ ಆರ್ಯನ್ ವರ್ಗಕ್ಕೆ ಸೇರಿದ ಭಾಷೆ ಎಂಬುದರಲ್ಲಿ ಸಂದೇಹವಿಲ್ಲ. ಇವರದು ಈಗೀಗ ಒಂದೆಡೆ ನೆಲೆನಿಂತ ಜೀವನವಾಗುತ್ತಿದೆ. ಇವರು ಹಿಂದೆ ಬಹು ಸಂಚಾರಪ್ರಿಯರಾಗಿದ್ದರು.

ಲಂಬಾಣಿಗಳು ಸಾಮಾಜಿಕವಾಗಿ ಬಹು ಹಿಂದುಳಿದಿರುವ ಜನ. ಅವರ ಭಾಷೆ ಕನ್ನಡದ ಮಧ್ಯೆ ಭಾಷಾದ್ವೀಪದಂತಿದೆ (Speech Island). ಕನ್ನಡಿಗರು ವಿದ್ಯೆಯಲ್ಲಿ ನಾಗರಿಕತೆಯಲ್ಲಿ ಅವರಿಗಿಂತ ಮುಂದುವರಿದಿದ್ದಾರೆ. ಇದರಿಂದಾಗಿ ಕನ್ನಡವು ಮೇಲು ಭಾಷೆ, ಲಂಬಾಣಿಯು ಕೀಳುಭಾಷೆ. ಲಂಬಾಣಿ ಭಾಷೆಯು ಕನ್ನಡದಿಂದ ನೂರಾರು ಪದಗಳನ್ನು ಸ್ವೀಕರಿಸಿದೆ. ಕನ್ನಡವು ಆ ಭಾಷೆಯಿಂದ ನಮಗೆ ತಿಳಿದಮಟ್ಟಿಗೆ ಏನನ್ನೂ ಸ್ವೀಕರಿಸಿಲ್ಲ. ಆದ್ದರಿಂದ ಇದು ಏಕಪಕ್ಷೀಯಸ್ವೀಕರಣಕ್ಕೆ ಅತ್ಯುತ್ತಮ ಉದಾಹರಣೆ.

ಲಂಬಾಣಿಗಳು ಕರ್ನಾಟಕಕ್ಕೆ ಬಂದಾಗ ಅವರಿಗೆ ವ್ಯವಸಾಯ ಗೊತ್ತಿರಲಿಲ್ಲವೆಂದು ಕಾಣುತ್ತದೆ. ಅವರು ಪಶುಪಾಲನೆಯನ್ನೇ ಮುಖ್ಯವೃತ್ತಿಯುಳ್ಳವರಾಗಿದ್ದ ಅಲೆಮಾರಿ ಜನರೆಂದು ಅವರ ಲಾವಣಿಗಳಿಂದ ಕಥೆಗಳಿಂದ ತಿಳಿದುಬರುತ್ತದೆ. ಕರ್ನಾಟಕದಲ್ಲಿ ಅವರು ನೆಲಸಿನಿಂತಾಗ ಅವರು ಅನಿವಾರ್ಯವಾಗಿ ವ್ಯವಸಾಯವನ್ನು ಕನ್ನಡಿಗರಿಂದ ಕಲಿಯಬೇಕಾಯಿತು. ಅವರು ವ್ಯವಸಾಯಕ್ಕೆ ಸಂಬಂಧಿಸಿದ ಎಲ್ಲ ಪದಗಳನ್ನು ಕನ್ನಡದಿಂದ ತೆಗೆದುಕೊಂಡಿದ್ದಾರೆ—ಬೆವ್ಲೆ, ತರಿ, ಕುಪ್ಪಿ, ಕಟಾವ್, ಪರಗು, ಕುಂಟೆ, ಕೂಳ (=ಕೂಳೆ), ನೊಗ, ಖಳೊ (=ಕಣ), ರೋಣ್‌ಗಲ್ಲು, ಪಲ್ಲೊ (=ಪಲ್ಲ), ಸೇರ್, ಯಕ್ರಿ, ಗುಂಟೆ, ತಾಳು, ಕುಡ ಇತ್ಯಾದಿ ಪದಗಳು ಕನ್ನಡದಿಂದ ಅಲ್ಲಿಗೆ ಹೋಗಿವೆ. ಗಾಡಿಯ ಭಾಗಗಳ ಹೆಸರುಗಳೆಲ್ಲ ಕನ್ನಡದವು—ಕೀಲು, ಗಾಲಿ, ಈಚು, ಮೂಕ್ (=ಮೂಕು), ಗುಮ್ಮ (ಗುಂಬ), ಕೀಲೆಣ್ಣೆ, ಕಮಾನುಗಾಡಿ, ಗೊರ್ಸ್ (=ಎತ್ತಿನ ಗೊರಸು), ಇತ್ಯಾದಿ. ಅವರು ಅನೇಕ ಪದಗಳನ್ನು ತಮ್ಮ ಉಚ್ಚಾರಕ್ಕೆ ಹೊಂದಿಸಿ ಕೊಂಡಿರುವುದೂ ಗಮನಾರ್ಹ. ಖಳೊ (=ಕಣ), ಪಲ್ಲೊ (=ಪಲ್ಲ), ಗುಣಸ್ (ಗುಣಿಸು), ಭಾಗಸ್ (=ಭಾಗಿಸು) ಇತ್ಯಾದಿಗಳನ್ನು ಹೆಸರಿಸಬಹುದು. ಒಡ್ಡರ ಬಂಡಿಯು ಅವರಲ್ಲಿ

'ಒಡ್ಯಾರ್ ಗಾಡಿ'ಯಾಗುತ್ತದೆ; ಒಂಟೆತ್ತಿನ ಗಾಡಿಯು 'ಒಂಟಿ ಬಳ್ದೇರ್ ಗಾಡಿ' (ಬಳದ್=ಎತ್ತು) ಆಗುತ್ತದೆ. ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಪದಗಳೆಲ್ಲವೂ ಕನ್ನಡದವು. ಓದ್ (=ಓದು,) ಕೂಡ್ (=ಕೂಡು), ಕಳೆ, ಭಾಗಸ್ (=ಭಾಗಿಸು), ಗುಣಸ್ (=ಗುಣಿಸು), ಮಗ್ಗೀ ಕ (=ಮಗ್ಗೀ ಹೇಳು), ಒಂದೊಂದ್ಲ ಒಂದು, ಒಂದೆರಡ್ಲ ಎರಡು—ಇತ್ಯಾದಿಗಳನ್ನು ಕನ್ನಡದಿಂದ ಇಡಿಯಾಗಿ ತೆಗೆದುಕೊಂಡಿದ್ದಾರೆ. ಕನ್ನಡವು ಅವರಿಗೆ ಹೊರ ನಾಗರಿಕತೆಗೆ ಹೆಬ್ಬಾಗಿಲು. ಕನ್ನಡವು ಇಂಗ್ಲಿಷಿನಿಂದ ಅಥವಾ ಇತರ ಭಾಷೆಗಳಿಂದ ಏನನ್ನು ಸ್ವೀಕರಿಸುತ್ತದೆಯೋ ಅದು ಲಂಬಾಣಿ ಭಾಷೆಯ ಆಸ್ತಿಯಾಗಿ ಪರಿಣಮಿಸುತ್ತದೆ. ಕಾಲೇಜು, ಮೋಟಾರ್, ಸೆಕಂಡ್, ಇಂಗ್ಲೀಷು, ಗುಂಡ್ಬಿನ್ನು, ಹೋಟ್ಲು, ಕೋರ್ಟು, ಕೋಟು, ಬೈಸಿಕಲ್, ಆಸ್ಪತ್ರೆ ಇತ್ಯಾದಿಗಳನ್ನು ಲಂಬಾಣಿಯು ಕನ್ನಡದಿಂದ ಸ್ವೀಕರಿಸಿದೆ. (ಕನ್ನಡವು ಇಂಗ್ಲಿಷಿನಿಂದ ಇವುಗಳನ್ನು ಸ್ವೀಕರಿಸಿದೆ).

ಲಂಬಾಣಿ ಜನರ ಆಚಾರ ವ್ಯವಹಾರಗಳು ವೇಷಭೂಷಣಗಳು ಕನ್ನಡಿಗರ ಪ್ರಭಾವ ದಿಂದಾಗಿ ಬಹುವಾಗಿ ಮಾರ್ಪಾಟುಗೊಳ್ಳುತ್ತಿವೆ. ತಮ್ಮದು ಅನಾಗರಿಕ ಪದ್ಧತಿಯ ಜೀವನವೆಂದು ಅವರಿಗೆ ಭಾವನೆ ಇದೆ. ಹಾಗೆಯೇ ತಮ್ಮ ಭಾಷೆಯ ವಿಷಯದಲ್ಲೂ ಅಂತಹ ಅಭಿಮಾನವಿಲ್ಲ. ತಮ್ಮದಕ್ಕಿಂತ ಕನ್ನಡವೇ ಶ್ರೇಷ್ಠ ಎಂಬ ಭಾವನೆ ಅವರಿಗಿದೆ. ಹೀಗಿರುವುದರಿಂದ ಕನ್ನಡದಿಂದ ಪದಗಳು ನೂರಾರು ಸಂಖ್ಯೆಯಲ್ಲಿ ಹರಿದುಬಂದು ಆ ಭಾಷೆಯನ್ನು ತುಂಬುತ್ತಿವೆ. (ಈ ನೂರಾರು ವರ್ಷ ಅವರು ಕನ್ನಡಿಗರ ಮಧ್ಯೆ ಇದ್ದರೂ ಕನ್ನಡವು ಆ ಭಾಷೆಯಿಂದ ಏನನ್ನೂ ಸ್ವೀಕರಿಸಿಲ್ಲ.) ಆದರೂ ಆ ಭಾಷೆಯ ವ್ಯಾಕರಣದ ಮೇಲೆ ಕನ್ನಡದ ಪ್ರಭಾವ ಅಷ್ಟಾಗಿ ಆದಂತೆ ಕಂಡುಬರುವುದಿಲ್ಲ. ವ್ಯಂಜನಾಂತ ಪದಗಳು ಆ ಭಾಷೆಯಲ್ಲಿ ಸಾಮಾನ್ಯ. ಅನುನಾಸಿಕಕ್ಕೆ ಪ್ರತ್ಯೇಕ ಧ್ವನಿಮಾಮೌಲ್ಯ ವಿದೆ. (nasalisation is phonemic). "ವೂ" ಎಂದರೆ ಅವನು, ಅವಳು, ಅದು ಎಂದೂ "ಯೀ" ಎಂದರೆ ಇವನು, ಇವಳು, ಇದು ಎಂದೂ ಅರ್ಥವಾಗುತ್ತದೆ. ಆದರದೇ ವಾಕ್ಯರಚನೆ ಉಂಟು. ಆ ಭಾಷೆಯನ್ನಾಡುವವರು ವಿದ್ಯಾವಂತರಾಗಿ ಆ ಭಾಷೆಯನ್ನು ಮುಂದೆ ತರುವ ಸೂಚನೆಗಳೇನೂ ಸದ್ಯದಲ್ಲಿ ಕಂಡುಬರುತ್ತಿಲ್ಲವಾದ್ದರಿಂದ ಭಾಷಾ ಸ್ವೀಕರಣಗಳು ನಿರಂತರವಾಗಿ ನಡೆಯುತ್ತಿರುತ್ತವೆಯೆಂದೂ, ಕಾಲಕ್ರಮೇಣ ಆ ಭಾಷೆಯ ವ್ಯಾಕರಣವೂ ಸ್ವಲ್ಪ ವ್ಯತ್ಯಾಸಗೊಳ್ಳಬಹುದೆಂದೂ ಊಹಿಸಬಹುದು.

# 8 ಸಾಮ್ಯಮೂಲವ್ಯತ್ಯಾಸ

ಒಂದು ಭಾಷೆಯಲ್ಲಿ ಹೊಸ ರೂಪಗಳು ಕಾಣಿಸಿಕೊಳ್ಳುವುದು ಆ ಭಾಷೆಯಲ್ಲಿ ನಿರಂತರವಾಗಿ ನಡೆಯುವ ಸ್ವೀಕರಣಗಳಿಂದ (Borrowings). ಒಂದು ಭಾಷೆ ಇತರ ಭಾಷೆಗಳಿಂದ ಪದ ಎಷ್ಟು ವಿಧವಾಗಿ ಸ್ವೀಕರಿಸುತ್ತದೆ ಎಂಬುದರ ವಿವರಗಳು ಬೇರೆ ಅಧ್ಯಾಯದಲ್ಲಿ ಬಂದಿವೆ. 'ಆಸ್ಪತ್ರೆ' ಎಂಬ ಪದ ಹೊಸಗನ್ನಡದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಇದು ಇಂಗ್ಲಿಷಿನಿಂದ (< Hospital) ಸ್ವೀಕರಿಸಿದ ಪದವೆಂದು ಹೇಳಿಬಿಡುತ್ತೇವೆ. ಆದರೆ ಭಾಷೆಯಲ್ಲಿ ಕಾಣಿಸಿಕೊಳ್ಳುವ ಎಷ್ಟೋ ಹೊಸ ಪದಗಳು ಸ್ವೀಕರಣಗಳೂ ಆಗಿರುವುದಿಲ್ಲ, ಹಳೆಯ ರೂಪಗಳ ಮುಂದುವರಿಕೆಗಳೂ ಆಗಿರುವುದಿಲ್ಲ. ಆ ಪದಗಳು ಸಾಮ್ಯಮೂಲ ವ್ಯತ್ಯಾಸದಿಂದ ಹುಟ್ಟಿದ ಪದಗಳಾಗಿರುತ್ತವೆ. ಇದಕ್ಕೆ ಒಂದು ನಿದರ್ಶನವನ್ನು ಕೊಡಬಹುದು. *Cows* ಎಂಬ ರೂಪವು ಹಳೆಯ ಇಂಗ್ಲಿಷಿನಲ್ಲಾಗಲಿ ಮಧ್ಯ ಇಂಗ್ಲಿಷಿನಲ್ಲಾಗಲಿ ಕಾಣಿಸಿಕೊಳ್ಳುವುದಿಲ್ಲ. ಕ್ರಿ.ಶ. 1300ರಲ್ಲಿ *Kyn* ಎಂಬ ರೂಪವು ಇಂಗ್ಲಿಷ್ ಬರಹಗಳಲ್ಲಿ ಕಾಣಿಸಿಕೊಳ್ಳುತ್ತದೆ. ಸು. 1607ರ ಸರಿ ಸುಮಾರಿನಲ್ಲಿ— ಎಂದರೆ ಮೂರು ಶತಮಾನಗಳ ನಂತರವೇ *Cows* ಎಂಬ ರೂಪವು ಕಾಣಿಸಿಕೊಳ್ಳುವುದು. ಆಗಿನ ಒಂದು ಅರ್ಥಕೋಶದಲ್ಲಿ *Kine* ಅಥವಾ *Cows* ಎಂದು ಎರಡು ರೂಪಗಳನ್ನೂ ಕೊಡಲಾಗಿದೆ. *Cows* ಎಂಬುದು *Kine* ಎಂಬ ರೂಪದ ಮುಂದುವರಿಕೆ ಅಲ್ಲ ಎಂಬುದು ಸ್ಪಷ್ಟವಾಗಿದೆ. ಎಂದರೆ *Cows* ಎಂಬ ಹೊಸ ರೂಪ ಬಳಕೆಗೆ ಬಂದಿದೆ. ಇದು ಬಂದದ್ದು ಹೀಗೆಂದು ಕಾಣುತ್ತದೆ. *Cow* ಪದದ ಬಹುವಚನದ ರೂಪವು ಕ್ರಮಬದ್ಧವಲ್ಲದ (irregular) *Kine* ಆಗಿತ್ತು. ಇಂಗ್ಲಿಷಿನಲ್ಲಿ—S ಎಂಬುದು ಬಹುವಚನ ಪ್ರತ್ಯಯ. ಇದೇ ಬಹುವಾಗಿ ಬಳಕೆಯಲ್ಲಿರುವುದು.

Sow (ನಾಮಪದ, ಏಕವಚನ) : Sows (ನಾಮಪದ, ಬಹುವಚನ) ('Sow' ಎಂದರೆ ಹೆಣ್ಣು ಹಂದಿಯೆಂದರ್ಥ). Sows ಎಂಬುದು ಕ್ರಮಬದ್ಧವಾದ ಬಹುವಚನ ರೂಪ (Regular Plural). *Sow* ಎಂಬುದು *Sows* ಆದರೆ *Cow* ಎಂಬುದು *Cows* ಆಗಬೇಕು. ಹೀಗೆ Sow: Sows ಈ ಸಾಮ್ಯದ ಮೇಲೆ Cows ಎಂಬ ಹೊಸರೂಪವು ಹುಟ್ಟಿಕೊಂಡಿತು. ಹಳೆಯರೂಪ *Kine* ಎಂಬುದಕ್ಕೂ ಹೊಸರೂಪ Cows ಎಂಬು

ದಕ್ಕೂ ಕೆಲವು ಕಾಲ ಸ್ಪರ್ಧೆಯಿದ್ದಿರಬೇಕು. ಕ್ರಮೇಣ ಹೊಸ ರೂಪವೇ ಹೆಚ್ಚು ಹೆಚ್ಚಾಗಿ ಬಳಕೆಗೆ ಬಂದು ಹಳೆಯ ರೂಪವನ್ನು ಓಡಿಸಿತು. [*Kine* ಎಂಬುದು ಈಗ ಕಾವ್ಯಗಳಲ್ಲಿ ಮಾತ್ರ ಬಳಕೆಯಾಗುವ ಪ್ರಾಕ್ತನರೂಪ(Archaic poetic form)]. ಹೀಗೆ ಇತರ ರೂಪಗಳ ಸಾಮ್ಯದ (Analogy) ಆಧಾರದ ಮೇಲೆ ಹೊಸ ಪದಗಳು ನಿರ್ಮಾಣಗೊಂಡರೆ ಅದನ್ನು ನಾವು ಸಾಮ್ಯಮೂಲವ್ಯತ್ಯಾಸವೆಂದು ಕರೆಯುತ್ತೇವೆ.

ಈ ಪ್ರವೃತ್ತಿ ಮಾನವಸಹಜವಾದುದು. ನಾವೆಲ್ಲರೂ ಅರಿತೋ ಅರಿಯದೆಯೋ, ಬಹುಮಟ್ಟಿಗೆ ಅರಿವಿಲ್ಲದೆಯೇ, ಸಾಮ್ಯಮೂಲ ಪದಗಳನ್ನು (Analogic forms) ಬಳಸುತ್ತಿರುತ್ತೇವೆ. ಒಬ್ಬ ಭಾಷಾವಿಜ್ಞಾನಿ ಇಬ್ಬರು ಹುಡುಗರು ಜಗಳವಾಡುತ್ತಿದ್ದಾಗ ಬಳಕೆಯಾದ Sot ಎಂಬ ಹೊಸಪದವು ಹೇಗೆ ಸೃಷ್ಟಿಗೊಂಡಿತೆಂಬುದನ್ನು ವಿವರಿಸಿದ್ದಾರೆ. ಒಬ್ಬ ಹುಡುಗ ಹೇಳುತ್ತಾನೆ—"No, it is not": ನಾನು ಹೇಳುವುದು ಸರಿ ಎಂದು ಅಷ್ಟೇ ಒತ್ತಿ ಹೇಳಬೇಕಾಗಿ ಬಂದಾಗ ಇನ್ನೊಬ್ಬ ಹುಡುಗ "So, it is sot" ಎಂದನಂತೆ.

No : not : : So : sot

"ರಾಮ ರಾವಣನನ್ನು ಕೊಂದರೆ ಭೀಮ ..?" ಎಂಬ ಪ್ರಶ್ನೆಯನ್ನು ಕೇಳಿದರೆ "ಭೀಮಣನನ್ನು" ಎಂಬ ಉತ್ತರ ಬರಬಹುದು. (ನಾನು ವಾಸ್ತವವಾಗಿ ಕೇಳಿದ್ದು). ನಮಗೆ *mouse* ಎಂಬ ಪದದ ಬಹುವಚನರೂಪ *mice* ಎಂಬುದು ಜ್ಞಾಪಕಕ್ಕೆ ಬರದಿದ್ದರೆ ತಕ್ಷಣವೇ *mouses* ಎಂಬ ಪದವನ್ನು ಬಳಸಿಬಿಡುತ್ತೇವೆ. mice ಎಂಬುದು ಕ್ರಮಬದ್ಧವಲ್ಲದ ವಿರಳರೂಪ. ಅದನ್ನು ನೆನಪಿಡಬೇಕಾದರೆ ಪ್ರಯತ್ನವು ಬೇಕಾಗುತ್ತದೆ. ಆದರೆ mouses ಎಂಬ ರೂಪವನ್ನು ನೆನಪಿಡಲು ಪ್ರಯತ್ನವೇ ಬೇಕಿಲ್ಲ. *mouses* ಎಂಬ ರೂಪವನ್ನೇ ಹೆಚ್ಚು ಜನ ಬಳಸಲಾರಂಭಿಸಿದರೆ ಅದೇ ಭಾಷೆಯಲ್ಲಿ ಉಳಿದು ಬಿಡುವ ಸಂಭವವಿರುತ್ತದೆ. ಹೀಗೆ ಸಾಮ್ಯಮೂಲ ವ್ಯತ್ಯಾಸವು ಭಾಷೆಯಲ್ಲಿರುವ ಅನೇಕ ಅಕ್ರಮಗಳನ್ನು ಕ್ರಮಬದ್ಧಗೊಳಿಸುತ್ತದೆ.

ನಾವೆಲ್ಲರೂ ಬಾಲ್ಯದಲ್ಲಿ ಭಾಷೆಯನ್ನು ಕಲಿಯುವಾಗ ಈ ಸಾಮ್ಯಮೂಲ ಪ್ರವೃತ್ತಿಯು ಬಹುವಾದ ಸಹಾಯವನ್ನು ಮಾಡುತ್ತದೆ. ನಾವು ಈಗ ಬಳಸುತ್ತಿರುವ ಎಲ್ಲ ರೂಪಗಳನ್ನೂ ಎಲ್ಲ ವಾಕ್ಯಗಳನ್ನೂ ಇತರರಿಂದ ಕೇಳಿಯೇ ಕಲಿಯಬೇಕಿಲ್ಲ. ಅಂತಹ ಪರಿಸ್ಥಿತಿ ಇದ್ದಿದ್ದರೆ ಭಾಷೆಯನ್ನು ಕಲಿಯಲು ಹೆಚ್ಚು ಕಾಲವೂ ಬೇಕಾಗುತ್ತಿತ್ತು, ಹೆಚ್ಚು ಶ್ರಮವೂ ಆಗುತ್ತಿತ್ತು. ಮಗುವು ಕಾಗೆ > ಕಾಗೆಗೆ, ಬೊಂಬೆ > ಬೊಂಬೆಗೆ, ಮನೆ > ಮನೆಗೆ ಮುಂತಾದ ರೂಪಗಳನ್ನು ಕೇಳಿ ಎಮ್ಮೆಗೆ, ಕೆರೆಗೆ, ಶಾಲೆಗೆ ಇತ್ಯಾದಿ ರೂಪಗಳನ್ನು ತಾನೇ ಕಲ್ಪಿಸಿ ಬಳಸಬಹುದು. ಹಸು ಹೋಗುತ್ತದೆ, ಮಗು ಹೋಗುತ್ತದೆ ಇತ್ಯಾದಿ ವಾಕ್ಯಗಳನ್ನು ಕೇಳಿ ಎಮ್ಮೆ ಹೋಗುತ್ತದೆ, ರೈಲು ಹೋಗುತ್ತದೆ ಇತ್ಯಾದಿ ವಾಕ್ಯಗಳನ್ನು ತಾನೇ ಸ್ವತಂತ್ರವಾಗಿ ಕಟ್ಟಿ ಬಳಸಬಹುದು. ಇವು ಬಹುಪಾಲು

ಸರಿಯಾದ, ಎಲ್ಲರಿಗೂ ಒಪ್ಪಿಗೆಯಾಗುವ ರೀತಿಯಲ್ಲಿ ಇರಬಹುದು. ಕೆಲವೊಮ್ಮೆ ಮಗುವು ಇತರ ರೂಪಗಳ ರಚನೆಗಳ ಸಾಮ್ಯದ ಮೇಲೆ Goed, Foots, Mans ಮುಂತಾದ ರೂಪಗಳನ್ನು ಬಳಸಬಹುದು, ಬಳಸುತ್ತದೆ. ಅಂತಹ ಸಮಯದಲ್ಲಿ ಉಳಿದವರು Went, Feet, Men ಎಂಬ ರೂಪಗಳು ಸರಿ, ಅವುಗಳನ್ನು ಬಳಸು ಎಂದು ತಿದ್ದಬೇಕಾಗುತ್ತದೆ. ಎಷ್ಟೋ ಮಕ್ಕಳು 'ಅಮ್ಮ ಬಂತು', 'ಅಪ್ಪ ಬಂತು' ಎಂದು ಹೇಳಿದಾಗ ಅವುಗಳನ್ನು ಅಮ್ಮ ಬಂದಳು, ಅಪ್ಪ ಬಂದರು-ಎಂದು ತಿದ್ದುವ ಪ್ರಸಂಗವು ಇರುತ್ತದೆ. ಹೀಗೆ ಎಲ್ಲ ಮಕ್ಕಳೂ ಭಾಷೆಯನ್ನು ಕಲಿಯುವಾಗ ಸಾಮ್ಯವನ್ನು ಬಹುವಾಗಿ ಅವಲಂಬಿಸುತ್ತಾರೆ.

ಹೊಸದೊಂದು ಪದವು ಭಾಷೆಯಲ್ಲಿ ಕಾಣಿಸಿಕೊಂಡಾಗ ಅದು ಇತರ ಪದಗಳಂತೆಯೇ ಬೇರೆ ಬೇರೆ ರೂಪಗಳನ್ನು ಧಾರಣೆ ಮಾಡುತ್ತದೆ. 'ರೈಲು' ಎಂಬ ಪದವು ಹೊರಗಿನಿಂದ ಬಂದದ್ದು. ಅದು ಕನ್ನಡವನ್ನು ಪ್ರವೇಶಿಸಿದ ಮೇಲೆ ರೈಲುಗಳು, ರೈಲನ್ನು, ರೈಲಿಗೆ, ರೈಲಲ್ಲಿ ಇತ್ಯಾದಿ ರೂಪಗಳನ್ನು ಪಡೆಯಬೇಕಾಗುತ್ತದೆ. ಇದು ಸಾಧ್ಯವಾಗುವುದು ಸಾಮ್ಯದಿಂದಲೇ.

ಹೀಗೆ ಭಾಷೆಗೆ ಅನೇಕ ಹೊಸ ಪದಗಳನ್ನು ಹೊಸ ರೂಪಗಳನ್ನು ತಂದುಕೊಡುತ್ತದೆ ಸಾಮ್ಯಮೂಲವ್ಯತ್ಯಾಸ. Poetess, Sculptress ಮುಂತಾದ ಪದಗಳ ಸಾಮ್ಯದ ಮೇಲೆ Profiteeress, Swindleress ಮುಂತಾದ ರೂಪಗಳನ್ನು ಸೃಷ್ಟಿಸಬಹುದು. ಕನ್ನಡ ಕೋಶಕ್ಕೆ ಅನೇಕ ಪದಗಳು ಸೇರಿರುವುದು ಸಾಮ್ಯಮೂಲ ವ್ಯತ್ಯಾಸದಿಂದಲೇ. 'ಸುಪ್ರಸಿದ್ಧ'ದ ಸಾಮ್ಯದ ಮೇಲೆ 'ಕುಪ್ರಸಿದ್ಧ'; 'ಸದೃಶ'ದಂತೆ 'ವಿದೃಶ' (=dissimilar), ಹಾಗೆಯೇ 'ಸಾದೃಶ್ಯ'ದ ಸಾಮ್ಯದ ಮೇಲೆ 'ವೈದೃಶ್ಯ'ಗಳು ಹುಟ್ಟಿಕೊಂಡಿವೆ. 'ಅಲರಿಚ'ದ (=ಹೂವಿನಲ್ಲಿ ಹುಟ್ಟಿದವನು, ಬ್ರಹ್ಮ) ಸಾಮ್ಯದ ಮೇಲೆ 'ಬೆರಲಿಚ' (=ಬೆರಳಿನಲ್ಲಿ ಹುಟ್ಟಿದ್ದು, ಉಗುರು)ವನ್ನು ಕಟ್ಟಿ ಒಬ್ಬ ಕವಿಗಳು ಪ್ರಯೋಗಿಸಿದ್ದಾರೆ. 'ಹನುಮಿಸು' (=ನೆಗೆ, ಹಾರು) ಎಂಬ ಪದವನ್ನು ಹಿಂದಿನ ಕವಿಗಳು ಬಳಸಿದ್ದಾರೆ ಇಸ್ತ್ರಿಸು, ಕಪ್ಪಿಸು (= ಕಪ್ಪಗೆ ಮಾಡು), ಪಾಸಿಸು, ಫೇಲಿಸು ಇಂತಹ ನೂತನ ಪ್ರಯೋಗಗಳು ಅಲ್ಲಲ್ಲಿ ಕಂಡುಬರುತ್ತವೆ. ಹಳೆಯ ಇಂಗ್ಲಿಷಿನಲ್ಲಿ Mighty, Misty, Moody ಮುಂತಾದ ಪದಗಳಿವೆ. ಈಗ ಹೊರಗಿನಿಂದ ತೆಗೆದುಕೊಂಡ ಪದಗಳಿಗೂ -Y ಪ್ರತ್ಯಯವನ್ನು ಹಚ್ಚುತ್ತಾರೆ. ಉದಾ : Sugary, Flowery. ಹೀಗೆ ಒಂದು ಭಾಷೆಯು ಬೆಳೆಯಲು ಸಾಮ್ಯವು ಬಹುವಾಗಿ ಸಹಾಯವನ್ನು ಮಾಡುತ್ತದೆ. ಮೈಸೂರು ನಗರದ ಅಗಸರು Bleaching-powder ಎಂಬುದನ್ನು ಬಿಳಿಚಿಂಗ್-ಪವ್ಡರ್ (=ಬಿಳಿಚುವ, ಬೆಳ್ಳಗೆ ಮಾಡುವ ಪುಡಿ) ಎಂದು ಹೇಳಲು ಸಾಮ್ಯವೂ ಕಾರಣ.

ಮಧ್ಯ ಇಂಗ್ಲಿಷಿನಲ್ಲಿ 'Redels' (=ಒಗಟು) ಎಂಬ ರೂಪವಿತ್ತು. ಅದೇ ಏಕ ವಚನವೂ ಬಹುವಚನವೂ ಆಗಿತ್ತು. ಆ ಪದದ ಕೊನೆಯಲ್ಲಿರುವ -s ಎಂಬುದು ಬಹು ವಚನ ಪ್ರತ್ಯಯವೆಂದು ಭ್ರಮಿಸಿ 'Riddle' ಎಂಬ ಏಕವಚನವನ್ನು ಕಲ್ಪಿಸಿಕೊಂಡರು.

Stones < Stone
Redels < ? (=Riddle)

ಹಾಗೆಯೇ 'Pise' (= ಬಟಾಣಿಕಾಳು) ಎಂಬ ಪದವು ಬಹುವಚನವನ್ನು ಸೂಚಿಸುತ್ತದೆಂದು 'Pea' ಎಂಬ ಹೊಸ ಪದವನ್ನು ಸೃಷ್ಟಿಸಿಕೊಂಡರು. ಇವುಗಳನ್ನು Back-formations ಎಂದು ಕರೆಯುತ್ತಾರೆ. ಇಲ್ಲೆಲ್ಲಾ ಸಾಮ್ಯಮೂಲ ವಿಧಿಯು ಕೆಲಸಮಾಡಿರುವುದನ್ನು ಗುರುತಿಸಬಹುದು. ಹಳಗನ್ನಡ ಶಾಸನಗಳಲ್ಲಿ ಕಂಡುಬರುವ ಎಟ್ಟಿ, ಇಟ್ಟು ಮುಂತಾದ ರೂಪಗಳು *'Back-formation'* ಫಲವಾಗಿ ಹುಟ್ಟಿಕೊಂಡಿವೆ.

ಗರ್ದೆ < ಗಟ್ಟಿ

ಇದು ಸರಿ. ಅದರ ಅಥವಾ ಅಂತಹ ರೂಪಗಳ ಸಾಮ್ಯದ ಮೇಲೆ ಎಟ್ಟಿ, ಇಟ್ಟು ಹುಟ್ಟಿಕೊಂಡುವು.

ಗರ್ದೆ < ಗಟ್ಟಿ
ಎರ್ದೆ < ? = ಎಟ್ಟಿ
ಬಿರ್ದು < ಬಿಟ್ಟು
ಇರ್ದು > ? = ಇಟ್ಟು

ಆದರೆ ಎಟ್ಟಿ, ಇಟ್ಟು ಮುಂತಾದುವು ಪ್ರಚಾರಕ್ಕೆ ಬರಲಿಲ್ಲ. 'ಎರ್ದೆ' ಎಂಬುದು ಬಹುಶಃ ಸಂಸ್ಕೃತದ 'ಹೃದಯ'ದ ತದ್ಭವ. 'ಇರ್ದು' ಎಂಬುದು 'ಇರ್' ಧಾತುವಿನಿಂದ ಬಂದಿದೆ. ಹಾಗೆಯೇ ಕನ್ನಡದಲ್ಲಿ ಕದಿ, ನುಸಿ ಎಂಬ ಹೊಸ ಧಾತುಗಳು ಸೃಷ್ಟಿಯಾಗಲು Back-formation ಕಾರಣ. 'ಕಳ್' ಧಾತುವಿನಿಂದ ಕಳ್ದನ್, ಕದ್ದನ್, ಕದ್ದನು ಎಂದಾಗಿದೆ.

ಹೊದ್ದನ್ < ಹೊದಿ
ಕದ್ದನ್ < ? = ಕದಿ

ಈಗ ಕದಿಯುತ್ತಾನೆ, ಕದಿಯುವಿಕೆ, ಕದಿಯುಹೋಗು ಇತ್ಯಾದಿ ಕಡೆಗಳಲ್ಲಿ ಈ ಹೊಸ ಧಾತು ಕಾಣಿಸುತ್ತದೆ. 'ನುಸುಳ್' ಎಂಬ ಧಾತುವಿನಿಂದ ನುಸುಳ್ದು, ನುಸುದು, ನುಸಿದು ಎಂಬುವು ಬಂದಿವೆ.

ಕುಸಿದು < ಕುಸಿ
ನುಸಿದು < ? = ನುಸಿ

ಈ ಹೊಸ 'ನುಸಿ' ಧಾತುವಿನಿಂದ ನುಸಿದನು, ನುಸಿಯುವಿಕೆ ಇತ್ಯಾದಿ ರೂಪಗಳು ಸಿದ್ಧಿಸುತ್ತವೆ. ಹೀಗೆ ಕಳ್, ನುಸುಳ್ ಎಂಬ ಧಾತುಗಳ ಸ್ಥಾನದಲ್ಲಿ ಕದಿ, ನುಸಿ ಎಂಬ ಧಾತುಗಳು ಬರಲು ಸಾಮ್ಯಮೂಲ ಪ್ರವೃತ್ತಿ ಮತ್ತು ಅದರ ಒಂದು ಪ್ರಭೇದವಾದ Back-formation ಕಾರಣ.

ನಾವು ಉದ್ದಕ್ಕೂ ಗಮನಿಸಿರುವಂತೆ, ಸಾಮ್ಯಮೂಲವ್ಯತ್ಯಾಸದ ಫಲ ಭಾಷೆಯಲ್ಲಿನ ಅಕ್ರಮ ರೂಪಗಳನ್ನು ಕ್ರಮಬದ್ಧಗೊಳಿಸುವುದು. "ಸಾಮ್ಯಮೂಲವ್ಯತ್ಯಾಸಗಳು ಅಕ್ರಮಗಳನ್ನು ಹೋಗಲಾಡಿಸಿದರೂ ಕ್ರಮಬದ್ಧವಾಗಿ ನಡೆಯುವುದಿಲ್ಲ; ಧ್ವನಿ ವ್ಯತ್ಯಾಸಗಳು ಕ್ರಮಬದ್ಧವಾಗಿ ನಡೆದರೂ ಅಕ್ರಮಗಳನ್ನು ಉಳಿಸುತ್ತವೆ" ಎಂಬರ್ಥ ಬರುವ ಒಂದು ಹೇಳಿಕೆ ಇದೆ. ಸಾಮ್ಯಮೂಲವ್ಯತ್ಯಾಸಗಳಿಂದ ಕ್ರಮಬದ್ಧವಲ್ಲದ ರೂಪಗಳು ಕ್ರಮಬದ್ಧವಾಗುತ್ತವೆ ಎಂಬುದನ್ನು ಹಿಂದೆ ನೋಡಿದೆವು. ಆದರೂ ಎಲ್ಲಾ ಕಡೆಯೂ ಸಾಮ್ಯಮೂಲವ್ಯತ್ಯಾಸವು ಕೆಲಸಮಾಡಿರುವುದಿಲ್ಲ. ಉದಾಹರಣೆಗೆ sad-sadder-saddest ಎಂಬುದರ ಮೇಲೆ bad-badder-baddest ಎಂದು ಏಕೆ ಆಗಲಿಲ್ಲ ? Feet, Went ಮುಂತಾದ ರೂಪಗಳೂ ಇನ್ನೂ ಇವೆಯಲ್ಲವೇ ? foots, goed ಎಂಬ ರೂಪಗಳು ಬಳಕೆಗೆ ಬಂದಿಲ್ಲ. ಕನ್ನಡದಲ್ಲಿ ಆಡು>ಆಟ, ನೋಡು> ನೋಟ, ತೀಡು>ತೀಟ ಇವುಗಳ ಸಾಮ್ಯದ ಮೇಲೆ ಹಾಡು>ಹಾಟ ಎಂದು ಏಕೆ ಆಗಲಿಲ್ಲ ? ಆದ್ದರಿಂದ ಸಾಮ್ಯಮೂಲವ್ಯತ್ಯಾಸಗಳು ಕ್ರಮಬದ್ಧವಲ್ಲದ ರೂಪಗಳನ್ನು ಕ್ರಮಬದ್ಧಗೊಳಿಸಿದರೂ ಅವು ಎಲ್ಲ ಕಡೆಗಳಲ್ಲೂ ನಿಯತವಾಗಿ ಪ್ರವರ್ತಿಸುವುದಿಲ್ಲ. ಧ್ವನಿವ್ಯತ್ಯಾಸಗಳು ಒಂದು ಕ್ರಮವನ್ನನುಸರಿಸಿ, ಒಂದು ನಿಯಮವನ್ನನುಸರಿಸಿ ನಡೆಯುತ್ತವೆ ಎಂಬದನ್ನು ಹಿಂದೆ ನೋಡಿದ್ದೇವೆ. ಆದರೂ ಭಾಷೆಯಲ್ಲಿ ಆ ನಿಯಮಕ್ಕೆ ಅಪವಾದಗಳಂತಿರುವ ಹಲವು ಉದಾಹರಣೆಗಳು ಉಳಿದಿರುತ್ತವೆ. ಪ್>ಹ್ ಈ ಧ್ವನಿವ್ಯತ್ಯಾಸವು ಕನ್ನಡದಲ್ಲಿ ನಡೆದು ಬಹುಮಟ್ಟಿಗೆ ಎಲ್ಲ ಕಡೆಗಳಲ್ಲೂ ಈ ಧ್ವನಿ ವ್ಯತ್ಯಾಸವು ಕೆಲಸಮಾಡಿದ್ದರೂ 'ಪಿಳ್ಳೆ' ಮುಂತಾದ ಅಕ್ರಮ ರೂಪಗಳು ಉಳಿದು ಕೊಂಡುಬಿಟ್ಟಿವೆ. ಅದಕ್ಕೆ ಕಾರಣಗಳೇನೋ ಇರಬೇಕು ಎಂದು ಮಾತ್ರ ನಾವು ಹೇಳಬಹುದು.

ಒಟ್ಟಿನಲ್ಲಿ ಸಾಮ್ಯ ಎಂಬುದು ಮಾನವಸಹಜವಾದ ಪ್ರವೃತ್ತಿ ಎಂದೂ, ಅವನು ಬಾಲಕನಾಗಿದ್ದಾಗ ಭಾಷೆಯನ್ನು ಕಲಿಯುವ ಸಮಯದಲ್ಲಿಯೂ ಮುಂದೆ ಪ್ರೌಢನಾದ ಮೇಲೂ ಅವನ ಜೀವನದುದ್ದಕ್ಕೂ ಕೆಲಸ ಮಾಡುತ್ತದೆ ಎಂದೂ ತಿಳಿದರೆ ಸಾಕು. ಭಾಷೆಯ ಕೋಶವನ್ನು ವೃದ್ಧಿಪಡಿಸಲು, ಹೊಸ ಪದಗಳನ್ನು ಸೃಷ್ಟಿಸಲು ಸಾಮ್ಯವು ಸಹಾಯ ಮಾಡುತ್ತದೆ. ಇದಕ್ಕೆ ಪ್ರಸಿದ್ಧವಾದ ಉದಾಹರಣೆಯೆಂದರೆ 'ಧ್ವನಿಮಾ' ಎಂಬುದೇ ಆಗಿದೆ. 'Phone' ಎಂಬುದಕ್ಕೆ 'ಧ್ವನಿ' ಎಂಬುದು ಸಮಾನವಾದರೆ 'Phoneme' ಎಂಬುದಕ್ಕೆ 'ಧ್ವನಿಮಾ' ಏಕೆ ಸಮಾನವಾಗಬಾರದು ? ಧ್ವನಿಮಾ ಎಂಬ ಪದವು ಈಗಾಗಲೇ ಸಾಕಷ್ಟು ಬಳಕೆಯಲ್ಲಿದೆ. Morph-ಆಕೃತಿ, Morpheme-ಆಕೃತಿಮಾ. ಆಕೃತಿಮಾ ಎಂಬ ರೂಪವೂ ಬಳಕೆಗೆ ಬರುತ್ತಿದೆ.

# 9 ವ್ಯಕ್ತಿಭಾಷೆ, ಉಪಭಾಷೆ ಮತ್ತು ಉಪಭಾಷಾಪರಿವೀಕ್ಷಣೆ*

ಇದಮಂಧಂ ತಮಃ ಕೃತ್ಸ್ನಂ ಜಾಯೇತ ಭುವನತ್ರಯಂ ।
ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಾನ್ನ ದೀಪ್ಯತೇ ॥

—(ದಂಡಿ)

ಮಾತೆಂಬ ಜ್ಯೋತಿ ಸಂಸಾರದ ಉದ್ದಕ್ಕೂ ಬೆಳಗದೆ ಇದ್ದರೆ ಅಶೇಷ ಭುವನ ತ್ರಯವೂ ಕಗ್ಗತ್ತಲಾಗಿಬಿಟ್ಟೀತು—ದಂಡಿಯ ಈ ಉಕ್ತಿ ಒಂದು ವಿಷಯವನ್ನು ಕಾವ್ಯಮಯವಾಗಿ ಸ್ಪಷ್ಟಪಡಿಸುತ್ತದೆ: ಮನುಷ್ಯ ಮನುಷ್ಯನಾಗಿರುವುದು ಅವನಿಗೇ ವಿಶಿಷ್ಟವಾಗಿರುವ ಒಂದು ಆಸ್ತಿಯಿಂದ; ಆ ಆಸ್ತಿಯೇ ಭಾಷೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಭಾಷೆಯ ಸಹಾಯವಿಲ್ಲದೆ ಇದ್ದಿದ್ದರೆ ಮನುಷ್ಯ ಹೇಗೆ ಪ್ರಗತಿಯನ್ನು ಸಾಧಿಸುತ್ತಿದ್ದನೆಂಬುದು ಊಹೆಗೂ ಅಸಾಧ್ಯ.

ಭಾಷೆಯೆಂದರೇನು ? ಭಾಷೆಯು ಉಸಿರಾಡುವ ಕ್ರಿಯೆಯಂತೆಯೇ ಸಹಜವಾದ ಕ್ರಿಯೆ ಎಂದು ಭಾವಿಸಿರುವ ಅನೇಕರಿಗೆ ಇದು ಒಂದು ಅರ್ಥವಿಲ್ಲದ ಪ್ರಶ್ನೆ. ಆದರೆ ವಾಸ್ತವವಾಗಿ, ಸಪೀರ್ ಎಂಬ ವಿದ್ವಾಂಸ ಹೇಳುವಂತೆ, ದೈಹಿಕವಾಗಿ "ಭಾಷೆ ಒಂದು ಗೌಣ ಕ್ರಿಯೆ, ಅಥವಾ ಇನ್ನೂ ಖಚಿತವಾಗಿ ಹೇಳಬೇಕಾದರೆ, ಗೌಣ ಕ್ರಿಯೆಗಳ ಒಂದು ಸಮೂಹ." ಎಂದರೆ ಭಾಷೆಯ ಉತ್ಪತ್ತಿಗೆ ನಾವು ಉಪಯೋಗಿಸುವ ತುಟಿ, ಹಲ್ಲು, ನಾಲಗೆ, ಮೂಗು ಮುಂತಾದ ಅಂಗಗಳು ಇರುವುದು ಮುಖ್ಯವಾಗಿ ಬೇರೊಂದು ಕ್ರಿಯೆಗೆ ಅಥವಾ ಕ್ರಿಯೆಗಳಿಗೆ (ಉದಾಹರಣೆಗೆ ಆಹಾರ ಸ್ವೀಕರಣಕ್ಕೆ, ಉಸಿರಾಟಕ್ಕೆ). ಈ ಅಂಗಗಳನ್ನು ಅವುಗಳ ಮೂಲೋದ್ದೇಶದ ಜೊತೆಗೆ ಮತ್ತೊಂದು ಉದ್ದೇಶ ಕ್ಕಾಗಿಯೂ ಬಳಸಿಕೊಂಡಿರುವುದು ಮನುಷ್ಯನ ವೈಶಿಷ್ಟ್ಯ. ಭಾಷೆಯನ್ನು ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಬಾಲ್ಯದಲ್ಲಿ ಶ್ರಮಸಾಧ್ಯವಾದ ಪ್ರಯತ್ನದಿಂದ ಕಲಿಯಬೇಕು. ಬಹುಶಃ ಈ ಕಲಿಕೆ, ವಿದ್ವಾಂಸನೊಬ್ಬ ಹೇಳುವಂತೆ, ವ್ಯಕ್ತಿಯ ಜೀವನದಲ್ಲಿ ನಡೆಯುವ

* ಈ ಅಧ್ಯಾಯದ ಆರಂಭದಲ್ಲಿ ಬಂದಿರುವ ಕೆಲವು ಸಂಗತಿಗಳನ್ನು ಮೊದಲನೆಯ ಅಧ್ಯಾಯ ದಲ್ಲಿ ಹೆಚ್ಚು ವಿಸ್ತಾರವಾಗಿ ಚರ್ಚಿಸಲಾಗಿದೆ. ಆದರೆ ವ್ಯಕ್ತಿಭಾಷೆ, ಉಪಭಾಷೆಗಳ ವಿವರಣೆಗೆ ಭಾಷೆಯ ವಿವರಣೆ ಅತ್ಯಗತ್ಯವಾದ್ದರಿಂದ ಇಲ್ಲಿ ಮತ್ತೊಮ್ಮೆ ಭಾಷೆಯ ಸ್ವರೂಪವನ್ನು ಸಂಗ್ರಹ ವಾಗಿ ಹೇಳಲಾಗಿದೆ. ಆದ್ದರಿಂದ ಅನೇಕ ವಿಷಯಗಳು ಇಲ್ಲಿ ಪುನರಾವರ್ತನಗೊಂಡಿವೆ.

ಅತ್ಯಂತ ಮಹತ್ವಪೂರ್ಣವಾದ ಘಟನೆ. ಎಂದರೆ ಭಾಷೆ ಸ್ವಾಭಾವಿಕ ಕ್ರಿಯೆಯಲ್ಲ, ಕಲಿತ ಕ್ರಿಯೆ.

ಭಾಷೆಯನ್ನು ಸ್ಥೂಲವಾಗಿ ಹೀಗೆ ವಿವರಿಸಬಹುದು—ಮನುಷ್ಯ ತನ್ನ ಮನೋಗತವಾದ ಭಾವಗಳನ್ನೂ ಅಭಿಪ್ರಾಯಗಳನ್ನೂ ಅನ್ಯರಿಗೆ ತಿಳಿಸಲು ಮಾಡಿಕೊಂಡಿರುವ ಸಂಕೇತಗಳ ಒಂದು ವ್ಯವಸ್ಥೆಯೇ ಭಾಷೆ. ಆದರೆ ಈ ವಿವರಣೆ ಭಾಷೆಗೂ ಸಂಜ್ಞಾಭಾಷೆಗೂ (Gesture Language) ಇರುವ ವ್ಯತ್ಯಾಸವನ್ನು ಸ್ಪಷ್ಟಪಡಿಸುವುದಿಲ್ಲ. ದಾವಣಗೆರೆ ಸುತ್ತಮುತ್ತಲ ಕೆಲವು ಸಂತೆಗಳಲ್ಲಿ ಒಂದು ರೀತಿಯ ಸಂಜ್ಞಾಭಾಷೆಯನ್ನೇ ಒಂದು ಉದ್ಯೋಗವಾಗಿ ಮಾಡಿಕೊಂಡು ಹಣವನ್ನು ಸಂಪಾದಿಸುವುದುಂಟು. ಭಜನೆ ಮಾಡುತ್ತಿರುವ ಒಬ್ಬ ತನ್ನ ಹತ್ತಿರ ಇರುವವರ ಹೆಸರು ಕೇಳಿಕೊಂಡು ಅದನ್ನು ಕೆಲವು ಹಸ್ತಸಂಜ್ಞೆಗಳ ಮೂಲಕ ದೂರದಲ್ಲಿ ನಿಂತಿರುವ ತನ್ನ ಕಡೆಯವರ ಕಡೆಗೆ ಪ್ರವಹಿಸುತ್ತಾನೆ. ಆ ಸಂಜ್ಞೆಗಳನ್ನು ಕರತಲಾಮಲಕವಾಗಿ ಮಾಡಿಕೊಂಡಿರುವ ಅವರು ತಕ್ಷಣವೇ ಹೆಸರನ್ನು ಹೇಳುತ್ತಾರೆ, ಇದನ್ನರಿಯದ ಜನ ಬೆರಗಾಗಿ ಹಣವನ್ನು ತೆರುತ್ತಾರೆ. ಈ ಆಂಗಿಕ ಸಂಜ್ಞೆಗಳನ್ನು ನಾವು 'ಭಾಷೆ' ಎಂದು ಕರೆಯುವುದಿಲ್ಲ. ಭಾಷೆಯು ಧ್ವನ್ಯಂಗಗಳ ನಿರ್ಮಾಣವಾದರೂ ಸದ್ದೆಲ್ಲವೂ ಭಾಷೆಯಲ್ಲ. ಮನುಷ್ಯನ ಧ್ವನ್ಯಂಗಗಳು ಹೊರಪಡಿಸಬಹುದಾದ ಧ್ವನಿಗಳು ಅಸಂಖ್ಯಾತವಾದರೂ ಪ್ರತಿ ಭಾಷೆಯೂ ಸುಮಾರು ಮೂವತ್ತರಿಂದ ಅರವತ್ತು ಧ್ವನಿಗಳನ್ನು (ಪಾರಿಭಾಷಿಕವಾಗಿ ಹೇಳಬಹುದಾದರೆ ಧ್ವನಿಮಾಗಳನ್ನು) ಆರಿಸಿಕೊಂಡು ಅವುಗಳನ್ನು ಸಾಧ್ಯವಾದಷ್ಟು ರೀತಿಗಳಲ್ಲಿ ಜೋಡಿಸಿ ಬಳಸಿಕೊಳ್ಳುತ್ತದೆ. ಇಂತಹ ಧ್ವನಿಸಮೂಹಕ್ಕೆ ಸಾಂಪ್ರದಾಯಿಕವಾದ ಒಂದು ಅರ್ಥವನ್ನು ಕಲ್ಪಿಸಿದ್ದರೆ ಆ ಧ್ವನಿಸಮೂಹವನ್ನು 'ಧ್ವನಿಸಂಕೇತ'[1]ವೆಂದು ಕರೆಯುತ್ತೇವೆ. 'ಮರ' ಎಂಬ ಪದದಲ್ಲಿರುವ ನಾಲ್ಕು ಧ್ವನಿಗಳು (m-a-r-a) ಯಾವುದೋ ಒಂದು ವಸ್ತುವನ್ನು ಸೂಚಿಸುವುದರಿಂದ ಆ ಪದವನ್ನು ಒಂದು ಸಂಕೇತವೆಂದು ಕರೆಯುತ್ತೇವೆ. ಕನ್ನಡದಲ್ಲಿ 'ಮಪ' ಎಂಬ ಧ್ವನಿಸಂಕೀರ್ಣದಲ್ಲಿರುವ ನಾಲ್ಕು ಅಕ್ಷರಗಳ ಸಮೂಹಕ್ಕೆ (m-a-p-a) ನಾವು ಯಾವ ಅರ್ಥವನ್ನೂ ಕಲ್ಪಿಸಿಲ್ಲವಾಗಿರುವುದರಿಂದ ಅದು ಕನ್ನಡದಲ್ಲಿ ಧ್ವನಿಸಂಕೇತವಲ್ಲ. (ಪ್ರಪಂಚದ ಇನ್ನಾವುದೋ ಭಾಷೆಯಲ್ಲಿ ಅದು ಧ್ವನಿಸಂಕೇತವಾಗಿರಬಹುದು.) 'ಮರ' ಎಂಬ ಧ್ವನಿಸಂಕೀರ್ಣವು ಬೇರೆ ವಸ್ತುವನ್ನು ಸೂಚಿಸಬೇಕು ಎಂಬ ತೀರ್ಮಾನಕ್ಕೆ ಎಲ್ಲರೂ ಬಂದರೆ ಅದಕ್ಕೆ ಬೇರೊಂದು ಅರ್ಥ ಬರುತ್ತದೆ.

[1] ಚಿಹ್ನೆಗೂ ಸಂಕೇತಕ್ಕೂ ಇರುವ ವ್ಯತ್ಯಾಸ ಗಮನಾರ್ಹವಾದುದು. ಪಾಮರ್ ಈ ರೀತಿ ಹೇಳುತ್ತಾರೆ—"ನಾಚಿಕೆಯಾದಾಗ ಮುಖ ಕೆಂಪೇರುವುದು ಚಿತ್ತಸ್ಥಿತಿಯನ್ನು ತೋರಿಸುವ ಒಂದು ಅಪ್ರಯತ್ನಪೂರ್ವಕ ಕ್ರಿಯೆ. ಅದು ಆ ಚಿತ್ತಸ್ಥಿತಿಯ 'ಚಿಹ್ನೆ', ಫ್ರೆಂಚನಾಗಲಿ ಜರ್ಮನನಾಗಲಿ ಒಂದೇ ರೀತಿಯಲ್ಲಿ ಕೆಂಪೇರುತ್ತಾನೆ. ಆದರೆ 'ಕೆಂಪೇರು' ಎಂಬ ಧ್ವನಿಸಂಕೀರ್ಣದ (ಅಥವಾ ಪದದ) ಉಚ್ಚಾರಣೆ ನಮ್ಮ ಇಚ್ಛಾನುಸಾರಿಯಾದುದು. ಈ ಧ್ವನಿಸಂಕೀರ್ಣ ಒಂದೊಂದು ಭಾಷೆಗೂ ಬೇರೆಬೇರೆಯಾಗುತ್ತದೆ. ಇದು ನಮ್ಮ ಚಿತ್ತಸ್ಥಿತಿಯ "ಸಂಕೇತ."

ಎಂದರೆ ಪದ ಮತ್ತು ಅರ್ಥಗಳ ಸಂಬಂಧ ಸ್ವಾಭಾವಿಕವಾದುದಲ್ಲ, ಯಾದೃಚ್ಛಿಕ (Arbitrary)ವಾದುದು. ಆದ್ದರಿಂದಲೇ ಸ್ಟುರ್ಟೆವಾಂಟ್ ಎಂಬ ವಿದ್ವಾಂಸ ಭಾಷೆಯನ್ನು ಈ ರೀತಿ ಸೂತ್ರಿಸುತ್ತಾನೆ—"ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕೆ ಬಳಸುವ ಯಾದೃಚ್ಛಿಕವಾದ ಧ್ವನಿಸಂಕೇತಗಳ ವ್ಯವಸ್ಥೆಯೇ ಭಾಷೆ." ಈ ವಿವರಣೆ ಬಲುಮಟ್ಟಿಗೆ ಸಮರ್ಪಕವಾದುದು. ಬ್ಲಾಕ್ ಮತ್ತು ಟ್ರೇಗರ್ ಎಂಬ ವಿದ್ವಾಂಸರೂ ಇದೇ ರೀತಿಯಲ್ಲಿ ಭಾಷೆಯನ್ನು ಸೂತ್ರಿಸಿದ್ದಾರೆ. ಆದರೆ ಯಾರೂ ಇಲ್ಲದಿರುವಾಗ ತನ್ನಷ್ಟಕ್ಕೇ ತಾನು ಮಾತನಾಡಿಕೊಳ್ಳುವ ಸ್ವಗತಗಳಿಗೆ ಏನು ಹೇಳಬೇಕು?[1] ಸ್ವಗತಗಳಲ್ಲಿಯೂ ವ್ಯಕ್ತಿಯು ತನ್ನನ್ನು ಕುರಿತು ತಾನು ಮಾತನಾಡಿಕೊಳ್ಳುವುದರಿಂದ ಇಲ್ಲಿಯೂ ಒಂದು ರೀತಿಯ ಪರಸ್ಪರ ವ್ಯವಹಾರವನ್ನು ಗುರುತಿಸಬಹುದು.

ಇಲ್ಲಿಯವರೆಗೆ ಭಾಷೆ ಎಂಬುದು ಪ್ರತ್ಯೇಕ ಅಸ್ತಿತ್ವವಿರುವ ವಸ್ತು ಎನ್ನುವ ಹಾಗೆ ಮಾತನಾಡಿದ್ದೇವೆ. ನಿಜವಾಗಿ ನೋಡಿದರೆ ಒಂದು ಜನಾಂಗದಲ್ಲಿ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿ ಮಾತನಾಡುವ ಜನರನ್ನು ಕಾಣುತ್ತೇವೆ. ಆ ಅನೇಕರಲ್ಲಿ ಪ್ರತಿಯೊಬ್ಬನ ಬಳಿಯೂ ಪರಸ್ಪರ ಸಾಮ್ಯವಿರುವ ಧ್ವನಿಸಂಕೇತಗಳ ಒಂದು ಮೊತ್ತವಿರುತ್ತದೆ. ಎಂದರೆ ಒಂದು ಭಾಷಾಸಮಾಜದಲ್ಲಿ (Speech-Community) ಕಾಣಬರತಕ್ಕವು **ವ್ಯಕ್ತಿಭಾಷೆ**ಗಳು (Idiolects). ಒಬ್ಬ ವ್ಯಕ್ತಿಯ ಒಂದು ಸ್ವಮುಂದ ಮಾತಿನ ಅಭ್ಯಾಸಗಳ ಒಟ್ಟು ಮೊತ್ತವನ್ನು ವ್ಯಕ್ತಿಭಾಷೆಯೆಂದು ಕರೆಯಬಹುದು. ಹಾಕೆಟ್ ಪ್ರಕಾರ, "ವಿಭಜಿಸಿ ನೋಡಿದರೆ ಭಾಷೆ ಅನೇಕ ವ್ಯಕ್ತಿ-ಭಾಷೆಗಳ ಮೊತ್ತ" ವೆಂದು ಗೊತ್ತಾಗುತ್ತದೆ. ಕೆರೋಲ್ ಇದನ್ನೇ ಮತ್ತೊಂದು ರೀತಿಯಲ್ಲಿ ವಿವರಿಸುತ್ತಾರೆ—"ಒಂದು ಭಾಷಾಸಮಾಜದ ಎಲ್ಲ ಜನರ ವ್ಯಕ್ತಿಭಾಷೆಗಳಲ್ಲಿರುವ ಸಮಾನ ಅಂಶಗಳನ್ನು ಬೇರ್ಪಡಿಸಿ ಒಂದು ವ್ಯವಸ್ಥೆಗೆ ತಂದರೆ ಅದನ್ನೇ ನಾವು ಭಾಷೆ ಎಂದು ಕರೆಯುವುದು." ಎಂದರೆ ಭಾಷೆ ಎನ್ನುವುದು ಪ್ರಕಟವಾಗುವುದು ವ್ಯಕ್ತಿಭಾಷೆಗಳ ಮೂಲಕ. ವ್ಯಕ್ತಿಭಾಷೆಯು ಮೂರ್ತರೂಪವಾದರೆ (Percept), ಭಾಷೆಯು ಅಮೂರ್ತರೂಪ (Concept). 'ವ್ಯಕ್ತಿಭಾಷೆ' ಎಂಬ ಈ ತತ್ವವು ಭಾಷೆ ಮತ್ತು ಉಪಭಾಷೆ (Dialect)ಗಳಿಗಿರುವ ಸಂಬಂಧ ಮತ್ತು ವ್ಯತ್ಯಾಸಗಳನ್ನು ನಿರ್ಣಯಿಸಲು ಸಹಾಯಕಾರಿ.

ಒಬ್ಬ ವ್ಯಕ್ತಿ ಮೈಸೂರು ಪಟ್ಟಣದಿಂದ ಉತ್ತರಕ್ಕೆ ಪ್ರಯಾಣ ಮಾಡುತ್ತಿದ್ದಾನೆಂದು ಭಾವಿಸೋಣ. ಸುಮಾರು ಇನ್ನೂರು ಮೈಲಿಗಳ ನಂತರ ಅವನಿಗೆ ತನ್ನ ಮಾತೃಭಾಷೆಯಾದ ಕನ್ನಡವೇ ಕಿವಿಗೆ ಬೀಳುತ್ತಿದ್ದರೂ ಕಾಕುವಿನಲ್ಲಿ, ಕೆಲವು ಪದಗಳಲ್ಲಿ ತನಗೆ ಪರಿಚಿತವಾಗಿರುವ ಭಾಷೆಗೂ ಈ ಭಾಷೆಗೂ ಹಲವು ವ್ಯತ್ಯಾಸಗಳಿರುವುದು ಅರಿವಿಗೆ

[1] ಇಬ್ಬರೇ ಇಬ್ಬರು ವೃದ್ಧದಂಪತಿಗಳು ಮಾತನಾಡುತ್ತಿದ್ದ ಭಾಷೆಯೊಂದನ್ನು ಕಂಡುಹಿಡಿಯಲಾಯಿತೆಂದೂ, ಅವರಿಬ್ಬರೂ ಆ ಭಾಷೆಯ ಎರಡು ಉಪಭಾಷೆಗಳನ್ನು ಆಡುತ್ತಿರುವುದು ಗೋಚರವಾಯಿತೆಂದೂ ಸ್ಟುರ್ಟೆವಾಂಟ್ ಹೇಳುತ್ತಾರೆ.

ಬರುತ್ತದೆ. ಇನ್ನೂ ಮುಂದುವರಿದು ಧಾರವಾಡವನ್ನು ಸೇರುವಷ್ಟರಲ್ಲಿ ತನ್ನ ಭಾಷೆಯೇ ಕಿವಿಗೆ ಬೀಳುತ್ತಿದ್ದರೂ ಧಾರವಾಡದ ಭಾಷೆಯು ಬಹುಭಾಗ ಮೊದಮೊದಲು ಅರ್ಥವಾಗದೇ ಹೋಗಬಹುದು. (ಧಾರವಾಡದ ವ್ಯಕ್ತಿಗೆ ಮೈಸೂರಲ್ಲಿಯೂ ಇದೇ ಅನುಭವವಾಗಬಹುದು. ಇಲ್ಲಿ ಪ್ರಯಾಣ ಮಾಡುತ್ತಿರುವ ವ್ಯಕ್ತಿ ಅವಿದ್ಯಾವಂತನೆಂದು ಭಾವಿಸಬೇಕು.) ಆದರೂ ಸ್ವಲ್ಪ ಕಷ್ಟಪಟ್ಟರೆ ತನಗೆ ಕೇಳಿಬರುತ್ತಿರುವ ಭಾಷೆಯನ್ನು ಅರ್ಥಮಾಡಿಕೊಳ್ಳಬಹುದು. ಅವನ ಕಿವಿಗೆ ಕನ್ನಡ ಭಾಷಾಪ್ರಭೇದವೊಂದು ಕೇಳಿಬರುತ್ತದೆ. ಇನ್ನೂ ಮುಂದುವರಿದು ಮಿರಜ್ ನಿಲ್ದಾಣವನ್ನು ಅವನು ಸೇರುವ ಹೊತ್ತಿಗೆ ಅವನಿಗೆ ಗೊತ್ತಾಗುತ್ತದೆ—ಕನ್ನಡದಿಂದ ಸಂಪೂರ್ಣವಾಗಿ ಭಿನ್ನವಾದ ಭಾಷೆಯು ಪ್ರವೇಶವನ್ನು ತಾನು ಪ್ರವೇಶಿಸಿರುವುದು. ಧಾರವಾಡದಲ್ಲಿ ಪರಸ್ಪರ ಅರಿವು (Mutual Intelligibility) ಸುಮಾರು ಶೇಕಡ ಎಂಬತ್ತಾದರೆ ಇಲ್ಲಿ ಶೇಕಡ ಸೊನ್ನೆ.

* ಮಿರಜ್ ಮರಾಠಿ ] ಮರಾಠಿ

* ಧಾರವಾಡ ಕನ್ನಡ }

* ದಾವಣಗೆರೆ ಕನ್ನಡ } ಕನ್ನಡ

* ಮೈಸೂರು ಕನ್ನಡ

(ಚಿತ್ರ 1)

ಈ ಚಿತ್ರದಲ್ಲಿರುವಂತೆ ದಾವಣಗೆರೆಯ ಕನ್ನಡವನ್ನಾಡುವ ವ್ಯಕ್ತಿ ಮೈಸೂರಿನ ವ್ಯಕ್ತಿಯ ಜೊತೆಯಲ್ಲಾಗಲಿ ಧಾರವಾಡದ ವ್ಯಕ್ತಿಯ ಜೊತೆಯಲ್ಲಾಗಲಿ ಹೆಚ್ಚು ಸುಲಭವಾಗಿ ವ್ಯವಹರಿಸಬಲ್ಲ. ಈ ಉಪಭಾಷೆಗಳ ಮೊತ್ತವನ್ನೇ ಕನ್ನಡ ಭಾಷೆ ಎನ್ನುತ್ತೇವೆ. ಹೆಚ್ಚು ಕಡಿಮೆ ಒಂದೇ ಎನಿಸುವಷ್ಟರಮಟ್ಟಿಗೆ ಸಾಮ್ಯವಿರುವ ವ್ಯಕ್ತಿಭಾಷೆಗಳ ಮೊತ್ತವೇ ಭಾಷೆ. ಉಪಭಾಷೆಯೂ ಅಷ್ಟೇ. ಆದರೆ ಒಂದು ಭಾಷೆಯ ವ್ಯಕ್ತಿಭಾಷೆಗಳಲ್ಲಿ ಇರುವುದಕ್ಕಿಂತ ಉಪಭಾಷೆಗಳಲ್ಲಿನ ವ್ಯಕ್ತಿಭಾಷೆಗಳಲ್ಲಿ ಪರಸ್ಪರ ಅರಿವಿನ ಶೇಕಡಾ ಪ್ರಮಾಣ ಹೆಚ್ಚಾಗಿರುತ್ತದೆ. ಉದಾಹರಣೆಗೆ ಧಾರವಾಡದ ಕನ್ನಡವನ್ನು ಆಡುವ ಜನರಲ್ಲಿ ಪರಸ್ಪರ ಅರಿವು ಸುಮಾರು ಶೇಕಡ ತೊಂಬತ್ತೈದು ಇದ್ದರೆ, ಮೈಸೂರು ಕನ್ನಡ ಮತ್ತು ಧಾರವಾಡ ಕನ್ನಡಗಳಲ್ಲಿ ಪರಸ್ಪರ ಅರಿವು ಶೇಕಡ ಎಂಬತ್ತು ಆಗಬಹುದು. ಎಲ್ಲಿ ಪರಸ್ಪರ ಅರಿವು ಶೇಕಡ ನಲವತ್ತಕ್ಕಿಂತ ಕಡಮೆ ಆಗುತ್ತದೆಯೋ ಆಗ ಅವೆರಡನ್ನೂ ಪ್ರತ್ಯೇಕ ಭಾಷೆಗಳೆಂದು ಸ್ಥೂಲವಾಗಿ ಹೇಳಬೇಕಾಗುತ್ತದೆ. ಭಾಷೆ ಭಾಷೆಗಳಿಗೆ ಮಧ್ಯೆ ಗೆರೆಯನ್ನೆಳೆದು ಗಡಿಯನ್ನು ನಿರ್ಧರಿಸುವುದು ಅಸಾಧ್ಯ. ಭಾಷೆಯ ಹರಹಿನಲ್ಲಿ ಅದರ ಕೇಂದ್ರಸ್ಥಾನ

ದಿಂದ ದೂರ ಹೋದಂತೆ ಅದರ ಸ್ವರೂಪ ಸ್ವಲ್ಪಸ್ವಲ್ಪ ಮರೆಯಾಗುತ್ತ ಪಕ್ಕದ ಭಾಷೆಯ ಅಂಶಗಳು ಅದರಲ್ಲಿ ಹೆಚ್ಚುತ್ತ ಹೋಗುವುದನ್ನು ಕಾಣಬಹುದು. ಎರಡು ಭಾಷೆಗಳಿಗೂ ಸೇರಿದ ಒಂದು ಮಧ್ಯ ಪ್ರದೇಶವಿದ್ದೇ ಇರುತ್ತದೆ. ಇದನ್ನು 'ದ್ವಿಭಾಷಾ ಪ್ರದೇಶ'[1] ವೆಂದು (Bilingual Area) ಕರೆಯುತ್ತಾರೆ. ಪ್ರತ್ಯೇಕ ಭಾಷೆಗಳಿಗೆ ಇದು ಎಷ್ಟರ ಮಟ್ಟಿಗೆ ಅನ್ವಯವಾಗುತ್ತದೆಯೋ ಉಪಭಾಷೆಗಳ ಗಡಿಯ ವಿಷಯಕ್ಕೂ ಅಷ್ಟೇ ಅನ್ವಯವಾಗುತ್ತದೆ.

ಉಪಭಾಷೆಗಳ ಅಧ್ಯಯನ ದಿನದಿನಕ್ಕೆ ವಿದ್ವಾಂಸರ ಆಸಕ್ತಿಯನ್ನು ಕೆರಳಿಸುತ್ತಿದೆ. ಈ ಅಭ್ಯಾಸ ತನಗೆ ತಾನೇ ಉಪಯುಕ್ತವಾಗಿರುವುದರ ಜೊತೆಗೆ ಇದರಿಂದ ಇತರ ಅಭ್ಯಾಸಗಳಿಗೂ ತುಂಬ ಸಹಾಯ ಒದಗುತ್ತಿದೆ. ಉದಾಹರಣೆಗೆ ಒಂದು ಭಾಷೆಯ ಮೂಲಸ್ವರೂಪವನ್ನು ರಚಿಸಲು ಈ ಅಭ್ಯಾಸ ಬಹಳ ಸಹಾಯಕವಾಗಿದೆ. ಭಾಷೆಯ ಅತ್ಯಂತ ಪ್ರಾಚೀನವಾದ ರೂಪವೊಂದು ಬರಹದ ಭಾಷೆಯಲ್ಲಿ ಅಥವಾ ಒಂದು ಅದರ ಪ್ರಸಿದ್ಧ ಉಪಭಾಷೆಯಲ್ಲಿ (ಇದನ್ನು 'ಶಿಷ್ಟಭಾಷೆ'—Standard Language—ಎಂದು ಕರೆಯುವುದುಂಟು) ಲುಪ್ತವಾಗಿದ್ದರೂ ಇತರ ಪ್ರದೇಶಗಳಿಂದ ಬೇರೆಗೊಂಡು ಪ್ರತ್ಯೇಕವಾಗಿರುವ ಪ್ರದೇಶದ ಉಪಭಾಷೆಯಲ್ಲಿ ಆ ರೂಪ ಜೀವಂತವಾಗಿರಬಹುದು. ಉಪಭಾಷೆಗಳ ಅಧ್ಯಯನದ ಮಹತ್ವವನ್ನು ಗುರುತಿಸಿದ ಅಗ್ರಗಣ್ಯರಲ್ಲಿ ಒಬ್ಬನಾದ ಜೇಕಬ್ ಗ್ರಿಮ್ ಎಂಬಾತನು ಶಿಷ್ಟಭಾಷೆಯು ಹೆಚ್ಚು ವಿಕಾಸಗೊಂಡದ್ದರ ಪರಿಣಾಮವಾಗಿ ಕಳೆದುಕೊಂಡಿರುವ ಕೆಲವು ಅಮೂಲ್ಯ ಲಕ್ಷಣಗಳನ್ನು ಆ ಭಾಷೆಯ ಯಾವುದೋ ಕ್ಷುದ್ರ ಉಪಭಾಷೆ ಉಳಿಸಿಕೊಂಡು ಬರುವ ಸಾಧ್ಯತೆ ಇರುವುದರಿಂದ ಅಧ್ಯಯನದ ದೃಷ್ಟಿಯಿಂದ ಎಲ್ಲ ಭಾಷೆ ಉಪಭಾಷೆಗಳಿಗೂ ಸಮಾನಸ್ಥಾನವಿರಬೇಕೆಂದು ಪ್ರತಿಪಾದಿಸುತ್ತಾನೆ.

ಒಂದು ಭಾಷಾಪ್ರದೇಶದಲ್ಲಿ ಆ ಭಾಷೆಯ ಅನೇಕ ಪ್ರಭೇದಗಳಿರುವುದನ್ನು ಬಹು ಹಿಂದೆಯೇ ಗಮನಿಸಿದರು. ಉದಾಹರಣೆಗೆ ಕ್ರಿಸ್ತಪೂರ್ವದಲ್ಲಿದ್ದ ಅರಿಸ್ಟೊಫೇನ್ಸ್ ಎಂಬ ಗ್ರೀಕ್ ನಾಟಕಕಾರ ತನ್ನ ನಾಟಕಗಳ ಪಾತ್ರಗಳ ಮಾತಿನಿಂದ ವಿನೋದವನ್ನು ಉಕ್ಕಿಸಲು ಆ ಪಾತ್ರಗಳು ಬೇರೆ ಬೇರೆ ಉಪಭಾಷೆಗಳನ್ನಾಡುವಂತೆ ಮಾಡುತ್ತಾನೆ. ಸಂಸ್ಕೃತ ನಾಟಕಕಾರರೂ ತಮ್ಮ ಪಾತ್ರಗಳ ಬಾಯಲ್ಲಿ ಬೇರೆ ಬೇರೆ ಉಪಭಾಷೆಗಳನ್ನಾಡಿಸುತ್ತಾರೆ. ಆದರೆ ಮೊದಲಿನಿಂದಲೂ ಸಾಮಾನ್ಯವಾಗಿ ಬರಹದ ಭಾಷೆಯೇ ಶಿಷ್ಟಭಾಷೆಯೆನ್ನಿಸಿಕೊಂಡು, ಅದೇ ಪ್ರಮಾಣಭಾಷೆಯಾಗಿ, ಅದೇ ನಿಜವಾದ ಭಾಷೆ,

---

[1] ಈ ಭಾಗದಲ್ಲಿ ವಾಸಿಸುವ ಜನರು ಎರಡು ಭಾಷೆಗಳನ್ನೂ ಲೀಲಾಜಾಲವಾಗಿ ಆಡಬಲ್ಲರು. ಒಮ್ಮೊಮ್ಮೆ ಒಂದು ಭಾಷೆಯ ಪದಗಳಿಗೆ ಇನ್ನೊಂದು ಭಾಷೆಯ ಪ್ರತ್ಯಯಗಳನ್ನು ಹಚ್ಚುವುದುಂಟು. ಒಂದು ಭಾಷೆಯಲ್ಲಿ ವಾಕ್ಯದ ಅರ್ಧವನ್ನು ಹೇಳಿ ಇನ್ನೊಂದು ಭಾಷೆಯಲ್ಲಿ ಆ ವಾಕ್ಯವನ್ನು ಪೂರೈಸುವುದುಂಟು. ಮನೆಯಲ್ಲಿ ಗಂಡ ಒಂದು ಭಾಷೆಯಲ್ಲಿ ಪ್ರಶ್ನೆ ಕೇಳಿದರೆ ಹೆಂಡತಿ ಇನ್ನೊಂದು ಭಾಷೆಯಲ್ಲಿ ಉತ್ತರಕೊಡುವ ನಿದರ್ಶನಗಳೂ ಇಲ್ಲದಿಲ್ಲ.

ಉಳಿದ ಉಪಭಾಷೆಗಳು ಅದರ ವಿಕಾರಗಳು, ಆದ್ದರಿಂದ ಅಧ್ಯಯನಕ್ಕೆ ಅನರ್ಹ ಎಂಬ ಭಾವನೆ ಇತ್ತು. ಭಾಷೆಯ ಆಡುವ ರೂಪಗಳನ್ನು ತಿರಸ್ಕಾರದಿಂದ ನೋಡುತ್ತಿದ್ದರು. ಯೆಸ್ಪರ್ಸನ್ನನ ಮಾತಿನಲ್ಲಿ ಹೇಳುವುದಾದರೆ, ಪ್ರಾಚೀನಕಾಲದ ಭಾಷಾವಿಜ್ಞಾನವು "Eye-Philology" ಆಗಿತ್ತೇ ಹೊರತು, "Ear-Philology" ಆಗಿರಲಿಲ್ಲ. ಅಲ್ಲದೆ ಒಂದು ಭಾಷಾಪ್ರದೇಶದಲ್ಲಿನ ಯಾವುದೋ ಒಂದು ಭಾಗದ ಭಾಷೆಯನ್ನು ಶಿಷ್ಟ ಭಾಷೆಯೆಂದು ಕರೆದು ಗೌರವಿಸಿದರೂ ಅದು ಆ ಭಾಷೆಯ ಉಳಿದ ಉಪಭಾಷೆಗಳಂತೆಯೇ ಒಂದು ಉಪಭಾಷೆ ಎಂಬುದನ್ನು ಮರೆಯಬಾರದು. ಒಂದು ಉಪಭಾಷೆಗೆ ರಾಜಕೀಯ ಅಥವಾ ಧಾರ್ಮಿಕ ಕಾರಣಗಳಿಂದ ಶಿಷ್ಟಭಾಷೆಯ ಪಟ್ಟ ಲಭಿಸಬಹುದು. ಗ್ರೀಸಿನಲ್ಲಿ ಅಲೆಕ್ಸಾಂಡರನಿಗೆ ಮುನ್ನ ಒಂದೊಂದು ಸಣ್ಣ ರಾಜ್ಯಕ್ಕೂ ಒಂದೊಂದು ಉಪಭಾಷೆಯಿತ್ತು. ಅಲೆಕ್ಸಾಂಡರ್ ಆ ಎಲ್ಲ ರಾಜ್ಯಗಳನ್ನು ಒಂದು ಕೇಂದ್ರಕ್ಕೆ ಅಧೀನಗೊಳಿಸಿದನಂತರ ಅವನೂ ಅವನ ಹಿರಿಯ ಅಧಿಕಾರಿಗಳೂ ಆಡುತ್ತಿದ್ದ ಉಪಭಾಷೆಯೇ ಪ್ರಮಾಣಭಾಷೆಯಾದ್ದರಿಂದ ಉಳಿದ ಉಪಭಾಷೆಗಳು ಮೃತ್ಯುವನ್ನಪ್ಪಬೇಕಾಯಿತು. ಈ ಪ್ರಮಾಣಭಾಷೆಯಿಂದ ಆಧುನಿಕ ಗ್ರೀಕ್ ಉಪಭಾಷೆಗಳು ಉದ್ಭವಿಸಿದುವು. ಲ್ಯಾಟಿನ್ ಭಾಷೆಯಲ್ಲೂ ಇದನ್ನೇ ಕಾಣಬಹುದು. ರೋಮ್ ಪಟ್ಟಣವು ಇಟಲಿಯ ರಾಜಕೀಯ-ಸಾಂಸ್ಕೃತಿಕ ಕೇಂದ್ರವಾದನಂತರ ಅದು ಒಂದು ರೀತಿಯ ಒರಟು ಲ್ಯಾಟಿನನ್ನು ಪ್ರಮಾಣ ಭಾಷೆಯಾಗಿ ಅಂಗೀಕರಿಸಿತು. ಈ ಲ್ಯಾಟಿನ್ ಭಾಷೆಯಿಂದಲೇ ಈಗಿನ ಫ್ರೆಂಚ್, ಪೋರ್ಚುಗೀಸ್, ಸ್ಪ್ಯಾನಿಷ್ ಮುಂತಾದ ರೊಮಾನ್ಸ್ ಭಾಷಾವರ್ಗದ ಭಾಷೆಗಳು ವಿಕಾಸವಾದುವು. ಸಂಸ್ಕೃತವೂ ಕೂಡ ಯಾವುದೋ ಒಂದು ಭಾಷಾಪ್ರಭೇದದ— ಬಹುಶಃ ಉತ್ತರಭಾರತದ ವಿದ್ಯಾವಂತವರ್ಗದ ಜನ ಆಡುತ್ತಿದ್ದ ಉಪಭಾಷೆಯೊಂದರ ಸಂಸ್ಕರಿಸಲ್ಪಟ್ಟ ರೂಪವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಭಾಷೆಯ ಅಭ್ಯಾಸದಲ್ಲಿ ತೊಡಗಿರುವ ಈಗಿನ ಭಾಷಾವಿಜ್ಞಾನಿಗೆ ಪ್ರಮಾಣಭಾಷೆಯಂತೆಯೇ ಆ ಭಾಷೆಯ ಅತ್ಯಂತ ಕ್ಷುದ್ರವಾದ ಉಪಭಾಷೆಯೂ ಸಮಾನವಾಗಿಯೇ ಅಭ್ಯಾಸಯೋಗ್ಯವಾದುದು. ಕೆಲವೊಮ್ಮೆ ಪ್ರಮಾಣಭಾಷೆಗಿಂತ ಈ ಕ್ಷುದ್ರ ಉಪಭಾಷೆಗಳ ಅಧ್ಯಯನವೇ ಅವನಿಗೆ ಹೆಚ್ಚು ರುಚಿಸಬಹುದು. ಏಕೆಂದರೆ ಇಂತಹ ಉಪಭಾಷೆಗಳು ಭಾಷೆಯ ಪ್ರಾಚೀನರೂಪಗಳನ್ನು ಪಳೆಯುಳಿಕೆಗಳ (Fossils) ರೂಪದಲ್ಲಿ ಹೆಚ್ಚು ಶುದ್ಧವಾಗಿ ಉಳಿಸಿಕೊಂಡಿರಬಹುದು. ಫ್ರಾನ್ಸಿನ ಅತಿ ಹಿರಿಯ ಭಾಷಾವಿಜ್ಞಾನಿಯೆನಿಸಿಕೊಂಡಿರುವ ಗಿಲಿಯೆರೊನ್ (Gillie'ron) ಎಂಬಾತ ಫ್ರೆಂಚ್ ಉಪಭಾಷೆಗಳ ಪರಿವೀಕ್ಷಣೆಯ (Dialect survey) ಕಾರ್ಯವು ಅತ್ಯವಸರದ ಮತ್ತು ತಕ್ಷಣವೇ ಆಗಬೇಕಾದ ಕಾರ್ಯವೆಂದು ಭಾವಿಸಿ ಆ ಕಾರ್ಯವನ್ನು ಕೈಗೊಂಡನು. ಅದಕ್ಕೆ ಕಾರಣ, ಜನತೆಯಲ್ಲಿ ವಿದ್ಯೆಯ ಪ್ರಚಾರ ಆದಂತೆ ಉಪಭಾಷೆಗಳು ತಮ್ಮ ವೈಶಿಷ್ಟ್ಯವನ್ನು ಕಳೆದುಕೊಂಡು ಕೇಂದ್ರಭಾಷೆಗೆ ತಕ್ಕಂತೆ ಹೊಂದಿಕೊಳ್ಳಲು ಪ್ರಯತ್ನಿಸುತ್ತವೆ. ಎಂದರೆ ಉಪಭಾಷೆಗಳನ್ನಾಡುವವರು ಶಿಷ್ಟಭಾಷೆಯೆನ್ನಿಸಿಕೊಂಡಿರುವ ಉಪಭಾಷೆಯನ್ನು ಅನುಕರಿಸಲು

ಪ್ರಯತ್ನಿಸುತ್ತಾರೆ. ಇಂತಹ ಪ್ರಯತ್ನಗಳಿಂದ ಕಾಲಕ್ರಮೇಣ ಉಪಭಾಷೆಗಳು ಹೇಳ ಹೆಸರಿಲ್ಲದಂತೆ ನಾಶವಾಗಬಹುದು. ನವ ಇಂಗ್ಲೆಂಡಿನ (ಸಂಯುಕ್ತ ಸಂಸ್ಥಾನಗಳ ಉತ್ತರ-ಪೂರ್ವಭಾಗ) ಉಪಭಾಷಾ ಪರಿವೀಕ್ಷಣೆಯ ಪ್ರಧಾನ ಸಂಪಾದಕರಾದ ಕುರಾತ್ ಅವರೂ ಕೂಡ ಇದೇ ಮಾತುಗಳನ್ನಾಡಿದ್ದಾರೆ—"ನವ ಇಂಗ್ಲೆಂಡಿನ ಗ್ರಾಮಗಳ ಭಾಷೆಯ ಅನೇಕ ವೈಶಿಷ್ಟ್ಯಗಳು ಕಣ್ಮರೆಯಾಗುತ್ತಿವೆ. ಅನೇಕವು ಹೆಚ್ಚು ಕಡಿಮೆ ನಾಶವಾಗಿವೆ, ಅನೇಕವನ್ನು ಜನ ಕೈಬಿಡುತ್ತಿದ್ದಾರೆ. ಉತ್ತರದ ಹಳ್ಳಿ ಗಾಡುಗಳು ದಕ್ಷಿಣದ ಕೈಗಾರಿಕೆಗಳಿಂದ ತುಂಬಿರುವ ಭಾಗಗಳಿಗಿಂತ ಪ್ರಾದೇಶಿಕವಾದ ಉಪಭಾಷೆಯ ಲಕ್ಷಣಗಳನ್ನು ಹೆಚ್ಚಾಗಿ ಉಳಿಸಿಕೊಂಡಿವೆ. ಗ್ರಾಮನಿವಾಸಿಯು ಪಟ್ಟಣ-ನಿವಾಸಿಯೊಡನೆ ವ್ಯವಹರಿಸಲು ತೊಡಗಿದಾಗ, ಅದರಲ್ಲೂ ಯುವಕರಾದವರು ತಮ್ಮ ಭಾಷೆಯನ್ನು ಪಟ್ಟಣದ ಭಾಷೆಗೆ ಸರಿಯಾಗಿ 'ಶಿಷ್ಟ'ಗೊಳಿಸಲು ಪ್ರಯತ್ನಿಸುತ್ತಾರೆ. ಕೈಗಾರಿಕೆಗಳ ಕೇಂದ್ರವೋ ಸಾಂಸ್ಕೃತಿಕ ಕೇಂದ್ರವೋ ಆಗಿರುವ ಪಟ್ಟಣದ ಪ್ರಭಾವಕ್ಕೆ ಒಳಗಾಗಿ ಇಡೀ ಒಂದು ಉಪಭಾಷೆಯೇ ನಾಶವಾಗಬಹುದು. ಅಥವಾ ಅದು ಗಮನಾರ್ಹವಾದ ಪ್ರಮಾಣದಲ್ಲಿ ಅಮೂಲ್ಯವೂ ಪ್ರಾಚೀನವೂ ವಿರಳವೂ ಆದ ಕೆಲವು ವೈಶಿಷ್ಟ್ಯಗಳನ್ನು ಕಳೆದುಕೊಳ್ಳಬಹುದು."

ಉಪಭಾಷಾ ಪರಿವೀಕ್ಷಣೆಯಿಂದ ಸಾಮಾನ್ಯ ಭಾಷಾವಿಜ್ಞಾನಕ್ಕೆ ಹಲವಾರು ರೀತಿಗಳಲ್ಲಿ ಸಹಾಯವೊದಗಿದೆ. ಒಂದು ಭಾಷೆಯ ಮೂಲರೂಪಗಳನ್ನು ಪುನಾರಚಿಸುವವರು ಆ ಪ್ರಾಚೀನ ಕಾಲದಲ್ಲಿ ಭಾಷೆಯು ತನ್ನ ಪ್ರದೇಶದಲ್ಲಿ ಏಕರೀತಿಯಾಗಿ ಹರಡಿಕೊಂಡಿತ್ತು ಎನ್ನುವ ಅರ್ಥ ಬರುವಂತೆ ಕೆಲಸ ಮಾಡುತ್ತಾರೆ. ಹೀಗೆ ರಚಿಸಿದ ಭಾಷೆ ಬಹುಮಟ್ಟಿಗೆ ಇತ್ತೀಚಿನ ಆಧಾರಗಳ ಸಹಾಯದಿಂದ ಕಲ್ಪಿಸಿದ್ದು. ತೌಲನಿಕ ಭಾಷಾವಿಜ್ಞಾನವು ಭಾಷೆಯನ್ನು ಸರಳಮಾಡಿ ತೋರಿಸುವುದರಿಂದ ಭಾಷೆಯ ಬಗ್ಗೆ ತಪ್ಪು ಕಲ್ಪನೆಗೆ ಅವಕಾಶ ಕೊಡುತ್ತದೆ ಎಂದು ವಾದಿಸುವವರು ಇಲ್ಲದಿಲ್ಲ. ಉಪಭಾಷೆಗಳನ್ನು ತೋರಿಸುವ ಭೂಪಟವಾದರೋ ನಮ್ಮನ್ನು ಜೀವಂತಭಾಷೆಯ ಪ್ರಯೋಗಶಾಲೆಗೆ ಕರೆದೊಯ್ದು ತನ್ನ ಬೆಳವಣಿಗೆಯಲ್ಲಿ ಭಾಷೆಯು ಅನುಭವಿಸುವ ಒಲವು, ವೇದನೆ, ಹೋರಾಟಗಳನ್ನು ತೋರಿಸುತ್ತದೆ. ಹೊಸ ಪದವೊಂದನ್ನು ಒಂದು ವರ್ಗದ ಜನ ಎಷ್ಟು ಉತ್ಸಾಹದಿಂದ ಅಂಗೀಕರಿಸುವರೋ ಇನ್ನೊಂದು ವರ್ಗ ಅಷ್ಟೇ ಉಗ್ರವಾಗಿ ಅದರ ಪ್ರವೇಶವನ್ನು ಪ್ರತಿಭಟಿಸಿ ಪ್ರಾಚೀನ ಪದಕ್ಕೇ ಅಂಟಿಕೊಳ್ಳಬಹುದು. ಭಾಷೆಯಲ್ಲಿ ಈ ಕ್ರಿಯೆ ಸತತವಾಗಿ ನಡೆಯುತ್ತಿರುತ್ತದೆ. ಹೀಗೆ ಉಪಭಾಷಾ ಪರಿವೀಕ್ಷಣೆಯು ಪ್ರಾಚೀನ ರೂಪಗಳ ಪುನಾರಚನೆಯ ಅಧ್ಯಯನಕ್ಕೆ, ಎಂದರೆ ತೌಲನಿಕ ಭಾಷಾವಿಜ್ಞಾನಕ್ಕೆ[1] ಪೂರಕವಾಗಿದೆ.

---

[1] ಭಾಷೆಯನ್ನು ಅದು ಈಗ ಇರುವ ಸ್ಥಿತಿಯಲ್ಲಿಯೇ ಅಧ್ಯಯನ ಮಾಡುವುದಕ್ಕೆ ವಿವರಣಾತ್ಮಕ ಭಾಷಾವಿಜ್ಞಾನವೆಂದೂ (Descriptive Linguistics), ಭಾಷೆಯ ಪ್ರಾಚೀನ ರೂಪಗಳನ್ನು ಈಗಿನ ರೂಪಗಳೊಂದಿಗೆ ಹೋಲಿಸಿ ಅಧ್ಯಯನ ಮಾಡುವುದಕ್ಕೆ ಐತಿಹಾಸಿಕ

ಒಂದೇ ಅರ್ಥವಿರುವ ಭಿನ್ನಪದಗಳು, ಭಿನ್ನ ಅರ್ಥವಿರುವ ಸಮಾನರೂಪದ ಪದಗಳು, ಭಾಷೆಯಲ್ಲಿ ಸಾಮ್ಯಮೂಲವ್ಯತ್ಯಾಸ (Analogic change)—ಮುಂತಾದ ಈ ಸಮಸ್ಯೆಗಳನ್ನೂ ಇವು ಭಾಷೆಯ ಬೆಳವಣಿಗೆಯಲ್ಲಿ ವಹಿಸುವ ಪಾತ್ರವನ್ನೂ ಅರಿಯಲು ಉಪಭಾಷೆಗಳ ಅಧ್ಯಯನಕ್ಕಿಂತ ಉತ್ತಮವಾದ ಮಾರ್ಗ ಮತ್ತೊಂದಿಲ್ಲ. ಸಾಂಸ್ಕೃತಿಕ ಕೇಂದ್ರಗಳಿಂದ ಪದಗಳು ಪ್ರಸಾರಗೊಳ್ಳುವುದು, ವ್ಯಾಪಾರ ಮಾರ್ಗಗಳು ಅಥವಾ ಸಂಚಾರ ಮಾರ್ಗಗಳ ಮೂಲಕ ಮತ್ತೊಂದು ಉಪಭಾಷೆಯನ್ನೋ ಅಥವಾ ಅನ್ಯ



ಚಿತ್ರ ೨



ಚಿತ್ರ ೩



ಚಿತ್ರ ೪

ಭಾಷೆಯನ್ನೋ ಪ್ರವೇಶಿಸುವುದು—ಇವುಗಳಿಗೆ ಉತ್ತಮ ನಿದರ್ಶನಗಳೆಂದರೆ ಉಪಭಾಷಾ ಭೂಪಟಗಳು, ಹಾಕೆಟ್, ಪಾಮರ್ ಮುಂತಾದ ವಿದ್ವಾಂಸರ ಕೃತಿಗಳಿಂದ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಬಹುದು. ಎರಡನೆಯ ಚಿತ್ರದಲ್ಲಿರುವಂತೆ ಕೇಂದ್ರವೊಂದರ ಸುತ್ತಮುತ್ತ ಸೀಮಾರೇಖೆಗಳು[1] ವರ್ತುಲಗಳಾಗಿ ಸುತ್ತುವರಿದಿದ್ದರೆ

---

ಭಾಷಾವಿಜ್ಞಾನವೆಂದೂ (Historical Linguistics), ಭಾಷೆಯ ರೂಪಗಳನ್ನು ಅದರ ಸೋದರ ಭಾಷೆಗಳ ರೂಪಗಳೊಂದಿಗೆ ಹೋಲಿಸಿ ಆ ಭಾಷಾವರ್ಗದ ಮೂಲರೂಪಗಳನ್ನು ರಚಿಸುವ ಅಧ್ಯಯನಕ್ಕೆ ತೌಲನಿಕ ಭಾಷಾವಿಜ್ಞಾನವೆಂದೂ (Comparative Linguistics) ಹೆಸರು.

[1] ಒಂದು ಪದದ ಅಥವಾ ಧ್ವನಿಯ ವ್ಯಾಪ್ತಿಯನ್ನು ತೋರಿಸುವ ರೇಖೆಯನ್ನು ಸೀಮಾರೇಖೆ (Isogloss) ಎಂದು ಕರೆಯುತ್ತಾರೆ. ಉದಾಹರಣೆಗೆ ಮೈಸೂರು ನಗರದ ಸುತ್ತಮುತ್ತ 'ಕೊತ್ತಿ' (=ಬೆಕ್ಕು) ಎಂಬ ಪದವು ಬಳಕೆಯಲ್ಲಿದೆ. ಅದು ಎಲ್ಲೆಲ್ಲಿ ಬಳಕೆಯಲ್ಲಿದೆ ಎಂಬುದನ್ನು ಸಂಗ್ರಹಿಸಿ ಮೈಸೂರಿನ ಭೂಪಟದ ಮೇಲೆ ಅದನ್ನು ಗುರುತಿಸಬಹುದು. ಅದು ಬಳಕೆಯಲ್ಲಿರುವ ಪ್ರದೇಶದ ಗಡಿಯನ್ನು ತೋರಿಸುವ ರೇಖೆಯೇ ಸೀಮಾರೇಖೆ. ಉತ್ತರ ಕರ್ನಾಟಕದಲ್ಲಿ 'ಜವಳಿಕಾಯಿ'ಯೆಂದೂ ದಕ್ಷಿಣ ಕರ್ನಾಟಕದಲ್ಲಿ 'ಗೋರಿಕಾಯಿ' ಎಂದೂ ಒಂದು ತರಕಾರಿಗೆ ಹೆಸರುಗಳಿವೆ. ಈ ಪದಗಳು ಸ್ಥೂಲವಾಗಿ ಎಲ್ಲಿಂದ ಎಲ್ಲಿಯವರೆಗೆ ಬಳಕೆಯಲ್ಲಿವೆ ಎಂಬುದನ್ನು ನಿರ್ಧರಿಸಲು ಸಾಧ್ಯ. ಅವುಗಳ ಸೀಮಾರೇಖೆಗಳನ್ನು ಎಳೆದು ತೋರಿಸಬಹುದು. ಹಾಗೆ ಎಳೆದು ತೋರಿಸಬೇಕಾದರೆ ಬಹುವಾದ ಪರಿವೀಕ್ಷಣೆ ನಡೆದಿರಬೇಕು. ಎಲ್ಲಾ ಕಡೆಗಳಲ್ಲೂ ತಿರುಗಿ ಅಲ್ಲೆಲ್ಲ ಬಳಕೆಯಲ್ಲಿರುವ ಪದ ಯಾವುದು ಎಂಬುದನ್ನು ಗುರುತುಹಾಕಿಕೊಳ್ಳಬೇಕು. ಆ ಎರಡು ಪದಗಳ ವ್ಯಾಪ್ತಿಯ ಪ್ರದೇಶಗಳ ಮಧ್ಯೆ ಎರಡು ಪದಗಳೂ ಬಳಕೆಯಲ್ಲಿರುವ ಚಿಕ್ಕ ಪ್ರದೇಶವೊಂದು ಇರುವ ಸಂಭವವುಂಟು.

ಮಧ್ಯದಲ್ಲಿರುವ ಕೇಂದ್ರನಗರದಿಂದ ಹೊಸರೂಪಗಳು ಸುತ್ತಮುತ್ತ ಪ್ರಸಾರವಾಗುತ್ತಿವೆ ಎಂದು ಊಹಿಸಬಹುದು. ಸಾಮಾನ್ಯವಾಗಿ ಹೊಸರೂಪಗಳು ಸಾಂಸ್ಕೃತಿಕ ಅಥವಾ ಕೈಗಾರಿಕೆಗಳ ಕೇಂದ್ರವೊಂದಕ್ಕೆ ಬಂದು ಅಲ್ಲಿ ಪ್ರಚಾರದಲ್ಲಿದ್ದು ಆ ಕೇಂದ್ರಕ್ಕೆ ಸುತ್ತ ಮುತ್ತಣಿಂದ ಬಂದುಹೋಗುವ ಜನರ ಮೂಲಕ ಆ ಭಾಷೆಯನ್ನು ಪ್ರವೇಶಿಸುತ್ತವೆ. ಉದಾಹರಣೆಗೆ ನವ ಇಂಗ್ಲೆಂಡಿನಲ್ಲಿ ಟಾನಿಕ್ (Tonic) ಎಂಬ ಪದ 'ಸೋಡಾ ನೀರು' ಎಂಬ ಅರ್ಥದಲ್ಲಿ ಬೋಸ್ಟನ್ ಪಟ್ಟಣದಿಂದ ಸುತ್ತಮುತ್ತ ಪ್ರಸಾರವಾಗುತ್ತಿರುವುದನ್ನು ಚಿತ್ರ ೨ರಿಂದ ಕಾಣಬಹುದು. ಜರ್ಮನಿಯ ಉಪಭಾಷಾಪಟವೊಂದರಲ್ಲಿ (ಚಿತ್ರ ೩) ಸಂಚಾರಯೋಗ್ಯವಾದ ನದಿಯ ಪಾತ್ರದ ಮೂಲಕ ರೂಪಗಳು ಪ್ರಯಾಣ ಮಾಡು ವುದನ್ನು ಕಾಣಬಹುದು. ಅಲ್ಲಿ 'uns' ಎಂಬ ಪದವು 'us' ಎಂಬ ಪದದ ಪ್ರದೇಶವನ್ನು ಒತ್ತರಿಸುತ್ತಿದೆ. ದಕ್ಷಿಣ ಫ್ರಾನ್ಸಿನ ಒಂದು ಉಪಭಾಷಾ ಪಟದಲ್ಲಿ (ಚಿತ್ರ ೪) ಭೂವ್ಯಾಪಾರ ಮಾರ್ಗವನ್ನು ಸೀಮಾರೇಖೆಗಳ ಒಂದು ತಂಡವೇ ಅನುಸರಿಸುತ್ತದೆ. ಇಲ್ಲಿಯ ವೈಚಿತ್ರ್ಯವೇನೆಂದರೆ ಮುಖ್ಯಮಾರ್ಗದಿಂದ ಕವಲೊಡೆಯುವ ಒಂದು ಸಣ್ಣ ಮಾರ್ಗವನ್ನೂ ಸೀಮಾರೇಖೆಗಳು ಅನುಸರಿಸುವುದು. ಪದಗಳು ಸಂಚಾರಮಾರ್ಗ ಗಳನ್ನು ಅನುಸರಿಸಿ ಉದ್ದಕ್ಕೆ ಹೋಗಿ ನಂತರ ಅಗಲಕ್ಕೆ ಹರಡಿಕೊಳ್ಳುತ್ತವೆ ಎಂಬುದಕ್ಕೆ ಇವು ಒಳ್ಳೆಯ ಉದಾಹರಣೆಗಳು. ಭಾಷೆಯು ರೋಗದಂತೆ ಜನಸಂದಣಿ ದಟ್ಟವಾಗಿರುವ ಕಡೆ, ಕೊಳುಕೊಡೆ ಹೆಚ್ಚಾಗಿರುವ ಕಡೆ ಬೇಗ ಹಬ್ಬುತ್ತದೆ.

ಪ್ರತಿ ವಿಜ್ಞಾನ ಶಾಖೆಗೂ ಒಂದು ಇತಿಹಾಸ ಒಂದು ಬೆಳವಣಿಗೆ ಇರುವಂತೆ ಉಪ ಭಾಷಾ ಪರಿವೀಕ್ಷಣೆಗೂ ಒಂದು ಇತಿಹಾಸ ಒಂದು ಬೆಳವಣಿಗೆ ಉಂಟು.

ಭಾಷೆ ಪರಿವರ್ತನಶೀಲವಾದುದು. ಆದರೆ ಅದರಲ್ಲಿ ಆಗುವ ಎಲ್ಲ ವ್ಯತ್ಯಾಸಗಳೂ ಸಾರ್ವತ್ರಿಕವಾದ ಒಂದು ನಿಯಮವನ್ನು ಅನುಸರಿಸಿ ನಡೆಯುವುದಿಲ್ಲ. ಹೋದ ಶತ ಮಾನದಲ್ಲಿ ಕೆಲವು ಉತ್ಸಾಹಿಗಳು ಉಪಭಾಷೆಗಳಲ್ಲಿ ಧ್ವನಿವ್ಯತ್ಯಾಸಗಳು ಒಂದು ನಿಯಮವನ್ನನುಸರಿಸಿ ನಡೆಯುತ್ತವೆ ಎಂದು ಭಾವಿಸಿ ಅದನ್ನು ಸಾಧಿಸಲು ಉಪ ಭಾಷೆಗಳ ಅಧ್ಯಯನವನ್ನು ಕೈಗೊಂಡರು. ಈ ಉದ್ದೇಶದ ಜೊತೆಗೆ ಇನ್ನೂ ಹಲವಾರು ಉದ್ದೇಶಗಳನ್ನಿಟ್ಟುಕೊಂಡು ಕ್ರಿ.ಶ. 1876ರಲ್ಲಿ ಜರ್ಮನಿಯ ಭಾಷಾವಿಜ್ಞಾನಿ ಜಾರ್ಜ್ ವೆಂಕರ್ ಎಂಬಾತ ಜರ್ಮನಿಯ ಉಪಭಾಷೆಗಳ ಪರಿವೀಕ್ಷಣೆಯನ್ನು ಕೈಗೊಂಡನು. ಉಪಭಾಷೆಗಳು ಮತ್ತು ಅವುಗಳ ಗಡಿಗಳನ್ನು ಸಾಧಿಸಿ ತೋರಿಸುವುದು ಅವನ ಮುಖ್ಯ ಉದ್ದೇಶ. ಅದಕ್ಕಾಗಿ ಅವನು ನಲವತ್ತು ವಾಕ್ಯಗಳ ಪ್ರಶ್ನಾವಳಿಯನ್ನು (Questionnaire) ಸಿದ್ಧಪಡಿಸಿ ದೇಶದ ನಾನಾ ಭಾಗಗಳ ಶಾಲಾ ಉಪಾಧ್ಯಾಯರಿಗೆ ಕಳುಹಿಸಿ ಅವರಿಂದ ಅವರವರ ಉಪಭಾಷೆಗಳಿಗೆ ಅನುವಾದಗಳನ್ನು ಪಡೆದನು. (ಹೀಗೆ ಅವನು ಪಡೆದ ಪ್ರಾದೇಶಿಕ ಮಾದರಿಗಳ ಅನುವಾದಗಳ ಸಂಖ್ಯೆ ಸುಮಾರು 40.000.) ಅವನ ನಿರೀಕ್ಷೆ ಸಫಲವಾಗಲಿಲ್ಲ. ಉಪಭಾಷೆಗಳಿಗೆ ಸ್ಪಷ್ಟವಾದ ಗಡಿರೇಖೆಗಳು ಇಲ್ಲ ಎನ್ನುವುದು ಅವನ ಪರಿವೀಕ್ಷಣೆಯಿಂದ ಖಚಿತಪಟ್ಟಿತು. ಒಂದು ಭಾಷಾಪ್ರದೇಶದಲ್ಲಿ

ಪ್ರತಿರೂಪಕ್ಕೂ ತನ್ನದೇ ಆದ ವ್ಯಾಪ್ತಿಯುಂಟು. ಇದರಿಂದ "ಪ್ರತಿಪದಕ್ಕೂ ಅದರದೇ ವಿಶಿಷ್ಟ ಇತಿಹಾಸವಿದೆ" ಎಂಬ ಪ್ರಸಿದ್ಧ ಹೇಳಿಕೆಗೆ ದಾರಿಯಾಯಿತು.

ಉಪಭಾಷಾ ಪರಿವೀಕ್ಷಣೆಯ ಇತಿಹಾಸದಲ್ಲಿ ವೆಂಕರನಿಗಿಂತ ಗಿಲಿಯೆರೋನನ ಹೆಸರು ಉಜ್ವಲವಾಗಿ ಬೆಳಗುತ್ತಿದೆ. ಅವನನ್ನು ಉಪಭಾಷೆಗಳ ಅಧ್ಯಯನದ ಪಿತಾಮಹನೆಂದೂ ಕರೆಯುವುದುಂಟು. ಭಾಷಾಸಂಬಂಧಿಯಾದ ಎಲ್ಲ ವಿಷಯಗಳಲ್ಲಿಯೂ ಸಂವೇದನೆಯನ್ನು ಬೆಳೆಯಿಸಿಕೊಂಡಿರುವ ಸ್ವಿಟ್ಸರ್ಲೆಂಡಿನಲ್ಲಿ ಹುಟ್ಟಿದ ಇವನು ಉಪಭಾಷಾ ಪರಿವೀಕ್ಷಣೆಯ ಇತಿಹಾಸದಲ್ಲೇ ಅತ್ಯಂತ ಮಹತ್ವದ ಘಟನೆ ಎನ್ನಿಸಿಕೊಂಡಿರುವ ಫ್ರಾನ್ಸಿನ ಉಪಭಾಷೆಗಳ ಅಧ್ಯಯನವನ್ನು ಕೈಗೊಂಡನು. ಒಂದು ಪದದ ಜೀವನದಲ್ಲಿ ನಡೆಯುವ ಸಂಕ್ಷೋಭೆ, ಬದುಕಲು ಅದು ನಡೆಯಿಸುವ ಹೋರಾಟ ಇವುಗಳನ್ನು ಅವನು ಪ್ರತ್ಯಕ್ಷವಾಗಿ ಅನುಭವಿಸುತ್ತಿರುವಂತೆ ಭಾಸವಾಗುತ್ತಿತ್ತೆಂದು ಅವನ ಸಮೀಪವರ್ತಿಗಳಾದ ವ್ಯಕ್ತಿಗಳು ಹೇಳುತ್ತಿದ್ದರು. ಅವನಿಗೆ ಭಾಷೆ ಒಂದು ಜೀವಂತ ವಸ್ತುವಾಗಿತ್ತು. ಅವನಿಂದ ಉಪಭಾಷಾ ಪರಿವೀಕ್ಷಣೆಗೆ ಭಾಷಾವಿಜ್ಞಾನದಲ್ಲಿ ಶಾಶ್ವತವೂ ಪ್ರಮುಖವೂ ಆದ ಸ್ಥಾನ ದೊರೆಯಿತು.

ಗಿಲಿಯೆರೋನ್ ತಾನೇ ಸ್ವತಃ ಭಾಷಾವಿಜ್ಞಾನಿಯಾಗಿದ್ದರೂ ಭಾಷಾವಿಜ್ಞಾನಿಗಳು ಧ್ವನಿಗಳನ್ನು ಸರಿಯಾಗಿ ಕೇಳಿ ಸರಿಯಾಗಿ ಲಿಪಿಗೆ ಇಳಿಸುವ ವಿಷಯದಲ್ಲಿ ಅವನಿಗೆ ತುಂಬಾ ಸಂದೇಹವಿತ್ತು. ಆದಕ್ಕಾಗಿ ಅವನು ಎಡ್ಮಂಡ್ ಎಂಬ ಭಾಷಾವಿಜ್ಞಾನದ ಪರಿಚಯವಿಲ್ಲದ ವ್ಯಾಪಾರಿಯನ್ನು (Field Work ನೇಮಿಸಿಕೊಂಡ. ಅವನಿಗೆ ಭಾಷಾವಿಜ್ಞಾನದ ಪರಿಚಯವಿಲ್ಲದ್ದರಿಂದ, ಯಾವ ಧ್ವನಿಯನ್ನೂ ನಿರೀಕ್ಷಿಸದೆ ಕೇಳಿದ ಧ್ವನಿಗಳನ್ನು ಯಥಾವತ್ತಾಗಿ ಲಿಪಿಗೆ ಇಳಿಸಬಲ್ಲನೆಂಬುದೇ ಅವನಿಗಿದ್ದ ದೊಡ್ಡ ಯೋಗ್ಯತೆ. ಎಡ್ಮಂಡನಿಗೆ ಅತಿಸೂಕ್ಷ್ಮ ಶ್ರವಣೇಂದ್ರಿಯವಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಗಿಲಿಯೆರೋನ್ 1,900 ಪದಗಳ ಒಂದು ಪ್ರಶ್ನಾವಳಿಯನ್ನು ತಯಾರಿಸಿದನು. ಅದರಲ್ಲಿ ಪದರಚನೆ, ವಾಕ್ಯರಚನೆ, ಶಬ್ದಕೋಶಗಳ ದೃಷ್ಟಿಯಿಂದ ವಿಷಯಸಂಗ್ರಹ ಮಾಡಲು ಅವಶ್ಯಕವಾದ ಅಂಶಗಳೆಲ್ಲವೂ ಇದ್ದುವು. ಹೊಸ ಹೊಸ ಪದಗಳು ಸಾಂಸ್ಕೃತಿಕ ಕೇಂದ್ರಗಳಿಂದ ಪ್ರಸಾರವಾಗುವ, ಅವುಗಳನ್ನು ಜನ ಸ್ವೀಕರಿಸುವ ಬಗೆಯ ವಿಷಯದಲ್ಲಿ ಅವನಿಗೆ ಬಹು ಆಸಕ್ತಿಯಿತ್ತು. 37,000 ಕೇಂದ್ರಗಳಲ್ಲಿ 639 ಕೇಂದ್ರಗಳನ್ನು ಪರಿವೀಕ್ಷಣೆಗೆ ಆರಿಸಿಕೊಂಡನು. ಹೀಗೆ ಆರಿಸಿಕೊಂಡ ಕೇಂದ್ರಗಳು ಫ್ರಾನ್ಸಿನ ಎಲ್ಲ ಉಪಭಾಷೆಗಳನ್ನು ಹೆಚ್ಚು ಕಡಿಮೆ ಒಳಗೊಂಡಿದ್ದುವು. ಎಡ್ಮಂಡ್ ಒಂದು ಕೇಂದ್ರದಿಂದ ಮತ್ತೊಂದು ಕೇಂದ್ರಕ್ಕೆ ತಾನೇ ಸ್ವತಃ ಹೋಗಿ ಪ್ರತಿ ಕೇಂದ್ರದಲ್ಲೂ ಒಬ್ಬೊಬ್ಬ ಪ್ರತಿವಕ್ತನಿಂದ (Informant) ಪ್ರಶ್ನಾವಳಿಯನ್ನವಲಂಬಿಸಿ ವಿಷಯವನ್ನು ಸಂಗ್ರಹಿಸಿ ಸಮರ್ಪಕವಾದ ಲಿಪಿಗೆ ಇಳಿಸಿ ತಕ್ಷಣವೇ ಗಿಲಿಯೆರೋನನಿಗೆ ಕಳುಹಿಸಿಕೊಡುತ್ತಿದ್ದನು. ಗಿಲಿಯೆರೋನ್ ಒಂದೇ ಕಡೆ ಇದ್ದು ಎಡ್ಮಂಡನಿಂದ ಬಂದ ಸಾಮಗ್ರಿಯನ್ನು ಅಭ್ಯಸಿಸಿ ಒಂದು ರೂಪಕ್ಕೆ ತರುತ್ತಿದ್ದನು. ಎಡ್ಮಂಡ್ ತಾನು ಸಂಗ್ರಹಿಸಿದ ಸಾಮಗ್ರಿಯನ್ನು

ತಕ್ಷಣವೇ ಕಳುಹಿಸಿಕೊಡುತ್ತಿದ್ದುದರಿಂದ ಸಾಮಗ್ರಿಯ ಪುನರವಲೋಕನಕ್ಕಾಗಲಿ ಮಾರ್ಪಡಿಸುವುದಕ್ಕಾಗಲಿ ಅವನಿಗೆ ಅವಕಾಶವೇ ಇರುತ್ತಿರಲಿಲ್ಲ. ಹೀಗಿರುವುದರಿಂದಲೇ ಪೃಚ್ಛಕನಾದವನು (Field Worker) ವಸ್ತುನಿಷ್ಠತೆಯನ್ನು ಕಾಪಾಡಿಕೊಂಡು ಬರುವುದು ಸಾಧ್ಯವೆಂದು ಗಿಲಿಯೆರೊನ್ ನಂಬಿದ್ದ. ಹೀಗೆ ಸಾಮಗ್ರಿಯ ಸಂಗ್ರಹದ ನಂತರ ಭಾಷೆಯ ಒಂದೊಂದು ಅಂಶಕ್ಕೂ ಅದರ ವ್ಯಾಪ್ತಿಯನ್ನು ತೋರಿಸುವ ಗೆರೆಗಳುಳ್ಳ ಪಟಗಳನ್ನು ಸಿದ್ಧಪಡಿಸಿದ. ಈ ಪಟಗಳು ಚರಿತ್ರಾರ್ಹವಾದುವು ಎಂದು ಎಲ್ಲೆಲ್ಲಿಂದಲೂ ಪ್ರಶಂಸೆಗಳು ಬಂದುವು. ಆದರೆ ತನ್ನ ನಾಡಾದ ಫ್ರಾನ್ಸಿನಲ್ಲಿ ಮಾತ್ರ ಗಿಲಿಯೆರೊನ್ ಕಟುಟೀಕೆಗೆ ಒಳಗಾಗಬೇಕಾಯ್ತು. ಅವನು ಟೀಕೆಗಳನ್ನು ಧೈರ್ಯವಾಗಿಯೇ ಎದುರಿಸಿದ, ಜಯಶೀಲನೂ ಆದ. ವ್ಯಕ್ತಿ ಮೊದಲು ಹೊರಗಿನವರಿಗೆ ದೊಡ್ಡವನೆಂದು ಕಂಡುಬಂದಮೇಲಲ್ಲವೇ ತನ್ನ ನಾಡಿನಲ್ಲಿ ದೊಡ್ಡವನೆಂದು ಅನ್ನಿಸಿಕೊಳ್ಳುವುದು ?

ಒಂದು ಭಾಷೆ ಸಿದ್ಧಗೊಳ್ಳುವುದರಲ್ಲಿ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಸನ್ನಿವೇಶಗಳ ಪಾತ್ರವನ್ನು ಗಿಲಿಯೆರೊನ್ ನಿರೂಪಿಸಿದನು. ಭಾಷೆಯ ಪರಿವರ್ತನೆಗೆ ಕಾರಣವನ್ನು ಬಾಹ್ಯ ಸನ್ನಿವೇಶಗಳಿಗಿಂತ ವ್ಯಕ್ತಿಯ ಮನಸ್ಸಿನಲ್ಲಿ ಹುಡುಕಬೇಕು ಎಂದು ಸಾರಿದ. ಇವನಿಂದ ಭಾಷೆ ಹೆಚ್ಚು ಮಾನವೀಯವೂ ಮಾನನೀಯವೂ ಆಯ್ತು. ಭಾಷೆಯ ಸಹಜ ಸ್ವರೂಪವನ್ನು ತೋರಿಸಿಕೊಟ್ಟ ಶ್ರೇಯಸ್ಸಿನಲ್ಲಿ ಬಹುಭಾಗ ಗಿಲಿಯೆರೊನನಿಗೆ ಸಲ್ಲಬೇಕು.

ನವ ಇಂಗ್ಲೆಂಡಿನಲ್ಲಿ (ನವ ಇಂಗ್ಲೆಂಡ್ = ಅಮೆರಿಕದ ಸಂಯುಕ್ತಸಂಸ್ಥಾನಗಳ ಪೂರ್ವ-ಉತ್ತರಭಾಗ) ನಡೆದ ಪರಿವೀಕ್ಷಣೆಗೆ ಬರುವ ಮುನ್ನ ಮತ್ತೊಂದು ಪರಿವೀಕ್ಷಣೆಯನ್ನು ಹೆಸರಿಸುವುದು ಅತ್ಯವಶ್ಯಕ. ಜೇಬರ್ಗ್ ಮತ್ತು ಜೂಡ್ ಎಂಬ ವಿದ್ವಾಂಸರು ಇಟಲಿ ಮತ್ತು ದಕ್ಷಿಣ ಸ್ವಿಟ್ಸರ್ಲೆಂಡಿನ ಪರಿವೀಕ್ಷಣೆಯನ್ನು ಕೈಗೊಂಡರು. ಅವರಿಗೆ ಭಾಷಾಪರಿವೀಕ್ಷಣೆಯು ಒಂದು ಸಾಂಸ್ಕೃತಿಕ ಪರಿವೀಕ್ಷಣೆಯೂ ಆಗಿತ್ತು. ಅವರು ಮಾಯವಾಗುತ್ತಿರುವ ಹಳೆಯ ಕಾಲದ ವ್ಯವಸಾಯದ ಉಪಕರಣಗಳು, ಪಾತ್ರೆಗಳು, ಮನೆಗಳು ಮುಂತಾದ ಪ್ರಾಚೀನ ವಸ್ತುಗಳ ಭಾವಚಿತ್ರಗಳನ್ನು ತೆಗೆದಿದ್ದಾರೆ, ಅಥವಾ ಅವುಗಳನ್ನು ರೇಖಾ ಚಿತ್ರಗಳಲ್ಲಿ ಹಿಡಿದಿಟ್ಟಿದ್ದಾರೆ.

ಇತ್ತೀಚೆಗೆ ನಡೆದ ಗಮನೀಯ ಪರಿವೀಕ್ಷಣೆಯೆಂದರೆ ಅಮೆರಿಕದ ಸಂಯುಕ್ತ ಸಂಸ್ಥಾನದ ಭಾಷಾವಿಜ್ಞಾನಿಗಳು ನವ ಇಂಗ್ಲೆಂಡಿನಲ್ಲಿ ಕೈಗೊಂಡದ್ದು. ಇವರಿಗಿದ್ದ ದೃಷ್ಟಿ ವೈಶಾಲ್ಯ, ಈ ಕೆಲಸಕ್ಕೆ ಮುಂದೆಬಂದ ಭಾಷಾಧ್ಯಯನದಲ್ಲಿ ನುರಿತಿದ್ದ ಪೃಚ್ಛಕರು, ಪ್ರತಿವಕ್ತೃರನ್ನು ಆರಿಸಿಕೊಳ್ಳುವಾಗ ತೋರಿಸಿದ ಎಚ್ಚರಿಕೆ—ಈ ಒಂದೊಂದು ವಿಷಯದಲ್ಲೂ ಈ ಪರಿವೀಕ್ಷಣೆ ಹಿಂದಿನ ಪರಿವೀಕ್ಷಣೆಗಳಿಗಿಂತ ಹೆಚ್ಚು ಸೌಕರ್ಯಗಳನ್ನು ಪಡೆದಿದೆಯೆನ್ನಬಹುದು. ತಮ್ಮ ಹಿಂದಿನವರ ಅನುಭವಸಂಪತ್ತನ್ನು ಇವರು ಬಳಸಿಕೊಂಡರು. ಸ್ಪಷ್ಟ ಉದಾಹರಣೆಗಳಿಂದ ನವ ಇಂಗ್ಲೆಂಡಿನ ಉಪಭಾಷೆಗಳ ವೈವಿಧ್ಯವನ್ನು ತೋರಿಸು

ವುದು ಅವರ ಉದ್ದೇಶಗಳಲ್ಲೊಂದು, ಭಾಷೆಯ ಪ್ರಾದೇಶಿಕತೆ ಮತ್ತು ಆ ಪ್ರದೇಶದ ಜನಾಂಗದ ಇತಿಹಾಸವನ್ನು[1] ಸವಿಸ್ತಾರವಾಗಿ ವಿವರಿಸುವುದು ಅವರ ಉದ್ದೇಶಗಳಲ್ಲಿ ಮತ್ತೊಂದು. ಕೈಗಾರಿಕೆಗಳ ಯುಗಕ್ಕಿಂತ ಮುನ್ನಿನ ಭಾಷೆಯ ವೈಶಿಷ್ಟ್ಯವನ್ನು ಚಿತ್ರಿಸಿ ಈ ಭಾಷೆಗೆ ಮೂಲವಾದ ಇಂಗ್ಲೆಂಡಿನ ಭಾಷೆಯೊಡನೆ ನವ ಇಂಗ್ಲೆಂಡಿನ ಭಾಷೆಯನ್ನು ಹೋಲಿಸಿ ಅವುಗಳಿಗಿರುವ ಪರಸ್ಪರ ಸಾದೃಶ್ಯ ವೈದೃಶ್ಯಗಳನ್ನು ನಿರೂಪಿಸುವುದೂ ಅವರ ಗುರಿಗಳಲ್ಲೊಂದಾಗಿತ್ತು. ಉಪಭಾಷಾ ಪರಿವೀಕ್ಷಣೆಗಾಗಿ ಅವರು ಅನುಸರಿಸಿದ ವಿಧಾನಗಳನ್ನು ಮುಂದೆ ಸ್ವಲ್ಪ ವಿಸ್ತಾರವಾಗಿ ನಿರೂಪಿಸಲಾಗಿದೆ.

ಯಾವ ಪ್ರದೇಶದಲ್ಲಿ ಪರಿವೀಕ್ಷಣೆಯನ್ನು ಕೈಗೊಳ್ಳಬೇಕೋ ಅಲ್ಲಿ ಭಾಷಾಪ್ರಭೇದಗಳ ಸಂಗ್ರಹಕ್ಕೆ ಕೆಲವು ಕೇಂದ್ರಗಳನ್ನು ಆರಿಸಿಕೊಳ್ಳಬೇಕು. ನವ ಇಂಗ್ಲೆಂಡಿನಲ್ಲಿ ಮಾರ್ಕಸ್ ಎಲ್. ಹ್ಯಾನ್ಸೆನ್ನನ ಇತಿಹಾಸ ಗ್ರಂಥದ ಸಹಾಯದಿಂದ ಪ್ರಾಸಂಗಿಕವಾಗಿ ಕೆಲವು ಕೇಂದ್ರಗಳನ್ನು ಗೊತ್ತುಮಾಡಲಾಯಿತು. ಈ ಕೇಂದ್ರಗಳು ಸುಮಾರು ಐದು ಮೈಲಿಯ ಅಂತರದಲ್ಲಿದ್ದುವು. ಉತ್ತರ ಭಾಗದಲ್ಲಿ ಜನಸಾಂದ್ರತೆಯು ವಿರಳವಾಗಿದ್ದುದರಿಂದ ಕೇಂದ್ರಗಳ ಅಂತರ ಇನ್ನೂ ಸ್ವಲ್ಪ ಹೆಚ್ಚಾಗಿತ್ತು. ಕೈಗಾರಿಕೆಗಳ ಯುಗಕ್ಕಿಂತ ಮುನ್ನಿನ ಭಾಷಾಸ್ಥಿತಿಯನ್ನು ಅರಿಯುವುದು ಇವರ ಗುರಿಗಳಲ್ಲೊಂದಾದ್ದರಿಂದ ಜನ ಮುಂಚೆ ಬಂದು ನೆಲಸಿದ ಪ್ರದೇಶಗಳಿಗೆ ಪ್ರಾಧಾನ್ಯವನ್ನು ಕೊಡಲಾಯಿತು. ಬೆಳೆಯುತ್ತಿರುವ ಕೈಗಾರಿಕೆಯ ಕೇಂದ್ರಗಳನ್ನು ಅಲಕ್ಷಿಸಿರಲಿಲ್ಲ. ಕೇಂದ್ರಗಳ ಆರಿಕೆ ಬಹುಮಟ್ಟಿಗೆ ಪ್ರಾಸಂಗಿಕವಾಗಿತ್ತು. ಏಕೆಂದರೆ ಪೃಚ್ಛಕರಾದವರಿಗೆ ಆರಿಸಿದ ಕೇಂದ್ರಗಳನ್ನು ಬಿಟ್ಟು ಬೇರೆ ಕೇಂದ್ರಗಳಲ್ಲಿ ಭಾಷಾಸಾಮಗ್ರಿಯನ್ನು ಪಡೆಯಬೇಕೆನ್ನಿಸಿದರೆ ಹಾಗೆ ಮಾಡುವ ಸ್ವಾತಂತ್ರ್ಯ ಅವರಿಗಿತ್ತು.

ಒಂದೊಂದು ಕೇಂದ್ರದಲ್ಲೂ ಪೃಚ್ಛಕನಾದವನು ಪ್ರತಿವಕ್ತರನ್ನು ಆರಿಸಿಕೊಂಡು ಅವರ ಭಾಷೆಯನ್ನು—ನ್ಯಾಯವಾಗಿ ನೋಡಿದರೆ ಅವರ ಸ್ವಂತಭಾಷೆಯನ್ನು (idiolect) —ಸಮರ್ಪಕ ಲಿಪಿಯಲ್ಲಿ ಹಿಡಿದಿಡಬೇಕು. ಪ್ರತಿ ಕೇಂದ್ರದಲ್ಲಿಯೂ ಮೂರು ರೀತಿಯ ಪ್ರತಿವಕ್ತರನ್ನು ಭೇಟಿಮಾಡಬೇಕೆಂದು ನಿರ್ಧರಿಸಿದ್ದರು. ಹುಟ್ಟಿದಂದಿನಿಂದ ತಮ್ಮ ಹುಟ್ಟೂರಿಂದ ಬಹು ದೂರ ಹೋಗದ, ಅನ್ಯರೊಡನೆ ಸಂಭಾಷಿಸುವಾಗ ತಮ್ಮ ಭಾಷೆಯನ್ನು ಹೆಚ್ಚು 'ನಾಗರಿಕ'ವಾಗಿಸಲು ಪ್ರಯತ್ನಿಸದ ಅವಿದ್ಯಾವಂತರಾದ ಹಳೆಯ ಕಾಲದ ಜನರೇ ಅತ್ಯುತ್ತಮ ಪ್ರತಿವಕ್ತರೆಂದು ಪರಿಗಣಿತರಾಗಿದ್ದರು. ಅಂಥವರ ವ್ಯಕ್ತಿಭಾಷೆ ತಕ್ಕಮಟ್ಟಿಗೆ ಅವರ ಭಾಷೆಯನ್ನು ಪ್ರತಿನಿಧಿಸಬಲ್ಲುದು. ಅವರು ಆ ರೀತಿಯಲ್ಲಲ್ಲದೆ ಬೇರೆ ರೀತಿಯಲ್ಲಿ ಮಾತನಾಡಲಾರರು. ಸಾಮಾನ್ಯವಾಗಿ ಹಳೆಯ ಕಾಲದ ಮನೆತನದ ಒಬ್ಬ ವಯಸ್ಕ ಅಥವಾ ಮುಗ್ಧಸ್ವಭಾವದ ಆದರೆ ಬುದ್ಧಿವಂತನಾದ ರೈತ ಅಥವಾ ರೈತನ

[1] ಒಂದು ಜನಾಂಗ ನವ ಇಂಗ್ಲೆಂಡಿಗೆ ಬಂದು 17, 18ನೇ ಶತಕಗಳಲ್ಲಿ ಹರಡಿದ್ದು, ಕೈಗಾರಿಕೆಗಳು ವೃದ್ಧಿಸಿ ವಿದ್ಯಾಕೇಂದ್ರಗಳು ಪ್ರಬಲಿಸಿದ್ದರಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಜನಾಂಗ ಚದುರಿದ್ದು—ಇದೇ ಆ ಜನಾಂಗದ ಇತಿಹಾಸ.

ಹೆಂಡತಿ—ಇಂಥವರನ್ನೇ ಆರಿಸಿಕೊಳ್ಳಬೇಕಾಗಿತ್ತು. ಪಟ್ಟಣಗಳಲ್ಲಾದರೆ ಒಬ್ಬ ಕಾರ್ಮಿಕ ಅಥವಾ ವ್ಯಾಪಾರಿ ಅಥವಾ ಅಂಗಡಿಯ ಮಾಲೀಕ. ಈ ವರ್ಗದ ಪ್ರತಿವಕ್ತನ ವಯಸ್ಸು ಸುಮಾರು ಎಪ್ಪತ್ತು ಅಥವಾ ಎಂಬತ್ತು. ಬಹುಕಾಲ ತನ್ನ ಹುಟ್ಟಿದೂರಲ್ಲೇ ಕಾಲ ಕಳೆದು ತಕ್ಕಮಟ್ಟಿಗೆ ವಿದ್ಯಾಭ್ಯಾಸವನ್ನು ಮಾಡಿ ತಕ್ಕಮಟ್ಟಿಗೆ ಪ್ರಯಾಣ ಮಾಡಿರುವ ಮಧ್ಯ ವಯಸ್ಸಿನ ಗಂಡಸು ಅಥವಾ ಹೆಂಗಸು ಎರಡನೆಯ ವರ್ಗದ ಪ್ರತಿವಕ್ತ. ಕಾಲೇಜ್ ವಿದ್ಯಾಭ್ಯಾಸ ಮಾಡಿ ಹೆಚ್ಚು ನಾಗರಿಕನಾಗಿರುವ ವ್ಯಕ್ತಿಯೇ ಮೂರನೆಯ ವರ್ಗದ ಪ್ರತಿವಕ್ತ. ಇಂತಹ ವ್ಯಕ್ತಿಗಳ ಭಾಷೆಯ ಅಭ್ಯಾಸದಿಂದ ನಾಗರಿಕ ಭಾಷೆಯ ಉಪಭಾಷೆಗಳನ್ನು ವರ್ಗೀಕರಿಸಲು ಸಾಧ್ಯವಾಗುತ್ತದೆ. ಅತಿಯಾಗಿ ಪ್ರವಾಸ ಮಾಡಿರುವ ವ್ಯಕ್ತಿಗಳನ್ನು ಪ್ರತಿವಕ್ತರನ್ನಾಗಿ ಆರಿಸಿಕೊಳ್ಳಲೇಕೂಡದೆಂದು ಎಚ್ಚರಿಕೆಯನ್ನು ನೀಡಿದ್ದರು.

ಪರಿವೀಕ್ಷಣೆಯ ಜಯವು ಅದಕ್ಕಾಗಿ ಬಳಸುವ ಪ್ರಶ್ನಾವಳಿಯ ಮೇಲೆ ಬಹುಮಟ್ಟಿಗೆ ನಿಂತಿದೆ. ಧ್ವನಿಗಳು, ಪದರಚನೆ, ಪದಕೋಶ (Vocabulary) ಮುಂತಾದುವುಗಳು ಒಂದೊಂದು ಉಪಭಾಷೆಯಲ್ಲೂ ಸ್ವಲ್ಪ ಭಿನ್ನವಾಗಿರುವುದರಿಂದ ಅಮೇರಿಕದ ಉಪಭಾಷೆಗಳ ಪ್ರಾದೇಶಿಕ ಪದಗಳ ಪಟ್ಟಿಯನ್ನು ಮುಂದಿಟ್ಟುಕೊಂಡು ಪ್ರಶ್ನಾವಳಿಯನ್ನು ಸಿದ್ಧಪಡಿಸಿದರು. ಈ ಪರಿವೀಕ್ಷಣೆಯ ಪ್ರಧಾನ ಸಂಪಾದಕರಾದ ಕುರಾತ್ ಹೇಳುತ್ತಾರೆ— "ವ್ಯವಸಾಯ, ಗೃಹಕೈಗಾರಿಕೆಗಳು ಮುಂತಾದ ವೃತ್ತಿಗಳ ಪದಕೋಶದ ಸ್ವಲ್ಪ ಭಾಗವನ್ನು ಪ್ರಶ್ನಾವಳಿಯಲ್ಲಿ ಸೇರಿಸಿದ್ದೇವೆ. ಆಹಾರ, ಬಟ್ಟೆಬರೆ, ವಾಸ, ಆರೋಗ್ಯ, ಹೊಲ, ಮರಮುಟ್ಟು—ಇವೇ ಸಾಮಾನ್ಯ ಜನತೆಯ ಅಂತರಂಗಕ್ಕೆ ಸಮೀಪವಾದ ವಿಷಯಗಳು. ಉಪಭಾಷೆಗಳ ರಚನೆಯ ಮೇಲೆ ಬೆಳಕು ಬೀರಬಲ್ಲುದೆಂದರೆ ಇಂತಹ ಪದಸಂಗ್ರಹವೇ. ನಮ್ಮ ಪರಿವೀಕ್ಷಣೆಯಲ್ಲಿ ಬಹುತೇಕ ಬಳಸಿರುವುದು ಅಮೇರಿಕದ ಪದಕೋಶದ ಈ ಭಾಗವನ್ನೇ."

ಪ್ರಶ್ನಾವಳಿಯನ್ನು ಕುಶಲತೆಯಿಂದ ಬಳಸಬೇಕಾದವರು ಪೃಚ್ಛಕರಾದುದರಿಂದ ಪೃಚ್ಛಕರ ತರಬೇತಿಗೆ ಸಾಕಷ್ಟು ಗಮನವನ್ನು ಕೊಟ್ಟರು. ಈ ಪರಿವೀಕ್ಷಣೆಯಲ್ಲಿ ಅನೇಕ ಹಿರಿಯ ಭಾಷಾವಿಜ್ಞಾನಿಗಳೇ ಪೃಚ್ಛಕರಾಗಿದ್ದರು. ಆದರೂ ಒಬ್ಬ ವ್ಯಕ್ತಿ ಧ್ವನಿವಿಜ್ಞಾನದಲ್ಲಿ (Phonetics) ಎಷ್ಟೇ ಪರಿಣತನಾಗಿದ್ದರೂ ಅವನ ಮಾತೃಭಾಷೆಯ ಧ್ವನಿಗಳೇ ಅವನ ಕಿವಿಯಲ್ಲಿ ನಿಂತು ಅವನು ಕೇಳುವ ಧ್ವನಿಗಳನ್ನು ಮಾರ್ಪಡಿಸಿಬಿಡುತ್ತವೆ. ತನಗೆ ಅಪರಿಚಿತವಾದ ಧ್ವನಿಗಳನ್ನು ಪರಿಚಿತ ಧ್ವನಿಗಳಾಗಿ ಮನುಷ್ಯನ ಕಿವಿ ಮಾರ್ಪಡಿಸಿಬಿಡುತ್ತದೆ. ಹೀಗೆ ವ್ಯಕ್ತಿ ವ್ಯಕ್ತಿಗೆ ಇರಬಹುದಾದ ಶ್ರವಣ ವ್ಯತ್ಯಾಸಗಳನ್ನು ಆದಷ್ಟು ಕನಿಷ್ಠ ಪ್ರಮಾಣಕ್ಕಿಳಿಸುವ ಉದ್ದೇಶದಿಂದ ಎಲ್ಲ ಪೃಚ್ಛಕರಿಗೂ ಆರು ವಾರಗಳ ಶ್ರಮಸಾಧ್ಯವಾದ ಧ್ವನಿ ಶಿಕ್ಷಣವನ್ನು ಕೊಟ್ಟರು. ಸಿದ್ಧಪಡಿಸಿದ ಪ್ರಶ್ನಾವಳಿಯನ್ನು ಈ ಸಮಯದಲ್ಲಿಯೇ ಪ್ರಾಯೋಗಿಕವಾಗಿ ಬಳಸಿದರು. ದೇಶದ ನಾನಾ ಭಾಗಗಳಿಂದ ಬಂದ ಕೆಲವು ಪ್ರತಿವಕ್ತರನ್ನು ಕಂಡು ಮಾತನಾಡಿದ ಮೇಲೆ ಪ್ರಶ್ನಾವಳಿಯಲ್ಲಿ ಅನೇಕ ಬದಲಾವಣೆಗಳನ್ನು ಮಾಡಬೇಕಾಗಿ ಬಂದಿತು. ಕೆಲವು ಅಂಶಗಳಿಗೆ ಪ್ರತಿ

ವಕ್ತರಿಂದ ಪ್ರತಿಕ್ರಿಯೆಯನ್ನು ಪಡೆಯುವುದು ಅಸಾಧ್ಯವಾಗಿ ಕಂಡುಬಂದದ್ದರಿಂ
ಕೆಲವು ಅಂಶಗಳಿಗೆ ಪರಸ್ಪರ ವ್ಯತ್ಯಾಸಗಳನ್ನರಿಯುವುದೇ ಪ್ರಯಾಸಕರವೆ
ತೋರಿಬಂದದ್ದರಿಂದ, ಅಂತಹ ಅಂಶಗಳನ್ನು ಪ್ರಶ್ನಾವಳಿಯಿಂದ ತೆಗೆದುಹಾಕಿದ
ಪ್ರಾದೇಶಿಕ ವ್ಯತ್ಯಾಸಗಳನ್ನು ಚೆನ್ನಾಗಿ ಗುರುತಿಸಲು ಸಹಾಯಕವಾದ ಅನೇಕ ಅ
ಗಳನ್ನು ಪ್ರಶ್ನಾವಳಿಗೆ ಹೊಸದಾಗಿ ಸೇರಿಸಿದರು. ಸಂಖ್ಯೆಗಳು, ಕಾಲಗಳು, ಪಾತ್ರೆಗ
ಉಪಕರಣಗಳು, ಕ್ರಿಯಾವಿಶೇಷಣಗಳು ಮತ್ತು ಸಮುಚ್ಚಯಗಳು, ಸಾಮಾಜಿಕ ಜೀ
ಮತ್ತು ಸಂಸ್ಥೆಗಳು, ಕೊನೆಗೆ ಉದ್ಗಾರಗಳು—ಇವೇ ಮುಂತಾದುವಕ್ಕೆ ಸಂಬಂಧಿ
ಪದಗಳೇ ಪ್ರಶ್ನಾವಳಿಯಲ್ಲಿದ್ದುವು.

ಪ್ರಶ್ನಾವಳಿಯ ಸಹಾಯದಿಂದ ಭಾಷೆಯ ಸ್ವರೂಪವನ್ನು ಪಡೆಯುವ ಕಾರ್ಯ
ಯಶಸ್ಸು ಪೃಚ್ಛಕನ ವ್ಯಕ್ತಿತ್ವ, ಅವನು ಪ್ರತಿವಕ್ತರನ್ನು ಸಮೀಪಿಸುವ ರೀತಿಗಳ ಮೇ
ಬಹುಮಟ್ಟಿಗೆ ನಿಂತಿದೆ. ಪ್ರಶ್ನಾವಳಿಯ ಸಹಾಯದಿಂದ ಪೃಚ್ಛಕ ಕೇಳಿದ ಪ್ರಶ್ನೆಗಳಿಗೆ ಪ್ರ
ವಕ್ತರು ತಮ್ಮ ಭಾಷೆಯ ಅಂಶಗಳನ್ನು ತಿಳಿಸುವುದು ಸಾಮಾನ್ಯವಾಗಿದ್ದರೂ, ಪೃ
ಕನಿಗೆ ಅವರಿಂದ ಬೇಕಾದ ಧ್ವನಿಯನ್ನೋ ಪದವನ್ನೋ ಅವರಿಗೆ ಅರಿವಿಲ್ಲದೆಯೇ ಸಂಭಾ
ಣೆಯ ಸಮಯದಲ್ಲಿ ಅವರಿಂದ ಪಡೆಯುವ ವಿಧಾನವೇ ಅತ್ಯುತ್ತಮವಾದುದೆಂದು ಎಲ್ಲರ
ಒಪ್ಪಿದರು. ಉದಾಹರಣೆಗೆ ಯಾವುದೋ ವಸ್ತುವನ್ನು ತೋರಿಸಿ ಅದಕ್ಕೆ ಆ ಉಪಭಾ
ಯಲ್ಲಿರುವ ಪದ ಯಾವುದು ಎಂದು ಪ್ರಶ್ನಿಸುವುದಕ್ಕಿಂತ ಸಂಭಾಷಣೆಯಲ್ಲಿ ಆ ವಸ
ವಿನ ಹೆಸರು ಅವನ ಬಾಯಿಂದ ಬಂದರೆ ಆ ಪದ ತನ್ನ ಸಹಜ ಉಚ್ಚಾರಣೆಯೊ
ಬರುವುದು ಸಹಜವೇ. ಒಂದು ಪದವನ್ನು ಉಚ್ಚರಿಸಬೇಕಾಗುತ್ತದೆ ಎಂಬುದು ಪ್ರತಿವ
ನಿಗೆ ಗೊತ್ತಾಗಿಬಿಟ್ಟರೆ ಅವನು ಪದವನ್ನು ವಿರೂಪಗೊಳಿಸಿಬಿಡಬಹುದು; ಅವ
ಅದನ್ನು 'ನಾಗರಿಕ'ವಾಗಿ ಉಚ್ಚರಿಸಲು ಪ್ರಯತ್ನಿಸಬಹುದು. ಪ್ರತಿವಕ್ತರ ಅರಿವಿಲ್ಲ
ಸಂಭಾಷಣೆಯ ಸಮಯದಲ್ಲಿ ಪಡೆದ ಶಿಷ್ಟೇತರ ವ್ಯಾಕರಣರೂಪಗಳು, ರಚನೆಗಳ
ಪದಪುಂಜಗಳನ್ನೇ ಪೃಚ್ಛಕರು ಅಮೂಲ್ಯವೆಂದು ಭಾವಿಸುವುದು. ಪೃಚ್ಛಕರ ಪ್ರಶ್ನೆಗಳ
ಪ್ರತಿವಕ್ತ ತಕ್ಷಣವೇ ಪ್ರತಿಕ್ರಿಯೆಯನ್ನು ತೋರಿಸದಿದ್ದರೆ ಅವನನ್ನು ಬಲವಂತಪಡಿ
ಕೂಡದೆಂದು ಸೂಚನೆಗಳನ್ನು ಕೊಡಲಾಗಿತ್ತು. ಪ್ರತಿವಕ್ತರಿಗೆ ಸೂಚನೆಗಳನ್ನು ಕೊ
ಕೂಡದು, ಆದರೆ ಅತ್ಯವಶ್ಯಕವೆಂದು ಕಂಡುಬಂದಾಗ ಮಾತ್ರ ಕೊಡಬಹುದಿತ್ತು. ಹೀ
ಸೂಚಿಸಿ ಹಿಂದಕ್ಕೆ ಪಡೆದ ಪ್ರತಿಕ್ರಿಯೆಗಳನ್ನು ಸ್ವಲ್ಪ ಸಂದೇಹದಿಂದಲೇ ಸ್ವೀಕರಿಸಿ
ಅವುಗಳನ್ನು ಮತ್ತೊಮ್ಮೆ ಪಡೆದು ಪರೀಕ್ಷಿಸಬೇಕಿತ್ತು. ತಮ್ಮ ಹಿರಿಯರು ಹೀ
ಉಚ್ಚರಿಸುತ್ತಿದ್ದುದನ್ನು ನಾವು ಕೇಳಿ ಬಲ್ಲೆವು ಎಂದೇನಾದರೂ ಹೇಳಿದರೆ ಅದನ್
ಲೇಖಿಸಬೇಕು; ಏಕೆಂದರೆ ಅಂತಹ ಉಚ್ಚಾರಣೆಗಳ ಸಹಾಯದಿಂದ ಕೈಗಾರಿಕೆಗ
ಯುಗಕ್ಕಿಂತ ಮುನ್ನಿನ ಭಾಷಾಸ್ವರೂಪವನ್ನರಿಯಲು ಸಹಾಯವಾಗಬಹುದು. ಪ್ರ
ಕ್ರಿಯೆಗಳನ್ನು ಪಡೆದ ರೀತಿಗಳನ್ನು ಸೂಚಿಸಲು ಬೇರೆ ಬೇರೆ ಸಂಕೇತಗಳನ್ನು ಬಳಸಿದರ
ಉದಾಹರಣೆಗೆ ಸಂಭಾಷಣೆಯ ರೂಪದಲ್ಲಿ ಪಡೆದಿದ್ದಕ್ಕೆ (c), ಪೃಚ್ಛಕ ಸೂಚಿಸಿದ್ದ

s), ಉತ್ತರ ಹೇಳುವ ಮುನ್ನ ಪ್ರತಿವಕ್ತ ಅನುಮಾನಿಸಿದ್ದರೆ (:) ಇತ್ಯಾದಿ. ಒಟ್ಟಿನಲ್ಲಿ ಇಂತಹ ಪರಿವೀಕ್ಷಣೆ ಸಫಲವಾಗುವುದು ಪೃಚ್ಛಕರ ನಿರ್ದುಷ್ಟತೆ ಮತ್ತು ಎಚ್ಚರಿಕೆಗಳಿಂದ.

ಹೀಗೆ ಒಂದೊಂದು ಕೇಂದ್ರಕ್ಕೂ ಹೋಗಿ ಪ್ರತಿವಕ್ತರಿಂದ ಪ್ರತಿಕ್ರಿಯೆಗಳನ್ನು ಪಡೆದುಕೊಂಡು ಬಂದನಂತರ, ಪ್ರಶ್ನಾವಳಿಯಲ್ಲಿನ ಒಂದೊಂದು ಅಂಶಕ್ಕೂ—ಧ್ವನಿಗಳು, ಪದಗಳು, ರಚನೆಗಳು ಇತ್ಯಾದಿ—ಅದರ ವ್ಯಾಪ್ತಿಯನ್ನು ತೋರಿಸುವ ಗೆರೆಯನ್ನೆಳೆಯಬೇಕು. ಈ ಗೆರೆಗಳನ್ನೇ ಹಿಂದೆ 'ಸೀಮಾರೇಖೆ' (Isogloss) ಎಂದು ಕರೆದದ್ದು. ಎಲ್ಲ ಅಂಶಗಳಿಗೂ ಗೆರೆಗಳನ್ನೆಳೆದಾಗ ಒಂದು ಭಾಷಾಪ್ರದೇಶದಲ್ಲಿ ಈ ಗೆರೆಗಳು ಅಸ್ತವ್ಯಸ್ತವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹರಿದಿರುತ್ತವೆ. ಮಧ್ಯೆ ನಿಂತುಹೋಗುವ ಗೆರೆಗಳಿಗಿಂತ ಒಂದು ಪ್ರದೇಶವನ್ನು ಸ್ಪಷ್ಟವಾಗಿ ಇಬ್ಭಾಗಮಾಡುವ ಗೆರೆಗಳಿಗೇ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಾಗುತ್ತದೆ. ಕೆಲವು ಸಾರಿ ಇಂತಹ ಗೆರೆಗಳು ಒಟ್ಟೊಟ್ಟಿಗೆ ಹರಿದು ಒಂದು ಭಾಷಾಪ್ರದೇಶವನ್ನು ಅನೇಕ ಭಾಗಗಳಾಗಿ ವಿಂಗಡಿಸಬಹುದು. ಹೀಗೆ ಹರಿದ ಗೆರೆಗಳ ಒಂದು ಕಟ್ಟು ಉಪಭಾಷೆಯ ಸ್ಥೂಲವಾದ ಗಡಿಯೆನ್ನಬಹುದು. ಉದಾಹರಣೆಗೆ ಜರ್ಮನ್ ಭಾಷಾಪ್ರದೇಶದಲ್ಲಿ ಬೇರೆ ಬೇರೆ ಅಂಶಗಳ ವ್ಯಾಪ್ತಿಯನ್ನು ತೋರಿಸುವ ಗೆರೆಗಳು ಹೆಚ್ಚು ಕಡಿಮೆ ಒಟ್ಟೊಟ್ಟಿಗೆ ಹರಿದು ಇಡೀ ಪ್ರದೇಶವನ್ನು ಇಬ್ಭಾಗ ಮಾಡುತ್ತವೆ. ಆ ಇಬ್ಭಾಗವಾದ ಪ್ರದೇಶದ ಉಪಭಾಷೆಗಳನ್ನು ಹೈ-ಜರ್ಮನ್ ಮತ್ತು ಲೋ-ಜರ್ಮನ್ (High-German and Low-German) ಎಂದು ಕರೆಯುತ್ತಾರೆ. ಹೀಗೆ ಉಪಭಾಷೆಗಳನ್ನು ವಿಂಗಡಿಸಿದರೆ ಅದು ಸ್ಥೂಲವಾದ ವಿಂಗಡಣೆ ಎಂಬುದನ್ನು ಮರೆಯಬಾರದು. ಉಪಭಾಷೆಗಳನ್ನು ಪ್ರತ್ಯೇಕಿಸುವ ಸ್ಪಷ್ಟ ಗಡಿಗಳು ಇಲ್ಲವಷ್ಟೇ ಅಲ್ಲ, ಒಂದು ಭಾಷೆಯನ್ನಾಡುವ ಜನ ಒಂದೇ ಕಡೆ ಇರದೆ ಅತ್ತ ಇತ್ತ ಚಲಿಸುತ್ತಲೇ ಇರುವುದರಿಂದ ಉಪಭಾಷೆಗಳ ಸ್ಥೂಲವಾದ ಗಡಿಗಳೂ ಚಲಿಸುತ್ತಲೇ ಇರುತ್ತವೆ.

ಒಂದು ಭಾಷೆಯ ಸಮಗ್ರವಾದ ಭೂಪಟವು ಆ ಭಾಷೆಯ ಉಪಭಾಷೆಗಳನ್ನು ತಿಳಿಸಿಕೊಡುವುದಲ್ಲದೆ, ಆ ಭಾಷಾಪ್ರದೇಶದಲ್ಲಿ ನಡೆಯುತ್ತಿರುವ ಸಾಮಾಜಿಕ ಸಾಂಸ್ಕೃತಿಕ ಚಟುವಟಿಕೆಗಳಿಗೂ ಕೈಗನ್ನಡಿಯಾಗಬಲ್ಲದು. ಆ ಪ್ರದೇಶದಲ್ಲಿ ನಡೆಯುತ್ತಿರುವ ವಾಣಿಜ್ಯ, ವಿದ್ಯಾಭ್ಯಾಸದಲ್ಲಿ ಪ್ರಗತಿ, ಅನ್ಯಭಾಷೆ ಸಂಸ್ಕೃತಿಗಳ ಪ್ರಭಾವ ಇವುಗಳನ್ನೂ ಅರಿಯಬಹುದು. ಒಟ್ಟಿನಲ್ಲಿ ಆ ದೇಶದ ಮಾನಸಿಕ ವ್ಯವಹಾರಗಳ ಪಟವೂ ಆಗಬಲ್ಲುದು ಭಾಷಾಭೂಪಟ.

ಇಲ್ಲಿಯುವರೆಗೆ ಭೌಗೋಳಿಕವಾಗಿ ಹರಡಿಕೊಂಡಿರುವ ಉಪಭಾಷೆಗಳ ವಿಷಯವನ್ನು ಕುರಿತು ಚರ್ಚೆಯನ್ನು ಮಾಡಿದ್ದಾಯಿತು. ಎಂದರೆ ಒಂದು ವಿಸ್ತಾರವಾದ ಪ್ರದೇಶದಲ್ಲಿ ಹರಡಿರುವ ಭಾಷೆಯ ಅನೇಕ ಪ್ರಭೇದಗಳು, ಅವುಗಳನ್ನು ಗುರುತಿಸುವ ಬಗೆ ಇತ್ಯಾದಿಗಳನ್ನು ಇಲ್ಲಿಯುವರೆಗೆ ನೋಡಿದ್ದೇವೆ. ಭಾಷೆಯಲ್ಲಿ ಹೀಗೆ ಭೌಗೋಳಿಕ ಅಥವಾ ಪ್ರಾದೇಶಿಕ ವ್ಯತ್ಯಾಸಗಳಿರುವಂತೆಯೇ (Regional Variat ons) ಸಾಮಾಜಿಕ

ವ್ಯತ್ಯಾಸಗಳೂ ಇರುವುದುಂಟು. ಎಂದರೆ ಒಂದೇ ಪ್ರದೇಶದಲ್ಲಿ ವಾಸಿಸುವ ಬೇರೆ ಬೇ ಜಾತಿಯ, ಬೇರೆ ಬೇರೆ ವೃತ್ತಿಗಳನ್ನವಲಂಬಿಸಿರುವ ವರ್ಗಗಳಲ್ಲಿ ಬೇರೆ ಬೇರೆ ಉಪಭಾ ಗಳು ಬಳಕೆಯಲ್ಲಿರುತ್ತವೆ. ಉದಾಹರಣೆಗೆ ಒಂದು ಊರಿನಲ್ಲಿ ವಾಸಿಸುತ್ತಿರು ಬ್ರಾಹ್ಮಣರು, ರೈತರು, ಮಡಿವಾಳರು, ಚಮ್ಮಾರರು, ಕುಂಬಾರರು, ಅಕ್ಕಸಾಲಿಗರ ಇತ್ಯಾದಿ ಜನರು ಆಡುವ ಮಾತುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರ ಒಂದೊಂದು ವರ್ಗವೂ ಪ್ರತ್ಯೇಕ ಉಪಭಾಷೆಯನ್ನು ಆಡುವುದನ್ನು ಗುರುತಿಸಬಹುದ ಇವುಗಳನ್ನು **ಸಾಮಾಜಿಕ ಉಪಭಾಷೆಗಳು** (Social Dialects) ಎಂದು ಕರೆಯ ಬಹುದು. ಈ ಉಪಭಾಷೆಗಳು ಸ್ವಲ್ಪಮಟ್ಟಿಗೆ ಉಚ್ಚಾರಣೆಯ ದೃಷ್ಟಿಯಿಂದಲೂ ಭಿನ್ ವಾಗಿರಬಹುದು. ಆದರೆ ಅವು ಶಬ್ದಗಳ ದೃಷ್ಟಿಯಿಂದ ಪರಸ್ಪರ ಬಹಳವಾಗಿ ಭಿನ ವಾಗಿರುತ್ತವೆ. ಕಾಲ್ಪನಿಕವಾದ ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ ಒಂದು ಊರಿನಲ್ಲಿ ವಾಸಿಸುತ್ತಿರುವ ಬ್ರಾಹ್ಮಣರು ಆಡುವ ಭಾಷೆ ಉಳಿದ ಜನರ ಭಾ ಗಿಂತ ಭಿನ್ನವಾಗಿರುತ್ತದೆ. ಅವರ ಉಪಭಾಷೆ ಎದ್ದು ಕಾಣಿಸುವಂತಹುದು. ಉಳಿದ ಪಂಗಡಗಳು ಅನೇಕ ವೃತ್ತಿಗಳನ್ನವಲಂಬಿಸಿರುತ್ತವೆ. ಈ ಬೇರೆ ಬೇರೆ ಪಂಗಡಗಳ ಜನರು ಪರಸ್ಪರ ಕಲೆತು ಮಾತನಾಡುತ್ತಿರುವಾಗ ಅವರ ಭಾಷೆಗಳಲ್ಲಿ ಅಷ್ಟು ವ್ಯತ್ಯಾಸ ಗಳು ಕಂಡುಬರದೇ ಇದ್ದರೂ ಸ್ವಲ್ಪಮಟ್ಟಿಗಾದರೂ ವ್ಯತ್ಯಾಸಗಳು ಇರಲು ಸಾಧ್ಯ ಒಂದು ಜಾತಿಯಲ್ಲಿಯೇ ಪುರೋಹಿತವರ್ಗ, ಭಕ್ತವರ್ಗಗಳು ಆಡುವ ಮಾತುಗಳು ಸ್ವಲ್ಪ ಬೇರೆಬೇರೆಯಾಗುವುದುಂಟು. ಆದರೆ ಆ ಪಂಗಡಗಳ ಜನರು ತಾವೇ ಪ್ರತ್ಯೇಕವಾಗಿ ಕಲೆತಾಗ, ಅವರೆಲ್ಲರೂ ಒಟ್ಟಿಗೆ ಕೂಡಿ ತಮ್ಮ ಕೆಲಸವನ್ನು ಮಾಡುತ್ತಿರುವಾಗ ಆಡುವ ಉಪಭಾಷೆ ಇತರ ಪಂಗಡಗಳ ಉಪಭಾಷೆಗಳಿಗಿಂತ ಬಹುವಾಗಿ ಭಿನ್ನವಾಗಿರುತ್ತದೆ. ಅವರು ತಮ್ಮ ವೃತ್ತಿಗೆ ಮಾತ್ರ ಸಂಬಂಧಿಸಿದ ನೂರಾರು ಪದಗಳನ್ನು ಬಳಸುತ್ತಾರೆ. ಆ ಪದಗಳಲ್ಲಿ ಎಷ್ಟೋ ಪದಗಳು ಇತರರಿಗೆ ಅರ್ಥವಾಗದೇ ಹೋಗಬಹುದು. ಉದಾಹರಣೆಗೆ ಮೇದರು ತಾವೇ ಒಟ್ಟಿಗೆ ಕಲೆತು ಮಾತನಾಡಿದಾಗ ಆಡಿದ ಭಾಷೆ ನೇಕಾರರಿಗೆ ಪೂರ್ತಿ ತಿಳಿಯದೇ ಹೋಗಬಹುದು. ಆದ್ದರಿಂದ ನಾವು ಸಾಮಾಜಿಕ ಉಪಭಾಷೆಗಳಿವೆಯೆಂಬು ಧನ್ನು ಒಪ್ಪಬೇಕಾಗುತ್ತದೆ.

ಕನ್ನಡದ ಉಪಭಾಷೆಗಳ ವಿಷಯವಾಗಿ ಕೆಲವು ಸಂಗತಿಗಳನ್ನು ಇಲ್ಲಿ ಹೇಳಬಹುದು; ಆ ಸಂಬಂಧವಾಗಿ ಇನ್ನೂ ಕೆಲಸವು ಆಗಬೇಕಾಗಿದೆ. ಸಾಕಷ್ಟು ವಿಸ್ತಾರವಾಗಿರುವ ಕರ್ನಾಟಕದಲ್ಲಿ ಮೊದಲಿನಿಂದಲೂ ಉಪಭಾಷೆಗಳಿದ್ದಿರಬೇಕು. ನೃಪತುಂಗನು ಹೇಳುವ ದಕ್ಷಿಣಮಾರ್ಗ, ಉತ್ತರಮಾರ್ಗಗಳು ಸ್ವಲ್ಪಮಟ್ಟಿಗೆ ಅವನ ಕಾಲದ (ಒಂಬತ್ತನೆಯ ಶತಮಾನ) ಪ್ರಾದೇಶಿಕ ಭಾಷಾ ವೈಲಕ್ಷಣ್ಯಗಳನ್ನೂ ಸೂಚಿಸುತ್ತವೆ. ಈಗಲಂತೂ ಕನ್ನಡದ ಉಪಭಾಷೆಗಳು ಸ್ಪಷ್ಟವಾಗಿ ಎದ್ದು ಕಾಣುತ್ತಿವೆ. ಅವುಗಳ ಸಂಖ್ಯೆ, ಸ್ಥೂಲ ಗಡಿಗಳು ಇನ್ನೂ ನಿರ್ಧಾರವಾಗಬೇಕಾಗಿದೆ. ಆ ವಿಷಯವಾಗಿ ಪರಿವೀಕ್ಷಣೆ ನಡೆದು ಉಪಭಾಷಾ ಭೂಪಟಗಳು ನಿರ್ಮಾಣವಾಗುವವರೆಗೆ ಖಚಿತವಾಗಿ ಏನು ಹೇಳಲೂ

ಸಾಧ್ಯವಿಲ್ಲ. ಆದರೂ ನಮ್ಮ ಅನುಭವಕ್ಕೆ ಬಂದಿರುವ ಸ್ಥೂಲವಾದ ಕೆಲವು ಸಂಗತಿಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಮಾಡಬಹುದು.

ಕನ್ನಡವಲ್ಲಿ ಮುಖ್ಯವಾಗಿ ನಾಲ್ಕು ಉಪಭಾಷೆಗಳನ್ನು ಗುರುತಿಸಬಹುದು. ಮೈಸೂರು ಉಪಭಾಷೆ, ಧಾರವಾಡ ಉಪಭಾಷೆ, ಹೈದರಾಬಾದ್ ಉಪಭಾಷೆ, ಮಂಗಳೂರು ಉಪಭಾಷೆ. ಇವುಗಳಲ್ಲಿ ಹೈದರಾಬಾದ್ ಉಪಭಾಷೆಯನ್ನು ಗುಲ್ಬರ್ಗ ಉಪಭಾಷೆಯೆಂದು ಕರೆಯುವುದು ಈಗಲಂತೂ ಹೆಚ್ಚು ಸೂಕ್ತವಾದುದು.[1] ಇವುಗಳಲ್ಲಿ ಮಂಗಳೂರು ಕನ್ನಡ ಮತ್ತು ಮೈಸೂರು ಕನ್ನಡಗಳು ಹೆಚ್ಚು ಸಮೀಪದಲ್ಲಿವೆ ಮತ್ತು ಹೆಚ್ಚು ಸದೃಶವಾಗಿವೆ; ಧಾರವಾಡದ ಕನ್ನಡ ಮತ್ತು ಗುಲ್ಬರ್ಗ ಕನ್ನಡಗಳು ಸಮೀಪದಲ್ಲಿವೆ ಮತ್ತು ಪರಸ್ಪರ ಹೆಚ್ಚು ಸದೃಶವಾಗಿವೆ. ಒಂದು ಭಾಷೆಯಲ್ಲಿ ಉಪಭಾಷೆಗಳು ಕವಲೊಡೆಯಲು ಭೌಗೋಳಿಕ ಕಾರಣಗಳೂ ರಾಜಕೀಯ ಕಾರಣಗಳೂ ಪರಭಾಷಾ ಸಂಪರ್ಕಗಳೂ ಮುಖ್ಯ ಕಾರಣಗಳೆನ್ನುತ್ತಾರೆ. ಕನ್ನಡದ ಮುಖ್ಯ ಉಪಭಾಷೆಗಳು ಏರ್ಪಡಲು ಇವು ಮೂರೂ ಕೆಲಸಮಾಡಿರುವಂತೆ ಕಾಣುತ್ತದೆ. ಪಶ್ಚಿಮದಲ್ಲಿ ಪಶ್ಚಿಮ ಘಟ್ಟಗಳು; ಉತ್ತರದಲ್ಲಿ ತುಂಗಭದ್ರಾ ನದಿ ಇವು ಉಪಭಾಷೆಗಳನ್ನು ಸ್ಥೂಲವಾಗಿ ನಿರ್ಧರಿಸಿರುವಂತೆ ಕಾಣುತ್ತದೆ. ಇವುಗಳಿಗಿಂತ ರಾಜಕೀಯ ಕಾರಣಗಳು ಹೆಚ್ಚು ಕೆಲಸಮಾಡಿವೆ. ಧಾರವಾಡದ ಪ್ರಾಂತವು ಬೊಂಬಾಯ್ ಸರ್ಕಾರದ ಆಡಳಿತದಲ್ಲಿದ್ದಿತು. ಆದ್ದರಿಂದ ಅವರಿಗೆ ದಕ್ಷಿಣ ಕರ್ನಾಟಕದ ಸಂಪರ್ಕವು ಕಡಿಮೆಯಾಗಿ, ಅಲ್ಲಿಯ ಜನರು ಮರಾಠಿ ಭಾಷೆಯ ಪ್ರಭಾವಕ್ಕೆ ಒಳಗಾದರು. ಹೀಗೆ ಧಾರವಾಡದ ಕನ್ನಡದ ಮೇಲೆ ಮರಾಠಿಯ ಪ್ರಭಾವವಿದೆ. ಗುಲ್ಬರ್ಗ ಪ್ರಾಂತವು (ಹಿಂದಿನ) ಹೈದರಾಬಾದಿನ ವಶದಲ್ಲಿದ್ದು ಅಲ್ಲಿ ಉರ್ದು ಪ್ರಭಾವವು ವಿಶೇಷವಾಯಿತು. ದಕ್ಷಿಣ ಕನ್ನಡ ಜಿಲ್ಲೆಯ ಅಥವಾ ಮಂಗಳೂರಿನ ಪ್ರಾಂತವು ಮದರಾಸ್ ಸರ್ಕಾರದ ವಶದಲ್ಲಿದ್ದರೂ ಅಲ್ಲಿ ತಮಿಳಿನ ಪ್ರಭಾವ ಆಗಿದೆ ಎಂಬುದಕ್ಕಿಂತ, ಅದು ಭೌಗೋಳಿಕವಾಗಿ ಮೈಸೂರಿನಿಂದ ಪ್ರತ್ಯೇಕವಾಗಿ ನಿಂತಿದ್ದು ಕಾರಣವಿರಬೇಕು ಅಲ್ಲಿಯ ಉಪಭಾಷೆಗೆ. ಮೈಸೂರು ಒಂದು ಆಡಳಿತ ಘಟಕವಾಗಿ ಪ್ರತ್ಯೇಕವಾಗಿ ಉಳಿಯಿತು.

ಈ ಉಪಭಾಷೆಗಳ ವೈಲಕ್ಷಣ್ಯಗಳೂ ಸ್ಪಷ್ಟವಾಗಿವೆ. ಮಂಗಳೂರಿನ ಭಾಷೆಯ ಉಚ್ಚಾರಣೆ ಬರಹದ ಭಾಷೆಯನ್ನು ಬಹುವಾಗಿ ಅನುಸರಿಸುತ್ತದೆ. ಅದಕ್ಕೇ ಪ್ರತ್ಯೇಕವಾದ ಉಚ್ಚಾರಣೆಯುಂಟು; ಅದು ಬಳಸುವ ವಿಶಿಷ್ಟ ಪದಗಳೂ ಉಂಟು. ಧಾರವಾಡದ ಭಾಷೆಗೂ ವೈಶಿಷ್ಟ್ಯವಿದೆ. ಗುಲ್ಬರ್ಗದ ಕಡೆ ಉರ್ದು ಪದಗಳು ಇಡಿ ಇಡಿಯಾಗಿ ಬರುತ್ತವೆ. ಮೈಸೂರು ಉಪಭಾಷೆಗೂ ತನ್ನದೇ ಆದ ವೈಲಕ್ಷಣ್ಯಗಳುಂಟು. ಈ ಪ್ರಾದೇಶಿಕ ವೈಲಕ್ಷಣ್ಯಗಳು ಬರಹದಲ್ಲಿ ಕಾಣಿಸಿಕೊಂಡರೂ, ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿಕೊಳ್ಳ

---

[1] ಆ ಭಾಗವು ಹಿಂದೆ ಹೈದರಾಬಾದ್ ಪ್ರಾಂತದಲ್ಲಿದ್ದಿತು. ಈಗ ಅದೂ ಸೇರಿ ವಿಶಾಲ ಕರ್ನಾಟಕವಾಗಿದೆ. ಆ ಭಾಗಕ್ಕೆ ಗುಲ್ಬರ್ಗವು ಪ್ರಮುಖ ವಿದ್ಯಾ ಮತ್ತು ರಾಜಕೀಯ ಕೇಂದ್ರವಾಗಿದೆ.

ವುದು ಆಡುಮಾತಿನಲ್ಲಿ. ಅಲ್ಲದೆ, ಬೇರೆ ಬೇರೆ ಉಪಭಾಷೆಗಳ ವಿದ್ಯಾವಂತರಲ್ಲಿ ವೈಲಕ್ಷಣ್ಯಗಳ ಸಂಖ್ಯೆ ಕಡಿಮೆಯಾಗುತ್ತಾ ಹೋಗುತ್ತದೆ. ಅವಿದ್ಯಾವಂತರ ಮಾತಿನಲ್ಲಿ ಪ್ರಾದೇಶಿಕ ವೈಲಕ್ಷಣ್ಯಗಳ ಸಂಖ್ಯೆ ಹೆಚ್ಚು.

ಮೇಲೆ ಹೇಳಿದ ನಾಲ್ಕು ಪ್ರಾದೇಶಿಕ ಉಪಭಾಷೆಗಳಲ್ಲಿ ಒಂದೊಂದೂ ವಿಸ್ತಾರವಾದ ಪ್ರದೇಶದಲ್ಲಿ ಹಬ್ಬಿದೆ. ಆ ವಿಸ್ತಾರವಾದ ಪ್ರದೇಶದಲ್ಲಿ ಮತ್ತೆ ಹಲವು ಉಪಭಾಷೆಗಳನ್ನು ಗುರುತಿಸುವುದು ಸಾಧ್ಯ. ಉದಾಹರಣೆಗೆ ಮೈಸೂರು ಉಪಭಾಷೆಯ ಪ್ರದೇಶದಲ್ಲಿಯೇ ದಾವಣಗೆರೆ ಕನ್ನಡ, ಹಾಸನ ಕನ್ನಡ, ಬೆಂಗಳೂರು ಕನ್ನಡ, ಮೈಸೂರು ಕನ್ನಡ (ಮೈಸೂರು ಪಟ್ಟಣದ ಸುತ್ತಮುತ್ತಣ ಕನ್ನಡ) ಇತ್ಯಾದಿ ಭೇದಗಳನ್ನು ಗುರುತಿಸಬಹುದು. ಇವುಗಳಿಗೆಲ್ಲ ಉದಾಹರಣೆಗಳನ್ನು ಕೊಟ್ಟು ಅವುಗಳ ವ್ಯಾಪ್ತಿಯನ್ನು ನಿರ್ಧರಿಸಬೇಕಾದರೆ ಇನ್ನೂ ಹೆಚ್ಚು ಕೆಲಸ ನಡೆಯಬೇಕು.

ಒಬ್ಬ ವ್ಯಕ್ತಿ ಯಾವುದೇ ಉಪಭಾಷೆಯನ್ನಾಡುತ್ತಿರಲಿ, ಅವನು ಇನ್ನೊಂದು ಉಪಭಾಷಾ ಪ್ರದೇಶಕ್ಕೆ ಹೋಗಿ ನೆಲಸಿದಾಗ ಅಲ್ಲಿಯ ಉಪಭಾಷೆಗೆ ತಕ್ಕಂತೆ ತನ್ನ ಮಾತನ್ನು ಸ್ವಲ್ಪ ವ್ಯತ್ಯಾಸಮಾಡಿಕೊಳ್ಳಲೇಬೇಕಾಗುತ್ತದೆ. ಇಲ್ಲದಿದ್ದರೆ ಅವರ ಮಧ್ಯೆ ಹೊಸಬನಾಗಿ ಉಳಿಯುತ್ತಾನೆ. ಜನರ ಜೊತೆ ಬೆರೆಯಲು ಭಾಷೆ ಬಹಳ ಸಹಾಯಮಾಡುತ್ತದೆ; ಮತ್ತು ಅದು ಅತ್ಯುತ್ತಮ ಸಾಧನವೂ ಹೌದು. ಮಂಗಳೂರಿನ ಕಡೆ ಹೋಗಿ ಕೆಲವು ವರ್ಷವಿದ್ದು ಹಿಂದಕ್ಕೆ ಬಂದ ವ್ಯಕ್ತಿಯ ಬಾಯಲ್ಲಿ 'ಏನು, ಮಾರಾಯ್ರೇ' ಎಂಬ ಮಾತನ್ನೂ ಧಾರವಾಡದ ಕಡೆಯಲ್ಲಿದ್ದು ಹಿಂದಕ್ಕೆ ಬಂದ ವ್ಯಕ್ತಿಯ ಬಾಯಲ್ಲಿ 'ಹ್ಯಾಂಗೆ', 'ಛಲೋ ಐತಿ' ಎಂಬ ಮಾತುಗಳನ್ನೂ ಕೇಳಬಹುದು. ಧಾರವಾಡದ, ಗುಲ್ಬರ್ಗದ ಕಡೆಯವರು ಮೈಸೂರಿಗೆ ಬಂದು ನೆಲಸಿದ ಒಂದೆರಡು ವರ್ಷಗಳಲ್ಲಿ ಅವರ ಮಾತಿನಲ್ಲಿ ಅನೇಕ ವ್ಯತ್ಯಾಸಗಳಾದದ್ದನ್ನು ನಾನು ಗುರುತಿಸಿದ್ದೇನೆ. ನನ್ನ ಉಪಭಾಷೆಯನ್ನೇ ತೆಗೆದುಕೊಂಡರೆ—ನನ್ನ ಮೊದಲ ಮಾತು ದಾವಣಗೆರೆ ಕನ್ನಡ. ಅಭ್ಯಾಸ, ಉದ್ಯೋಗಗಳು ಕಾರಣವಾಗಿ ನಾನು ಮೈಸೂರಲ್ಲಿ ನೆಲಸಿದ್ದೇನೆ. ಇದರಿಂದ ನನ್ನ ಮಾತು ಮೈಸೂರಿನ ವಿದ್ಯಾವಂತರ ಕನ್ನಡವಾಗಿದೆ. ನಾನು ದಾವಣಗೆರೆ ಕಡೆಯವನು ಎಂದು ಹೇಳಿಕೊಂಡಾಗ ಕೆಲವರು ಆಶ್ಚರ್ಯಪಟ್ಟದ್ದುಂಟು. ಮೈಸೂರಲ್ಲಿ ನನ್ನ ಜೊತೆಯಲ್ಲಿರುವ ನನ್ನ ತಾಯಿಯ ಮಾತಿನಲ್ಲಿ ಅಷ್ಟು ವ್ಯತ್ಯಾಸಗಳಾಗಿಲ್ಲ. ಅವರು ಮನೆಯಲ್ಲಿ ಮಾತನಾಡುವಾಗ 'ಮಕ್ಕೊ' (=ಮಲಗಿಕೊ), 'ತೊಕ್ಕೊ' (= ತೊಳೆದುಕೊ), 'ಮತಂಗೆ' (= ಚನ್ನಾಗಿ), 'ಮುಳ್ಗಾಯಿ' (= ಬದನೆಕಾಯಿ) ಇತ್ಯಾದಿ ಮಾತುಗಳನ್ನು ಬಳಸುತ್ತಾರೆ. ನಾನು ಈ ಮಾತುಗಳನ್ನು ಬಳಸಿದರೆ ಅವರಿಗೆ ವಿಚಿತ್ರವಾಗಿ ಕೇಳಿಸುತ್ತದೆ, ಅವರೇ ನಗುತ್ತಾರೆ. ಅವರು ಮೈಸೂರಿನ ಇತರರೊಡನೆ ಮಾತನಾಡುವಾಗ ತಮ್ಮ ಪ್ರಾದೇಶಿಕ ವೈಲಕ್ಷಣ್ಯಗಳನ್ನು ಅಷ್ಟೇನೂ ವ್ಯತ್ಯಾಸ ಮಾಡಲು ಯತ್ನಿಸುವುದಿಲ್ಲ. ವಯಸ್ಸಾದವರ ವ್ಯಕ್ತಿಭಾಷೆ ವ್ಯತ್ಯಾಸಗೊಳ್ಳುವುದು ಬಹು ನಿಧಾನ. ಕೆಲವು ಸಾರಿ, ಅವರ ವ್ಯಕ್ತಿಭಾಷೆ ಸ್ಥಿರವಾಗಿ ಹಾಗೇ ಉಳಿದುಬಿಡುತ್ತದೆ.

ದಾವಣಗೆರೆಯಿಂದ ಮೈಸೂರಿಗೆ ಅಧ್ಯಯನಕ್ಕಾಗಿ ಬಂದು ಅಲ್ಲಿ ಹಲವು ವರ್ಷಗಳನ್ನು ಕಳೆದ ಒಬ್ಬ ವಿದ್ಯಾರ್ಥಿಯ ಉಪಭಾಷೆಯಲ್ಲಿ ಕೊನೆಯವರೆಗೂ ಪ್ರಾದೇಶಿಕ ವೈಲಕ್ಷಣ್ಯಗಳು ಉಳಿದುವು; ಅವರ ಸ್ನೇಹಿತರ ಮಾತಿನಲ್ಲಿ ಮಾತ್ರ ಅನೇಕ ಮಾರ್ಪಾಟುಗಳಾದುವು. ಹಳ್ಳಿಗಳಿಂದ ಬಂದು ಮೈಸೂರಿನ ಕಾಲೇಜುಗಳಲ್ಲಿ ಅಧ್ಯಾಪಕರಾಗಿರುವ ಅನೇಕರ ಮಾತಿನಲ್ಲಿ ಅವರ ಹಳ್ಳಿಯ ಜನರ ಉಚ್ಚಾರಣಾ ವೈಚಿತ್ರ್ಯಗಳು ಎದ್ದು ಕಾಣಿಸುತ್ತವೆ. ಇದರ ಅರ್ಥ—ಕೆಲವರು ಇನ್ನೊಂದು ಉಪಭಾಷೆಯ ಪ್ರಭಾವಕ್ಕೆ ಸುಲಭವಾಗಿ ಒಳಗಾಗುತ್ತಾರೆ. ಇನ್ನು ಕೆಲವರು ಅಷ್ಟು ಸುಲಭವಾಗಿ ಒಳಗಾಗುವುದಿಲ್ಲ. ಅವರು ಬಾಲ್ಯದಲ್ಲಿ ಕೇಳಿದ ಭಾಷೆ ಅವರಲ್ಲಿ ಆಳವಾದ ಬೇರುಗಳನ್ನು ಬಿಟ್ಟಿರುತ್ತದೆ.

ಪ್ರಾದೇಶಿಕ ಉಪಭಾಷೆಗಳು, ಸಾಮಾಜಿಕ ಉಪಭಾಷೆಗಳು, ವಿದ್ಯಾವಂತರ ಮತ್ತು ಅವಿದ್ಯಾವಂತರ ಉಪಭಾಷೆಗಳು, ಅವುಗಳ ಪರಸ್ಪರ ಪ್ರಭಾವ, ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿ ನೆಲಸಿದ ಬೇರೆ ಬೇರೆ ವಯಸ್ಸಿನ ವ್ಯಕ್ತಿಗಳ ಭಾಷೆಯ ಮೇಲೆ ಆಗುವ ಪರಿಣಾಮಗಳು, ದ್ವಿಭಾಷಾ ಪ್ರದೇಶದ ಜನ, ಎರಡು ಉಪಭಾಷೆಗಳ ಮಧ್ಯದ ಪ್ರದೇಶದ ಜನ, ಅವರ ಮಾತುಗಳು—ಈ ಎಲ್ಲ ಅಧ್ಯಯನಗಳು ಬಹು ಸ್ವಾರಸ್ಯವಾದುವು; ಅನೇಕ ಕುತೂಹಲಕಾರಿಯಾದ ಫಲಗಳನ್ನು ನೀಡಬಲ್ಲುವು.

# 10 ಧ್ವನಿವಿಜ್ಞಾನ

ಮನುಷ್ಯನು ಧ್ವನಿಗಳನ್ನು ಹೊರಡಿಸಲು ಬಳಸುವ ಅಂಗಗಳನ್ನು ಧ್ವನ್ಯಂಗಗಳೆಂ (Speech organs) ಕರೆಯುತ್ತಾರೆ. ತುಟಿಗಳು, ನಾಲಗೆ, ಹಲ್ಲಿನ ಎರಡು ಸಾಲುಗಳ ಬಾಯಿಯ ಮೇಲ್ಭಾವಣಿ, ಮೂಗು ಇತ್ಯಾದಿಗಳೇ ಧ್ವನ್ಯಂಗಗಳು. ಇವುಗಳ ಸಹಾಯ ದಿಂದ ನಾವು ಧ್ವನಿಗಳನ್ನು ಹೊರಡಿಸುತ್ತೇವೆ. ಆದರೆ ಇವುಗಳ ಪ್ರಧಾನಕಾರ್ಯವು ಧ್ವ ಗಳನ್ನು ಹೊರಡಿಸುವುದು ಅಲ್ಲವೇ ಅಲ್ಲ. ಇವುಗಳಲ್ಲಿ ಕೆಲವು ಆಹಾರಕ್ಕೆ ಸಂಬಂ ಪಟ್ಟುವು ; ಇನ್ನು ಕೆಲವು ಉಸಿರಾಟಕ್ಕೆ ಸಂಬಂಧಪಟ್ಟುವು. ಉದಾಹರಣೆಗೆ ಮೂಗ ಶ್ವಾಸಕೋಶ ಇತ್ಯಾದಿಗಳು ಉಸಿರಾಟಕ್ಕೂ, ತುಟಿ, ನಾಲಗೆ, ಹಲ್ಲು ಇತ್ಯಾದಿಗಳ ಆಹಾರಸೇವನೆಗೂ ಸಂಬಂಧಿಸಿವೆ. ಆದ್ದರಿಂದ ವಾಸ್ತವವಾಗಿ ಧ್ವನ್ಯಂಗಗಳೆಂಬುವ ಇಲ್ಲ. ಆದರೆ ಒಂದು ಕಾರ್ಖಾನೆಯಲ್ಲಿ ತಯಾರಾಗುವ ಯಾವುದೋ ಮುಖ್ಯ ವಸ್ತುವಿ ಅಂಗವಾಗಿ ಅಷ್ಟೇ ಲಾಭದಾಯಕವಾದ ಉಪವಸ್ತುವೊಂದು ನಿರ್ಮಾಣವಾಗುವಂತೆ ಮನುಷ್ಯ ತನ್ನ ಶ್ವಾಸಾಂಗ ಮತ್ತು ಆಹಾರಾಂಗಗಳನ್ನು ಅವುಗಳ ಪ್ರಮುಖ ಕಾರ್ಯ ಜೊತೆಯಲ್ಲಿ ಭಾಷೆಯನ್ನು ಹೊರಡಿಸುವುದಕ್ಕೂ ಬಳಸಿಕೊಂಡಿದ್ದಾನೆ. ಶ್ವಾಸಕೋ ವನ್ನು ತಲುಪಿದ ಗಾಳಿ ಅಲ್ಲಿನ ರಕ್ತವನ್ನು ಶುದ್ಧಿ ಮಾಡಿ ಅಶುದ್ಧ ವಾಯುವಾಗಿ ಹೊರಬರ ತ್ತದೆ. ಈ ಅಶುದ್ಧವಾಯುವನ್ನು ಅಲ್ಲಲ್ಲಿ ತಡೆಗಟ್ಟಿ ಅಥವಾ ಅದನ್ನು ನಾನಾ ಕ್ರಿಯೆ ಗಳಿಗೆ ಒಳಪಡಿಸಿ ನಾವು ಬೇರೆ ಬೇರೆ ಧ್ವನಿಗಳನ್ನು ಹೊರಡಿಸುತ್ತೇವೆ. ಸಾಮಾನ್ಯವಾ ಶ್ವಾಸಕೋಶಗಳಿಂದ ಗಾಳಿ ಹೊರ ಬರುವಾಗ ಹೊರಡಿಸುವ ಧ್ವನಿಗಳೇ ಹೆಚ್ಚು ಪ್ರಪಂಚದ ಕೆಲವು ಭಾಷೆಗಳಲ್ಲಿ ಗಾಳಿಯನ್ನು ಒಳಕ್ಕೆ ತೆಗೆದುಕೊಳ್ಳುವಾಗ ಹೊರಡಿಸು ಧ್ವನಿಗಳೂ ಇವೆಯಂತೆ. ಆದರೆ ಇವು ಬಹಳ ವಿರಳ.

ಹೀಗೆ ಧ್ವನಿಗಳನ್ನು ಹೊರಡಿಸುವ ಧ್ವನ್ಯಂಗಗಳು, ಧ್ವನ್ಯಂಗ ಹೊರಡಿಸುವ ಧ್ವ ಗಳು, ಧ್ವನಿಗಳ ಪ್ರಭೇದಗಳು ಮತ್ತು ವಿಂಗಡಣೆಗಳು ಇತ್ಯಾದಿಗಳ ವಿವರಣೆಯು ಧ್ವನಿವಿಜ್ಞಾನ (Phonetics).

ಮೊದಲು ಧ್ವನ್ಯಂಗಗಳನ್ನೇ ತೆಗೆದುಕೊಳ್ಳೋಣ. ಧ್ವನ್ಯಂಗಗಳನ್ನು ಒಂದ ಕೊಳಲಿಗೆ ಹೋಲಿಸಬಹುದು. ಕೊಳಲಿನಲ್ಲಿ ಗಾಳಿಯನ್ನು ತುಂಬಿ ಅದನ್ನು ತಡೆಗಟ್ಟ

ವುದರಿಂದ, ಸ್ವಲ್ಪ ಸ್ವಲ್ಪ ಬಿಡುವುದರಿಂದ—ಅಂತೂ ಆ ಗಾಳಿ ನಿರಾಳವಾಗಿ ಹರಿದು ಹೋಗದಂತೆ ಅದಕ್ಕೆ ನಾನಾ ರೀತಿಯ ಪ್ರತಿಬಂಧಕಗಳನ್ನು ಒಡ್ಡುವುದರಿಂದ ಬೇರೆಬೇರೆ ಧ್ವನಿಗಳು ಹೊರಡುತ್ತವೆ. ಹಾಗೆಯೇ ಧ್ವನ್ಯಂಗಗಳಲ್ಲೂ ಕೂಡ. ನಾವು ಕೊಳಲಿಗೆ ಬಾಯಿಯಿಂದ ಗಾಳಿಯನ್ನು ತುಂಬಿದರೆ, ನಮ್ಮಲ್ಲಿ ಶ್ವಾಸಕೋಶಗಳು ಗಾಳಿಯನ್ನು ಒದಗಿಸುತ್ತವೆ. ಬಾಯಿಯಿಂದ ಶ್ವಾಸಕೋಶದವರೆಗಿನ ಎಲ್ಲ ಅಂಗಗಳನ್ನೂ ಈಗ ಪರಿಶೀಲಿಸೋಣ.

ಮೇಲಿನ ಚಿತ್ರವನ್ನು ನೋಡಿ. ಒಂದು ಪಕ್ಕಕ್ಕೆ ತಿರುಗಿ ನಿಂತಿರುವ ಮನುಷ್ಯನ ಮುಖದ ಚಿತ್ರ ಇದು. LL—ಇವು ತುಟಿಗಳು ಅಥವಾ ಓಷ್ಠಗಳು (Lips). ಇವುಗಳನ್ನು ಬೇಕೆಂದಾಗ ತೆಗೆಯಲು, ಮುಚ್ಚಲು, ಬೇರೆ ಬೇರೆ ಆಕಾರಗಳಿಗೆ ತಿರುಗಿಸಲು ಸಾಧ್ಯ. TT—ಇವು ಹಲ್ಲುಗಳು ಅಥವಾ ದಂತಗಳು (Teeth). ಇವುಗಳಲ್ಲಿ ಮೇಲಿನದು ಮೇಲಿನ ಹಲ್ಲಿನ ಸಾಲನ್ನೂ ಕೆಳಗಿನದು ಕೆಳಗಿನ ಹಲ್ಲಿನ ಸಾಲನ್ನೂ ಸೂಚಿಸುತ್ತದೆ. ಮೇಲ್ಭಾಗದ ಹಲ್ಲಿನ ಸಾಲಿನ ಹಿಂಭಾಗದ ಮೇಲ್ಛಾವಣಿ (Roof of the mouth) ವಂಕಿಮವಾಗಿದೆ. ಅದರ ಕೆಳಗೆ ನಾಲಗೆ ಇದೆ. ಮೇಲ್ಛಾವಣಿಯನ್ನು ನಮ್ಮ ಸೌಕರ್ಯಕ್ಕನುಗುಣವಾಗಿ ಮೂರು ಭಾಗಗಳಾಗಿ ವಿಂಗಡಿಸಬಹುದು. ಮೇಲಿನ ದಂತಪಂಕ್ತಿಗೆ ಹೊಂದಿಕೊಂಡಂತೆ ಇರುವ ಭಾಗವನ್ನು ವರ್ತ್ಸ (Teeth-ridge ಅಥವಾ Alveolus) ಎಂದು ಕರೆಯುತ್ತಾರೆ. ಇದನ್ನು ಚಿತ್ರದಲ್ಲಿ TR ಎಂದು ನಿರ್ದೇಶಿಸಿದೆ. ಅದರ ಹಿಂಭಾಗವನ್ನು ನಾವು ಬೆರಳಿಂದ ಮುಟ್ಟಿ ನೋಡಿದರೆ ಅಥವಾ ನಾಲಗೆಯಿಂದ ಮುಟ್ಟಿ

ನೋಡಿಕೊಂಡರೆ, ಆ ಭಾಗವು ಒರಟಾಗಿರುವುದು ಕಂಡುಬರುತ್ತದೆ. ಅದನ್ನು ಕಠಿನ ತಾಲು (Hard Palate) ಎಂದು ಕರೆಯುತ್ತಾರೆ. ಇದನ್ನು H ಎಂದು ಸೂಚಿಸಿದೆ. S— ಇದು ಮೃದು ತಾಲು (Soft Palate). ಇದು ಕಠಿನ ತಾಲುವಿನ ಹಿಂಭಾಗದಲ್ಲಿ ನಾಲಗೆಯ ಹಿಂಭಾಗಕ್ಕೆ ಎದುರಾಗಿ ಇದೆ. ಅದರ ಕೆಳಗೆ ಒಂದು ಸಣ್ಣ ಮಾಂಸದ ತುಂಡು ನೇಲುತ್ತದೆ. ಅದು ಅಲಿಜಿಹ್ವಾ (U=Uvula). ಇದನ್ನು ಪಶ್ಚಜಿಹ್ವೆಗೆ ಎದುರಾಗಿ ಕಂಪನಗೊಳಿಸುವುದರಿಂದ ಒಂದು ರೀತಿಯ R ಧ್ವನಿ ಹೊರಡುತ್ತದೆ (ಇದು ಫ್ರೆಂಚ್ ಭಾಷೆಯಲ್ಲಿದೆ.) ಇಷ್ಟು ಆಸ್ಯದ ಅಥವಾ ಬಾಯಿಯ (Mouth) ಮೇಲ್ಭಾಗದ ಅಂಗಗಳಾದವು. ಆಸ್ಯದ ಮೃದುತಾಲುವಿನ ಭಾಗವನ್ನು ಚಲಿಸಲು ಸಾಧ್ಯ. ಇದನ್ನು ಪೂರ್ತಿಯಾಗಿ ಎತ್ತಿದಾಗ, ಅದು ಹಿಂದಿನ ಗಲಕುಹರದ ಭಿತ್ತಿಗೆ ಒತ್ತಿ ನಿಂತು, ಇಡೀ ಗಾಳಿ ಮೂಗಿನಿಂದ ಹೊರಗೆ ಹೋಗದಂತೆ ತಡೆಯುತ್ತದೆ. ಆಗ ಗಾಳಿ ಆಸ್ಯಪಥದ ಮೂಲಕ ಹೊರಬರುತ್ತದೆ.

ಆಸ್ಯದ ಕೆಳಭಾಗದಲ್ಲಿ ಕೆಳಗಿನ ಹಲ್ಲಿನ ಸಾಲಿನ ಹಿಂದುಗಡೆ ಇರುವ ಅಂಗ ನಾಲಗೆ ಅಥವಾ ಜಿಹ್ವಾ (Tongue). ಧ್ವನ್ಯಂಗಗಳಲ್ಲಿ ಇದು ಬಹು ಪ್ರಮುಖವಾದುದು ಮತ್ತು ಬಹು ಚಟುವಟಿಕೆಯದು. ಬಾಯಿಯಲ್ಲೆಲ್ಲ ಇದರ ಓಡಾಟವೇ ಓಡಾಟ. ಆಹಾರವನ್ನು ಅಗಿಯಲು ಹಲ್ಲಿಗೆ ಸರಬರಾಜು ಮಾಡುತ್ತದೆ, ರುಚಿ ನೋಡುತ್ತದೆ. ಹಲ್ಲಿನ ಮಧ್ಯೆ ಏನಾದರೂ ಸಿಕ್ಕಿಕೊಂಡಿದ್ದರೆ ಅದನ್ನು ತೆಗೆದುಹಾಕುತ್ತದೆ. ನಮ್ಮ ಸೌಕರ್ಯಕ್ಕಾಗಿ ಜಿಹ್ವೆಯನ್ನು ಜಿಹ್ವಾಗ್ರ (Tip of the tongue), ಜಿಹ್ವಾಫಲಕ (BL=Blade of the tongue), ಪೂರ್ವಜಿಹ್ವಾ (F=Front of the tongue), ಪಶ್ಚಜಿಹ್ವಾ (B=Back of the tongue) ಎಂದು ವಿಭಾಗಿಸಬಹುದು. ಬಹು ಹಿಂದಿನ ಭಾಗ ಜಿಹ್ವಾಮೂಲ (R=Root of the tongue) ಈಗ ಒಂದೊಂದನ್ನಾಗಿ ವಿವರಿಸಬಹುದು. ಕೆಳಗಿನ ಹಲ್ಲಿನ ಸಾಲಿನ ಪಕ್ಕಕ್ಕೆ, ಅದಕ್ಕೆ ಹೊಂದಿಕೊಂಡಿರುವ ಭಾಗವೇ ಜಿಹ್ವಾಗ್ರ. ಅದರ ಹಿಂಭಾಗದಲ್ಲಿ, ವರ್ತ್ಸಕ್ಕೆ ಎದುರಾಗಿರುವ ಭಾಗ ಜಿಹ್ವಾಫಲಕ. ಅದರ ಹಿಂದೆ, ಕಠಿನ ತಾಲುವಿಗೆ ಎದುರಾಗಿರುವ ಭಾಗ ಪೂರ್ವ ಜಿಹ್ವಾ. ಮೃದುತಾಲುವಿಗೆ ಎದುರಾಗಿರುವ ಭಾಗ ಪಶ್ಚ ಜಿಹ್ವಾ. ಜಿಹ್ವೆಯು ಬೇರೆ ಬೇರೆ ಭಾಗಗಳನ್ನು ಬೇರೆ ಬೇರೆ ಭಾಗಗಳಿಗೆ ಮುಟ್ಟಿಸಿ ಬೇರೆ ಬೇರೆ ಧ್ವನಿಗಳನ್ನು ಹೊರಡಿಸಬಹುದು. ಅಲಿ ಜಿಹ್ವೆಗೆ ಎದುರಾಗಿರುವ ಭಾಗ ನಾಲಗೆಯ ಮೂಲ ಅಥವಾ ಜಿಹ್ವಾಮೂಲ. ಜಿಹ್ವಾಮೂಲದ ಕೆಳಗೆ ಒಂದು ಅಂಗವಿದೆ. ಅದೇ ಉಪಜಿಹ್ವಾ (E=Epiglottis). ಇದು ಸಣ್ಣ ನಾಲಗೆಯಿದ್ದಂತೆ ಇರುತ್ತದೆ. ನಾವು ಆಹಾರವನ್ನು ನುಂಗುವಾಗ ಆ ಆಹಾರವು ತಪ್ಪಿ ಶ್ವಾಸನಾಳದೊಳಕ್ಕೆ ಹೋಗದಂತೆ ಸಂರಕ್ಷಿಸುತ್ತದೆ. ಅಷ್ಟೇ ಹೊರತು ನಮಗೆ ತಿಳಿದಮಟ್ಟಿಗೆ ಇದು ಯಾವ ಧ್ವನಿಗಳ ಉತ್ಪತ್ತಿಗೂ ನೇರವಾಗಿ ಸಂಬಂಧಿಸಿಲ್ಲ.

ಆಸ್ಯದ ಮೇಲ್ಛಾವಣಿಯ ಮೇಲ್ಭಾಗದಲ್ಲಿ ನಾಸಾಕುಹರ (Nasal cavity). ಉಸಿರು ಹೋಗುವುದೂ ಬರುವುದೂ ಇದರ ಮೂಲಕ.

ಉಪಜಿಹ್ವೆಯಿಂದ ಕೆಳಗೆ ಬಂದರೆ ಒಂದು ಕಡೆ ಅನ್ನನಾಳವಿದೆ (FP=Food pipe). ಅದರ ಪಕ್ಕದಲ್ಲಿ ಶ್ವಾಸನಾಳವಿದೆ (W=Wind pipe). ಶ್ವಾಸನಾಳದ ಮೇಲ್ಭಾಗದಲ್ಲಿ ಕೃಕ (Larynx) ಎಂಬ ಹೆಸರಿನ ಒಂದು ಗಂಟು ಇದೆ. ಅದನ್ನು ನಾವು ನಮ್ಮ ಕುತ್ತಿಗೆಯಲ್ಲಿ ಎದೆಯ ಮೇಲ್ಭಾಗದಲ್ಲಿ ಮುಟ್ಟಿ ನೋಡಿಕೊಳ್ಳಬಹುದು. ಈ ಕೃಕದ ಒಳಗೆ, ಅದರ ಸಂರಕ್ಷಣೆಯಲ್ಲಿ ಎರಡು ಘೋಷ ತಂತುಗಳಿರುತ್ತವೆ (V=Vocal chords). ಇವುಗಳಿಗೆ ಸ್ಥಿತಿಸ್ಥಾಪನ ಶಕ್ತಿಯಿದೆ. ಈ ಘೋಷ ತಂತುಗಳ ಮಧ್ಯೆ ಶ್ವಾಸವು ಹೋಗಿ ಬರಲು ಸ್ಥಳಾವಕಾಶವುಂಟು. ಶ್ವಾಸಕೋಶಗಳಿಂದ ಹೊರ ಬರುವ ಗಾಳಿಯು ಅವುಗಳ ಮಧ್ಯದ ಸ್ಥಳದಲ್ಲಿ ನಿರಾತಂಕವಾಗಿ ಹೊರಬಂದಾಗ ನಾವು ಹೊರಡಿಸುವ ಧ್ವನಿಗಳೇ ಅಘೋಷ ಧ್ವನಿಗಳು (Voiceless sounds). ಉದಾಹರಣೆಗೆ ಕ್, ಚ್, ಟ್, ತ್, ಪ್ ಇತ್ಯಾದಿ. ಆ ಘೋಷತಂತುಗಳ ಮಧ್ಯದ ಸ್ಥಳವನ್ನು ಸಂಕುಚಿತ ಮಾಡಿದಾಗ ಶ್ವಾಸಕೋಶಗಳಿಂದ ಬರುವ ಗಾಳಿಯು ಅವುಗಳನ್ನು ಉಜ್ಜಿಕೊಂಡು ಹೊರಬರುತ್ತದೆ. ಆಗ ಅವುಗಳು ಕಂಪಿಸಿದಾಗ ಗಾಳಿಯೂ ಕಂಪನಕ್ಕೊಳಗಾಗುತ್ತದೆ. ಹಾಗೆ ಕಂಪನಕ್ಕೊಳಗಾದ ಗಾಳಿಯಿಂದ ನಾವು ಹೊರಡಿಸುವ ಧ್ವನಿಗಳೇ ಘೋಷ ಧ್ವನಿಗಳು (Voiced sounds). ಉದಾಹರಣೆಗೆ ಗ್, ಜ್, ಡ್, ದ್, ಬ್ ಇತ್ಯಾದಿ. 'ಕ್' ಮತ್ತು 'ಗ್' ಧ್ವನಿಗಳಿಗೆ ವ್ಯತ್ಯಾಸವನ್ನು ಕಾಣಬೇಕಾದರೆ ಅವುಗಳನ್ನು ಉಚ್ಚರಿಸುವಾಗ ಕೃಕದ ಮೇಲೆ ಬೆರಳಿಟ್ಟು ಪರೀಕ್ಷಿಸಬಹುದು. ಅಥವಾ ಎರಡು ಕಿವಿಗಳನ್ನೂ ಮುಚ್ಚಿ ಪರೀಕ್ಷಿಸಬಹುದು. ಅಘೋಷ ಧ್ವನಿ 'ಕ್'ವನ್ನು ಉಚ್ಚರಿಸುವಾಗ ಯಾವ ಗುಂಯ್ ನಾದವೂ ಕೇಳಿಸುವುದಿಲ್ಲ. ಘೋಷ ಧ್ವನಿ 'ಗ್'ವನ್ನು ಉಚ್ಚರಿಸುವಾಗ ಒಂದು ರೀತಿಯ ಗುಂಯ್ ಶಬ್ದವು (Buzzing sound) ಕೇಳಿಸುತ್ತದೆ. ಇದಕ್ಕೆ ಕಾರಣ ಘೋಷ ತಂತುಗಳು ಕಂಪನಕ್ಕೀಡಾಗುವುದು.

ಈಗ ಧ್ವನ್ಯಂಗಗಳು ಹೇಗೆ ಕೆಲಸವನ್ನು ಮಾಡುತ್ತವೆ ಎಂಬುದನ್ನು ನೋಡೋಣ. ಹಿಂದೆ ಕೊಳಲಿನ ಉಪಮೆಯನ್ನು ನೋಡಿದೆವು. ಕೊಳಲಿನಲ್ಲಿ ಗಾಳಿಯನ್ನು ತುಂಬಿ ಅದಕ್ಕೆ ನಾನಾ ಒತ್ತಡಗಳನ್ನು ತಂದಾಗ ಬೇರೆ ಬೇರೆ ನಾದಗಳಾಗುತ್ತವೆ. ಹಾಗೆಯೇ ಶ್ವಾಸಕೋಶದಿಂದ ಬರುವ ಗಾಳಿಗೂ ಬೇರೆ ಬೇರೆ ಒತ್ತಡಗಳನ್ನು ತಂದು ಬಿಟ್ಟಾಗ ಬೇರೆ ಬೇರೆ ಧ್ವನಿಗಳು ಹೊರಡುತ್ತವೆ. ಉದಾಹರಣೆಗೆ—'ಕ್' ಧ್ವನಿಯನ್ನು ಹೊರಡಿಸುವಾಗ ಘೋಷ ತಂತುಗಳ ಮೂಲಕ ನಿರಾತಂಕವಾಗಿ ಹೊರಬಂದ ಗಾಳಿಯನ್ನು ನಾಲಗೆಯ ಹಿಂಭಾಗವನ್ನು ಅಥವಾ ಪಶ್ಚ ಜಿಹ್ವೆಯನ್ನು ಮೃದು ತಾಲುವಿಗೆ ಒತ್ತಿ ಹಿಡಿದು ಅಲ್ಲೇ ನಿಲ್ಲಿಸಿ ಆಮೇಲೆ ತಟಕ್ಕನೆ ಬಿಟ್ಟುಬಿಡುತ್ತೇವೆ. ಅದೇ ರೀತಿ, ತುಟಿಗಳೆರಡನ್ನೂ ಮುಚ್ಚಿ ಗಾಳಿಯನ್ನು ತಡೆದು ನಿಲ್ಲಿಸಿ ತಟಕ್ಕನೆ ಬಿಟ್ಟಾಗ 'ಪ್' ಧ್ವನಿಯು ಹೊರಡುತ್ತದೆ. 'ಗ್' ಮತ್ತು 'ಬ್' ಧ್ವನಿಗಳನ್ನು ಹೊರಡಿಸುವಾಗಲೂ 'ಕ್' ಮತ್ತು 'ಪ್' ಧ್ವನಿಗಳನ್ನು ಹೊರಡಿಸುವಾಗ ಉಸಿರನ್ನು ನಿಲ್ಲಿಸುವಂತೆಯೇ ನಿಲ್ಲಿಸುತ್ತೇವೆ. ಅಲ್ಲಿಗೂ ಇಲ್ಲಿಗೂ ವ್ಯತ್ಯಾಸವೇನೆಂದರೆ, ಇಲ್ಲಿ ಗಾಳಿಯು ಘೋಷ ತಂತುಗಳ ಮಧ್ಯೆ

ಸಂಕುಚಿತವಾದ ಜಾಗದಲ್ಲಿ ಹರಿದುಬರುವಾಗ ಘೋಷ ತಂತುಗಳನ್ನು ಅಲುಗಿ ತಾನೂ ಕಂಪನಕ್ಕೊಳಗಾಗುತ್ತದೆ. 's' ಧ್ವನಿಯನ್ನು ಹೊರಡಿಸುವಾಗ ನಾಲಗೆಗೂ ಬಾಯಿಯ ಮೇಲ್ಭಾವಣಿಗೂ ಮಧ್ಯೆ ಇರುವ ಜಾಗವನ್ನು ಚಿಕ್ಕದು ಮಾಡುತ್ತೇವೆ. ಘೋಷ ತಂತುಗಳ ಮಧ್ಯೆ ಯಾವ ತಡೆಯೂ ಇಲ್ಲದೆ ಬಂದ ಗಾಳಿಯು ಬಾಯಿಯ ಇಕ್ಕಟ್ಟಾದ ಜಾಗದಲ್ಲಿ ಅಕ್ಕಪಕ್ಕಗಳನ್ನು ಉಜ್ಜಿಕೊಂಡು ಹೋಗುತ್ತದೆ. ಇದು ಅಘೋಷಧ್ವನಿ. 'z' ಧ್ವನಿಯನ್ನು ಹೊರಡಿಸುವಾಗ ಘೋಷತಂತುಗಳ ಮಧ್ಯದ ಜಾಗವು ಕಿರಿದಾಗಿ ಗಾಳಿ ಕಂಪನಕ್ಕೊಳಗಾಗುತ್ತದೆ. ಆದ್ದರಿಂದ 'z' ಎಂಬುದು ಘೋಷಧ್ವನಿ ಎಂದು ಕರೆಯಿಸಿಕೊಳ್ಳುತ್ತದೆ. 's' ಮತ್ತು 'z' ಧ್ವನಿಗಳ ಉಚ್ಚಾರದಲ್ಲಿರುವ ವ್ಯತ್ಯಾಸವು ಇಷ್ಟೆ. 'ನ್' ಎಂಬ ಧ್ವನಿಯನ್ನು ಹೊರಡಿಸುವಾಗ ನಾಲಗೆಯನ್ನು ಮೇಲ್ಭಾಗದ ದಂತಪಂಕ್ತಿಗೆ ಒತ್ತಿ ಹಿಡಿದು ಗಾಳಿಯನ್ನು ಅಲ್ಲಿ ನಿಲ್ಲಿಸಿ ಉಸಿರನ್ನು ಮೂಗಿನ ಮೂಲಕ ಕಳುಹಿಸುತ್ತೇವೆ. ತುಟಿಗಳೆರಡನ್ನೂ ಮುಚ್ಚಿ ಗಾಳಿಯನ್ನು ಅಲ್ಲಿ ನಿಲ್ಲಿಸಿ ಮೂಗಿನ ಮೂಲಕ ಹೊರಕ್ಕೆ ಕಳುಹಿಸಿದಾಗ 'ಮ್' ಧ್ವನಿ ಹೊರಡುತ್ತದೆ. ಆದ್ದರಿಂದ 'ನ್' ಮತ್ತು 'ಮ್'ಗಳನ್ನು ಅನುನಾಸಿಕಗಳೆಂದು ಕರೆಯುತ್ತಾರೆ.

ಧ್ವನ್ಯಂಗಗಳನ್ನು ಉಚ್ಚಾರಣಾಕರಣಗಳೆಂದೂ (Articulators) ಉಚ್ಚಾರಣಾ ಸ್ಥಾನಗಳೆಂದೂ (Points of articulation)—ಸ್ಥೂಲವಾಗಿ ವಿಂಗಡಿಸಬಹುದು. ಕೆಳಗಿನ ತುಟಿ ಉಚ್ಚಾರಣಾಕರಣ, ಏಕೆಂದರೆ ಅದು ಅಲುಗಾಡಿ ಮೇಲಿನ ತುಟಿಯನ್ನು ಮುಟ್ಟಿ ಪ್, ಬ್ ಮುಂತಾದ ಧ್ವನಿಗಳನ್ನೂ, ಮೇಲಿನ ದಂತಪಂಕ್ತಿಯನ್ನು ಮುಟ್ಟಿ [f] ಮುಂತಾದ ಧ್ವನಿಗಳನ್ನೂ ಹೊರಡಿಸುತ್ತದೆ. ಮೇಲಿನ ತುಟಿ ಉಚ್ಚಾರಣಾಸ್ಥಾನವು ಮಾತ್ರ. ನಾಲಗೆಯು ಉಚ್ಚಾರಣಾಕರಣ. ಏಕೆಂದರೆ ಅದು ಆಸ್ಯದ ನಾನಾ ಭಾಗಗಳನ್ನು ಮುಟ್ಟಿ ತ್, ಟ್, ನ್, ಲ್ ಮುಂತಾದ ಧ್ವನಿಗಳನ್ನು ಹೊರಡಿಸುತ್ತದೆ. ಅದು ಮುಟ್ಟುವ ದಂತಪಂಕ್ತಿ, ಕಠಿನತಾಲು, ಮೃದುತಾಲು ಮುಂತಾದವು ಉಚ್ಚಾರಣಾಸ್ಥಾನಗಳು. ಉಚ್ಚಾರಣಾಕರಣಗಳು ಹೇಗೆ ಬೇಕೆಂದರೆ ಹಾಗೆ ಚಲಿಸಬಲ್ಲುವು, ಅನೇಕ ಆಕಾರಗಳನ್ನು ತಾಳಬಲ್ಲುವು. ಉಚ್ಚಾರಣಾ ಸ್ಥಾನಗಳು ಚಲಿಸಬಹುದು ಅಥವಾ ಚಲಿಸದಿರಬಹುದು ; ಇವು ಉಚ್ಚಾರಣಾಕರಣಗಳ ಮೇಲಿರುತ್ತವೆ. ಅವು ಇವುಗಳನ್ನು ಮುಟ್ಟಬಹುದು ಅಥವಾ ಸಮೀಪಿಸಬಹುದು.

ಇಲ್ಲಿಯವರೆಗೆ ಧ್ವನ್ಯಂಗಗಳು, ಅವುಗಳು ಕೆಲಸ ಮಾಡಿ ಧ್ವನಿಗಳನ್ನು ಹೊರಡಿಸುವ ಕ್ರಮ—ಇವುಗಳನ್ನು ಕೆಲವು ಉದಾಹರಣೆಗಳೊಡನೆ ವಿವರಿಸಲಾಯಿತು. ನಮ್ಮ ಬಾಯಿಂದ ಹೊರಡುವ ಧ್ವನಿಗಳನ್ನು ಕೆಲವು ವಿಭಾಗಗಳಾಗಿ ವಿಂಗಡಿಸಲು ಸಾಧ್ಯ. ಅವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ಕೊಟ್ಟಿದೆ.

ಮನುಷ್ಯನ ಧ್ವನ್ಯಂಗಗಳು ಹೊರಡಿಸಬಹುದಾದ ಧ್ವನಿಗಳ ಸಂಖ್ಯೆಗೆ ಮಿತಿಯಿಲ್ಲ. ಆದರೆ ಆ ಧ್ವನಿಗಳೆಲ್ಲವನ್ನೂ ಭಾಷೆಗಳು ಬಳಸಿಕೊಂಡಿಲ್ಲ, ನಿಜ. ಒಂದು ಭಾಷೆ ಬಳಸುವ ಧ್ವನಿಗಳನ್ನೇ ಇನ್ನೊಂದು ಭಾಷೆಯೂ ಬಳಸುವುದಿಲ್ಲವೆಂಬುದು ನಮ್ಮ ಅನು

ಭವಕ್ಕೆ ಬಂದ ವಿಷಯ. ನಮಗೆ ಚೆನ್ನಾಗಿ ಗೊತ್ತಿರುವ ಇಂಗ್ಲಿಷ್, ಕನ್ನಡ ಭಾಷೆಗಳು ಬಳಸುವ ಧ್ವನಿಗಳನ್ನೇ ಹೋಲಿಸಿ ನೋಡಿದರೆ ಇದು ಸ್ಪಷ್ಟವಾಗುತ್ತದೆ. ಕನ್ನಡ ಭಾಷೆಯ ಣ್, ಳ್ ಇತ್ಯಾದಿ ಧ್ವನಿಗಳು ಇಂಗ್ಲಿಷಿನಲ್ಲಿಲ್ಲ: ಇಂಗ್ಲಿಷಿನ z, f ಇತ್ಯಾದಿಗಳು ಕನ್ನಡದಲ್ಲಿಲ್ಲ. ಆದ್ದರಿಂದ ಒಂದೊಂದು ಭಾಷೆಯೂ ಇತರ ಭಾಷೆಗಳಲ್ಲಿರದ ಕೆಲವು ಧ್ವನಿಗಳನ್ನು ಹೊಂದಿರಲು ಸಾಧ್ಯ, ಆದರೂ ನಮಗೆ ತಿಳಿದಿರುವ ಪ್ರಪಂಚದ ಎಲ್ಲ ಭಾಷೆಗಳ ಧ್ವನಿಗಳನ್ನು ಒಟ್ಟಿಗೆ ಸೇರಿಸಿದರೂ ಧ್ವನಿಗಳ ಸಂಖ್ಯೆ ಅಷ್ಟೇನೂ ದೊಡ್ಡದಾಗಿಯೇನೂ ಇಲ್ಲ. ಅಂತರರಾಷ್ಟ್ರೀಯ ಧ್ವನಿಲಿಪಿ (The International Phonetic Alphabet) ಮುಂತಾದ ಲಿಪಿಗಳಲ್ಲಿನ ಕೆಲವು ಚಿಹ್ನೆಗಳಿಗೆ ಆಯಾ ಭಾಷೆಗೆ ತಕ್ಕಂತೆ ಕೆಲವು ಚಿಹ್ನೆಗಳನ್ನು ಸೇರಿಸಿಕೊಂಡು ಮಾರ್ಪಡಿಸಿಕೊಂಡರೆ ಯಾವ ಭಾಷೆಯನ್ನು ಬೇಕಾದರೂ ತಕ್ಕಮಟ್ಟಿಗೆ ಸರಿಯಾಗಿಯೇ ಬರೆಯಬಹುದು.

ಧ್ವನಿಗಳನ್ನು ಸ್ವರಗಳೆಂದೂ (Vowels), ವ್ಯಂಜನಗಳೆಂದೂ (Consonants) ವಿಭಾಗಿಸುವುದು ಬಹು ಹಿಂದಿನಿಂದಲೂ ಬಂದಿರುವ ರೂಢಿ. ಇದು ಸರಿಯಾದ ಶಾಸ್ತ್ರೀಯವಾದ ವಿಭಜನೆ. ಆದರೆ ನಮ್ಮಲ್ಲಿ ಸ್ವರಗಳಿಗೆ ವ್ಯಂಜನಗಳಿಗೆ ವ್ಯತ್ಯಾಸವನ್ನು ಹೇಳುವಾಗ ವ್ಯಂಜನಗಳನ್ನು ಪ್ರತ್ಯೇಕವಾಗಿ ಉಚ್ಚರಿಸಲು ಸಾಧ್ಯವಿಲ್ಲವೆಂದೂ ಅವುಗಳಿಗೆ ಸ್ವರಗಳ ಸಹಾಯವು ಬೇಕೇ ಬೇಕು ಎಂದೂ, ಸ್ವರಗಳನ್ನು ಸ್ವತಂತ್ರವಾಗಿ ಉಚ್ಚರಿಸಲು ಸಾಧ್ಯವೆಂದೂ ಹೇಳುವುದು ಪದ್ಧತಿ. ಆದರೆ ಈ ವಿವರಣೆ ಮಾತ್ರ ಅಶಾಸ್ತ್ರೀಯವಾದುದು. ಏಕೆಂದರೆ ಹಾಗೆ ನೋಡಿದರೆ ವ್ಯಂಜನಗಳನ್ನೂ ಸ್ವತಂತ್ರವಾಗಿ ಉಚ್ಚರಿಸಬಹುದು. ಉದಾಹರಣೆಗೆ ಲ್, ಸ್, ಮ್, ಶ್ ಇತ್ಯಾದಿ. ಆದ್ದರಿಂದ ಮೇಲಿನ ವಿವರಣೆ ಸಾಧುವಾದುದಲ್ಲ. ಭಾಷಾವಿಜ್ಞಾನದಲ್ಲಿ ಸ್ವರ ಮತ್ತು ವ್ಯಂಜನಗಳಿಗೆ ಈ ರೀತಿ ಭೇದವನ್ನು ಹೇಳುತ್ತಾರೆ. ಸ್ವರಗಳೆಲ್ಲವೂ ಬಹುತೇಕ ಘೋಷ ಧ್ವನಿಗಳು. (ಕಾಶ್ಮೀರಿ ಮುಂತಾದ ಭಾಷೆಗಳಲ್ಲಿ ಅಘೋಷ ಸ್ವರಗಳುಂಟು.) ಅವುಗಳನ್ನು ಉಚ್ಚರಿಸುವಾಗ ಆಸ್ಯದ (Mouth) ಯಾವ ಭಾಗದಲ್ಲಿಯೂ ಗಾಳಿಗೆ ಯಾವ ರೀತಿಯ ತಡೆಯನ್ನುಂಟುಮಾಡುವುದಿಲ್ಲ. ಗಾಳಿಯು ಸರಾಗವಾಗಿ ಹೊರಬರುತ್ತದೆ. ಆಸ್ಯದ ಒಳಗಿನ ಭಾಗವನ್ನು ತುಟಿ ನಾಲಗೆಗಳ ಸಹಾಯದಿಂದ ಬೇರೆ ಬೇರೆ ಆಕಾರಗಳಿಗೆ ತಿರುಗಿಸುವುದರಿಂದ ಬೇರೆ ಬೇರೆ ಸ್ವರಗಳು ಹೊರಡುತ್ತವೆ. ಉಳಿದ ಧ್ವನಿಗಳೆಲ್ಲವೂ ವ್ಯಂಜನಗಳು. ವ್ಯಂಜನಗಳಲ್ಲಿ ಘೋಷ ಧ್ವನಿಗಳೂ ಅಘೋಷ ಧ್ವನಿಗಳೂ ಉಂಟು. ಆಸ್ಯದ ಬೇರೆ ಬೇರೆ ಭಾಗಗಳಲ್ಲಿ ಗಾಳಿಗೆ ಬೇರೆ ಬೇರೆ ರೀತಿಯ ತಡೆಗಳನ್ನು ಹಾಕಲಾಗುತ್ತದೆ. ಅ, ಇ, ಉ, ಎ ಮುಂತಾದ ಸ್ವರಗಳನ್ನೂ, ಕ್, ಡ್, ಪ್, ರ್ ಮುಂತಾದ ವ್ಯಂಜನಗಳನ್ನೂ ಹೊರಡಿಸುವಾಗ ನಮ್ಮ ಧ್ವನ್ಯಂಗಗಳು ಕೆಲಸಮಾಡುವ ರೀತಿಯನ್ನು ಗಮನಿಸಿ. ಸ್ವರಗಳನ್ನು ಹೊರಡಿಸುವಾಗ ಗಾಳಿಯು ಯಾವ ತಡೆಯೂ ಇಲ್ಲದೆ ಹೊರಬರುತ್ತದೆ; ಆಸ್ಯವು ಬೇರೆ ಬೇರೆ ಆಕಾರಗಳನ್ನು ತಾಳುತ್ತದೆ, ಅಷ್ಟೇ. ಆದರೆ ವ್ಯಂಜನಗಳನ್ನು ಹೊರಡಿಸುವಾಗ ಗಾಳಿಯು ಪ್ರತಿಬಂಧಕಗಳನ್ನು ಎದುರಿಸಬೇಕಾಗುತ್ತದೆ.

ಸ್ವರಗಳಿಗೆ ವ್ಯಂಜನಗಳಿಗೆ ಇನ್ನೂ ಒಂದು ವ್ಯತ್ಯಾಸವಿದೆ. ವ್ಯಂಜನಗಳಿಗಿಂತ ಸ್ವರ ಗಳಿಗೆ ಹೆಚ್ಚು ದೂರಕ್ಕೆ ಕೇಳಿಸುವ ಶಕ್ತಿ ಇದೆ. 'ಅ' ಮತ್ತು 'ಸ್'ಗಳನ್ನು ಏ ಪ್ರಮಾಣದಲ್ಲಿ ಉಚ್ಚರಿಸಿದರೆ, ದೂರಕ್ಕೆ 'ಅ' ಸ್ಪಷ್ಟವಾಗಿ ಕೇಳಿಸುವಂತೆ 'ಸ್' ಕೇಳಿಸ ಲಾರದು.

ಸ್ವರಗಳ ಉಚ್ಚಾರದಲ್ಲಿ ಪ್ರಮುಖ ಪಾತ್ರವನ್ನು ವಹಿಸತಕ್ಕುವೆಂದರೆ ತುಟಿಗಳ ಮತ್ತು ನಾಲಗೆ. ಆದ್ದರಿಂದ ಸ್ವರಗಳನ್ನು ವಿಂಗಡಿಸುವಾಗ ನಾಲಗೆಯ ಸ್ಥಾನ ಮತ್ತು ತುಟಿಗಳ ಆಕಾರಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಗುತ್ತದೆ. ಕೆಳಗೆ ಬಹು ಮುಖ ವಾದ ಎಂಟು ಮಹಾನ ಸ್ವರಗಳನ್ನು (Cardinal vowels) ಮಾತ್ರ ವಿವರಿಸಲಾಗಿದ ಅವುಗಳನ್ನು ಕೆಳಗೆ ಕಂಡಂತೆ ತೋರಿಸುವ ಪದ್ಧತಿ ಇದೆ.




ಸಂವೃತ ಇತ್ಯಾದಿಗಳು ನಾಲಗೆ ಮತ್ತು ಆಸ್ಯದ ಮೇಲ್ಭಾವಣಿಯ ಮಧ್ಯದ ಅಂತರ ವನ್ನೂ ಪೂರ್ವ, ಪಶ್ಚಗಳು ನಾಲಗೆಯ ಎತ್ತರವನ್ನೂ ಸೂಚಿಸುತ್ತವೆ. [i]ಎಂಬುದು ಪೂರ್ ಸಂವೃತ ಸ್ವರ. ಅದನ್ನು ಉಚ್ಚರಿಸುವಾಗ ಪೂರ್ವಜಿಹ್ವೆಯು(Front of the tongue ಬಹು ಮೇಲೆ ಎದ್ದಿರುತ್ತದೆ,ತುಟಿಗಳು ಅಗಲವಾಗಿರುತ್ತವೆ ಮತ್ತು ಹತ್ತಿರ ಬಂದಿರುತ್ತವ ಪೂರ್ವಸ್ವರಗಳಲ್ಲಿ ಮೇಲಿನಿಂದ ಕೆಳಕ್ಕೆ ಬಂದರೆ ಪೂರ್ವಜಿಹ್ವೆಯು ಕೆಳಕ್ಕೆ ಇಳಿಯುತ್ ಬರುತ್ತದೆ; ತುಟಿಗಳು ಹೆಚ್ಚು ಅಗಲವಾಗಿ ತೆಗೆಯುತ್ತವೆ. ಉದಾಹರಣೆಗೆ [e] ಯನ್ ಉಚ್ಚರಿಸುವಾಗ ಪೂರ್ವ ಜಿಹ್ವೆಯು ಸ್ವಲ್ಪ ಕೆಳಗಿಳಿಯುತ್ತದೆ, ತುಟಿಗಳು ಹೆಚ್ ಅಗಲವಾಗಿ ತೆಗೆಯುತ್ತವೆ. ಪಶ್ಚ ಸ್ವರಗಳ ಉಚ್ಚಾರದಲ್ಲಿ ಪಶ್ಚಜಿಹ್ವೆಯು (Back o the tongue) ಮೇಲೆದ್ದಿರುತ್ತದೆ. ಮೇಲಿನಿಂದ ಕೆಳಕ್ಕೆ ಬರುತ್ತ ಪಶ್ಚಜಿಹ್ವೆಯ ಎತ್ ರವು ಕಡಿಮೆಯಾಗುತ್ತಾ ಬರುತ್ತದೆ ; ತುಟಿಗಳು ಅಗಲವಾಗುತ್ತಾ ಬರುತ್ತವೆ. ಉದ ಹರಣೆಗೆ [u]ವನ್ನು ಉಚ್ಚರಿಸುವಾಗ ಪಶ್ಚಜಿಹ್ವೆಯು ಮೇಲೆದ್ದಿರುತ್ತದೆ, ತುಟಿಗಳ ಹತ್ತಿರ ಬಂದಿರುತ್ತವೆ; [o]ವನ್ನು ಉಚ್ಚರಿಸುವಾಗ ಪಶ್ಚಜಿಹ್ವೆಯು ಇನ್ನೂ ಕೆಳಗಿ

ಯುತ್ತವೆ, ತುಟಿಗಳು ಹೆಚ್ಚು ತೆರೆದುಕೊಳ್ಳುತ್ತವೆ. ಹೀಗೆಯೇ ಉಳಿದ ಸ್ವರಗಳನ್ನೂ ನೋಡಿಕೊಳ್ಳಬಹುದು.

ಮಧ್ಯ ಇರುವ ಸ್ವರ [e]—ಇದನ್ನು ತಟಸ್ಥ ಸ್ವರ (Neutral vowel) ಎನ್ನುತ್ತಾರೆ. ನಾಲಗೆಯು ಯಾವ ಭಾಗವೂ ಮೇಲೆದ್ದಿರದೆ, ಕೆಳಗಿಳಿಯದೆ, ಸಮಾನಾಂತರವಾಗಿರುವಾಗ ಉಚ್ಚಾರವಾಗುವ ಸ್ವರ ಇದು.

ಇಷ್ಟು ಸ್ವರಗಳ ಸ್ಥೂಲವಾದ ಪರಿಚಯ. ಇನ್ನೂ ಹಲವು ಸ್ವರಗಳಿವೆ. ಉದಾಹರಣೆಗೆ [i] ಯನ್ನು ಉಚ್ಚರಿಸುವಾಗಿನ ನಾಲಗೆಯ ಸ್ಥಾನವನ್ನು ಹಾಗೇ ಉಳಿಸಿ, ತುಟಿಗಳನ್ನು ಮಾತ್ರ ಗುಂಡಗೆ ಮಾಡಿ ಉಚ್ಚರಿಸಿದರೆ ಒಂದು ಸ್ವರ ಹೊರಡುತ್ತದೆ. ಅದನ್ನು [y] ಎಂಬ ಚಿಹ್ನೆಯಿಂದ ತೋರಿಸುತ್ತಾರೆ. ಆ ಎಲ್ಲ ವಿವರಗಳು ಇಲ್ಲಿ ಅನಾವಶ್ಯಕ. ಸ್ವರಗಳನ್ನು ಎಷ್ಟು ವಿಧವಾಗಿ ವಿವರಿಸಿದರೂ, ಧ್ವನಿ ವಿಜ್ಞಾನವನ್ನು ಚೆನ್ನಾಗಿ ಬಲ್ಲ ಭಾಷಾವಿಜ್ಞಾನಿಗಳ ಬಾಯಿಂದ ಉಚ್ಚಾರವನ್ನು ಕೇಳಿ ತಿಳಿದುಕೊಂಡರೆ ಮಾತ್ರ ಅವುಗಳು ನಮ್ಮ ವಶಕ್ಕೆ ಬರಬಲ್ಲುವು. ಸ್ವರಗಳನ್ನು ಉಚ್ಚರಿಸುವ ಗ್ರಾಮಾಫೋನ್ ತಟ್ಟೆಗಳಿಂದಲೂ ಸಹಾಯವನ್ನು ಪಡೆಯಬಹುದು.

ಈಗ ವ್ಯಂಜನಗಳಿಗೆ ಬರೋಣ. ವ್ಯಂಜನಗಳನ್ನು ಉಚ್ಚಾರಣಾವಿಧಾನ (Manner of articulation) ಮತ್ತು ಉಚ್ಚಾರಣಾಸ್ಥಾನ (Point of articulation) ಗಳನ್ನು ಗಮನದಲ್ಲಿಟ್ಟುಕೊಂಡು ವಿಭಾಗಿಸುತ್ತಾರೆ. ಉಚ್ಚಾರಣಾ ಸ್ಥಾನಗಳನ್ನಾಗಲೇ ವಿವರಿಸಲಾಗಿದೆ. ಧ್ವನಿಗಳನ್ನು ನಾವು ಉಚ್ಚರಿಸುವ ವಿಧಾನವೇ ಉಚ್ಚಾರಣಾವಿಧಾನ. ಎಂದರೆ ಗಾಳಿಯು ಹಾದುಹೋಗಬೇಕಾಗಿರುವ ಪಥದ ಸ್ಥಿತಿ, ಸ್ವರೂಪವನ್ನು ಇದು ತಿಳಿಸುತ್ತದೆ. ಕೆಳಗೆ ಎರಡೂ ವಿಧಾನಗಳನ್ನನುಸರಿಸಿ ಧ್ವನಿಗಳನ್ನು ವಿಂಗಡಿಸಿದೆ :

**ಉಚ್ಚಾರಣಾಸ್ಥಾನವನ್ನನುಸರಿಸಿ**

**ಓಷ್ಠ್ಯ** (Bilabial) : ಎರಡು ಓಷ್ಠ ಅಥವಾ ತುಟಿಗಳಿಂದ ಉಚ್ಚಾರವಾಗುವ ಧ್ವನಿಗಳು. ಉದಾಹರಣೆಗೆ [p], [m], [w].

**ದಂತೋಷ್ಠ್ಯ** (Labio-dental) : ಕೆಳಗಿನ ತುಟಿ ಮೇಲಿನ ದಂತಪಂಕ್ತಿಯನ್ನು ಮುಟ್ಟಿ ಉಚ್ಚರಿಸುವ ಧ್ವನಿಗಳು. ಉದಾ : [f], [v].

**ದಂತ್ಯ** (Dental) : ಜಿಹ್ವಾಗ್ರವು ಮೇಲಿನ ದಂತಗಳತ್ತ ಚಾಚಿ ಉಚ್ಚರಿಸುವುದು. ಉದಾ : ಕನ್ನಡದ [ತ್], [ದ್] ; [l].

**ವರ್ತ್ಸ್ಯ** (Alveolar) : ಜಿಹ್ವಾಫಲಕವು ವರ್ತ್ಸದತ್ತ ಚಾಚಿ ಉಚ್ಚರಿಸುವುದು. ಉದಾಹರಣೆಗೆ ಇಂಗ್ಲಿಷಿನ [t], [d]. ಕನ್ನಡದ [ತ್], [ದ್]ಗಳೂ ಇಂಗ್ಲಿಷಿನ [t] ಮತ್ತು [d]ಗಳೂ ಒಂದೇ ಅಲ್ಲ ಎಂಬುದನ್ನು ಗಮನಿಸಬೇಕು.

**ತಾಲವ್ಯ** (Palatal) : ಪೂರ್ವಜಿಹ್ವೆಯನ್ನು ಕಠಿನ ತಾಲುವಿನ ಕಡೆಗೊಯ್ದು ಉಚ್ಚರಿಸುವುದು. ಉದಾ : ಜರ್ಮನ್ ಭಾಷೆಯ [c,].

**ಮೂರ್ಧನ್ಯ ಅಥವಾ ಪ್ರತಿವೇಷ್ಟಿತ (Retroflex)** : ಜಿಹ್ವಾಗ್ರವನ್ನು ಕೊಂಕ ಮಾಡಿ ಕಠಿನ ತಾಲುವಿನತ್ತ ಒಯ್ದು ಉಚ್ಚರಿಸುವುದು. ಕನ್ನಡದ [ಟ್] ಮತ್ತು [ಡ್] [ಳ್]ಗಳು ಮೂರ್ಧನ್ಯ ಅಥವಾ ಪ್ರತಿವೇಷ್ಟಿತಗಳು. ಇವುಗಳನ್ನು ಉಚ್ಚರಿಸುವಾಗ ನಾಲಗೆಯ ಮುಂಭಾಗ ಕೊಂಕುವುದನ್ನು ಗಮನಿಸಬಹುದು.

**ಕಂಠ್ಯ (Velar)** : ಪಶ್ಚಜಿಹ್ವೆಯನ್ನು ಮೃದುತಾಲುವಿನತ್ತ ಒಯ್ದು ಉಚ್ಚರಿಸು ವುದು. [k], [g] ಈ ಧ್ವನಿಗಳು.

**ಉಚ್ಚಾರಣಾ ವಿಧಾನವನ್ನನುಸರಿಸಿ**

**ಸ್ಫೋಟ (Plosive)** : ವಾಯುವನ್ನು ಸ್ವಲ್ಪ ಕಾಲ ಸಂಪೂರ್ಣವಾಗಿ ತಡೆದಿಟ್ಟು ಒಮ್ಮೆಗೇ ಬಿಟ್ಟಾಗ ಹೊರಡುವ ಧ್ವನಿಗಳು. ಇವುಗಳನ್ನು 'Stops' (ಸ್ಪರ್ಶ) ಎಂದೂ ಕರೆಯುವುದುಂಟು. [p], [b], [t], [d], [k], [g], [ಟ್], [ಡ್]ಗಳು ಈ ಜಾತಿಗೆ ಸೇರಿದವು. ತುಟಿಗಳೆರಡನ್ನೂ ಪೂರ್ತಿ ಮುಚ್ಚಿ ಗಾಳಿಯನ್ನು ನಿಲ್ಲಿಸಿ, ಆಮೇಲೆ ಬಿಟ್ಟಾಗ ಆಸ್ಫೋಟದಂತಹ ಧ್ವನಿ ಬರುತ್ತದೆ. ಅದೇ [p], ಅಥವಾ [b]; [k] ಮತ್ತು [g] ಗಳನ್ನು ಹೊರಡಿಸುವಾಗ ನಾಲಗೆಯ ಹಿಂಭಾಗವನ್ನು ಅಥವಾ ಪಶ್ಚಜಿಹ್ವೆಯನ್ನು ಮೃದು ತಾಲುವಿಗೊತ್ತಿ ಅಲ್ಲಿ ಗಾಳಿಯನ್ನು ಸ್ವಲ್ಪ ಹೊತ್ತು ನಿಲ್ಲಿಸಿ ಬಳಿಕ ಬಿಡುಗಡೆ ಮಾಡುತ್ತೇವೆ.

**ಅನುನಾಸಿಕ (Nasal)** : ಆಸ್ಯದಲ್ಲಿ ಗಾಳಿಯ ಪಥವನ್ನು ನಿಲ್ಲಿಸಿ ಮೃದು ತಾಲು ವನ್ನು ಕೆಳಗಿಳಿಸಿದಾಗ ಗಾಳಿಯು ಮೂಗಿನ ಮೂಲಕ ಹಾದುಹೋಗುತ್ತದೆ. ಆಗ ಹೊರಡುವ ಧ್ವನಿಗಳೇ ಅನುನಾಸಿಕಗಳು. ತುಟಿಗಳನ್ನು ಮುಚ್ಚಿ ಗಾಳಿಯನ್ನು ನಿಲ್ಲಿಸಿ ಮೂಗಿನ ಮೂಲಕ ಹೋಗುವಂತೆ ಮಾಡಿದಾಗ [m] ಧ್ವನಿಯೂ, ಮೇಲಿನ ದಂತ ಪಂಕ್ತಿಗೆ ನಾಲಗೆಯನ್ನು ಒತ್ತಿ ಉಸಿರನ್ನು ನಿಲ್ಲಿಸಿ ಮೂಗಿನ ಮೂಲಕ ಬಿಟ್ಟಾಗ [n] ಧ್ವನಿಯೂ ಹೊರಡುತ್ತವೆ.

**ಪಾರ್ಶ್ವಿಕ (Lateral)** : ಆಸ್ಯದಲ್ಲಿ ವಾಯುಪಥದ ಮಧ್ಯೆ ತಡೆಯುಂಟುಮಾಡಿ ಆ ತಡೆಯ ಒಂದು ಪಾರ್ಶ್ವದಲ್ಲೋ ಅಥವಾ ಎರಡೂ ಪಾರ್ಶ್ವಗಳಲ್ಲೋ ಗಾಳಿಯು ಹರಿದು ಹೋಗುವಂತೆ ಮಾಡಿದಾಗ ಹೊರಡುವ ಧ್ವನಿಗಳು. ಉದಾಹರಣೆಗೆ [l],–ಇದನ್ನು ಹೊರಡಿಸುವಾಗ ವಾಯುಪಥದ ಮಧ್ಯೆ ನಾಲಗೆ ತಡೆಯಾಗಿ ನಿಲ್ಲುತ್ತದೆ. ನಾಲಗೆಯ ಅಕ್ಕಪಕ್ಕಗಳಲ್ಲಿ ಗಾಳಿಯು ತೂರಿಕೊಂಡು ಬರುತ್ತದೆ.

**ಲೋಡಿತ (Rolled)** : ಯಾವುದಾದರೂ ಸ್ಥಿತಿಸ್ಥಾಪನಶಕ್ತಿಯುಳ್ಳ ಅಂಗವು ಇನ್ನೊಂದು ಅಂಗದ ಮೇಲೆ ಪದೇ ಪದೇ ವೇಗವಾಗಿ ಬಡಿಯುವುದರಿಂದ ಹೊರಡುವ ಧ್ವನಿಗಳು. ಇಂಗ್ಲಿಷಿನ [r]. ಈ ಧ್ವನಿಯನ್ನು ಹೊರಡಿಸುವಾಗ ನಾಲಗೆಯು ಕಠಿಣ ತಾಲುವಿಗೆ ಪಟಪಟನೆ ವೇಗವಾಗಿ ಬಡಿಯುತ್ತದೆ. ಅದನ್ನು ಒಂದು ರೀತಿಯಲ್ಲಿ 'ರ್‌ರ್‌ರ್...' ಎಂಬಂತೆ ಸೂಚಿಸಬಹುದು.

**ತಾಡಿತ** (Flapped): ಸ್ಥಿತಿಸ್ಥಾಪನಶಕ್ತಿಯುಳ್ಳ ಅಂಗವು ಇನ್ನೊಂದು ಅಂಗವನ್ನು ಒಂದು ಬಾರಿ ಬಡಿದಾಗ ಅಥವಾ ತಾಡನಮಾಡಿದಾಗ ಹೊರಡುವ ಧ್ವನಿಗಳು. ಉದಾಹರಣೆಗೆ ಹಿಂದಿಯ [ಡ್]. ಕನ್ನಡದ 'ಬಡಿ' ಎಂಬಲ್ಲಿನ [ಡ್] ಕೂಡ ತಾಡಿತ. (ಆದರೆ 'ಡಬ್ಬ' ಎಂಬಲ್ಲಿನ [ಡ್] ಸ್ಪರ್ಶ). ತಾಡಿತವನ್ನು ಉಚ್ಚರಿಸುವಾಗ ಉಸಿರನ್ನು ಸ್ವಲ್ಪಕಾಲವೂ ನಿಲ್ಲಿಸುವುದಿಲ್ಲ. ನಾಲಗೆಯು ಮೇಲೆ ಹೋಗಿ ಒಮ್ಮೆ ಬಡಿದು ತಕ್ಷಣ ವಾಪಸಾಗುತ್ತದೆ.

**ಘರ್ಷ** (Fricative): ಆಸ್ಯದ ವಾಯುಪಥವನ್ನು ಬಹುವಾಗಿ ಸಂಕುಚಿತಗೊಳಿಸಿದಾಗ, ನುಗ್ಗಿಬಂದ ವಾಯುವು ಅಕ್ಕಪಕ್ಕದ ಭಾಗಗಳನ್ನು ಉಜ್ಜಿಕೊಂಡು ಬರುತ್ತದೆ. ಆಗ ಒಂದು ರೀತಿಯ ಉಜ್ಜುವಿಕೆ (Friction) ಕೇಳಿಸುತ್ತದೆ. ಇಂತಹ ಧ್ವನಿಗಳೇ ಘರ್ಷಗಳು. ಉದಾಹರಣೆಗೆ [s], [f], [s] ಧ್ವನಿಯನ್ನು ಹೊರಡಿಸುವಾಗ ನಾಲಗೆಯನ್ನು ಮೇಲೆತ್ತಿ ನಾಲಗೆಗೂ ಬಾಯಿಯ ಮೇಲ್ಭಾವಣಿಗೂ ಮಧ್ಯೆ ಇರುವ ಅಂತರವನ್ನು ಕಡಮೆ ಮಾಡುತ್ತೇವೆ. ಆಗ ಬರುವ ಗಾಳಿಯು ಅಂಗಗಳನ್ನು ಉಜ್ಜಿಕೊಂಡು ಬರುತ್ತದೆ. (f) ಧ್ವನಿಯನ್ನು ಹೊರಡಿಸುವಾಗ ಕೆಳಗಿನ ತುಟಿಯನ್ನು ಮೇಲ್ಭಾಗದ ದಂತಪಂಕ್ತಿಗೆ ಸೇರಿಸಿ ಉಚ್ಚರಿಸುತ್ತೇವೆ. ಆಗ ಗಾಳಿಯು ಅಕ್ಕಪಕ್ಕಗಳನ್ನು ಉಜ್ಜಿಕೊಂಡು ಬರುತ್ತದೆ. (z) ಎಂಬುದೂ ಘರ್ಷಧ್ವನಿಯೇ. ಕನ್ನಡದ [ಶ್] ಕೂಡ ಘರ್ಷಧ್ವನಿಯೇ.

ಮೇಲೆ ವಿವರಿಸಿದ ಅಂಶಗಳನ್ನು ಸದ್ಯಕ್ಕೆ ಅಲ್ಲಿಗೇ ಬಿಟ್ಟು ಈಗ ಮತ್ತೆ ಘೋಷಧ್ವನಿಗಳತ್ತ ತಿರುಗೋಣ. ಘೋಷ ಧ್ವನಿಗಳಿಗೂ ಅಘೋಷ ಧ್ವನಿಗಳಿಗೂ ಇರುವ ವ್ಯತ್ಯಾಸದತ್ತ ಆಗಲೇ ಗಮನವನ್ನು ಸೆಳೆದದ್ದಾಗಿದೆ. ಸ್ವರಗಳೆಲ್ಲವೂ ಘೋಷಧ್ವನಿಗಳು. ವ್ಯಂಜನಗಳಲ್ಲಿ ಕೆಲವು ಘೋಷಗಳು, ಕೆಲವು ಅಘೋಷಗಳು. ಅನೇಕ ಅಘೋಷಗಳಿಗೆ ಜೋಡಿಯಾದ ಘೋಷಧ್ವನಿಗಳುಂಟು. ಕೆಳಗಿನ ಪಟ್ಟಿ ಅದನ್ನು ಸ್ಪಷ್ಟಪಡಿಸುತ್ತದೆ.

| ಅಘೋಷ | ಘೋಷ |
|---|---|
| [p] | [b] |
| [t] | [d] |
| [k] | [g] |
| [f] | [v] |
| [s] | [z] |

ಇಷ್ಟನ್ನು ನೆನಪಿಟ್ಟುಕೊಂಡು, ಈಗ ಧ್ವನಿಗಳನ್ನು ವಿವರಿಸುವ ರೀತಿಯ ಕಡೆ ಹೊರಳಬಹುದು. ಹಿಂದಿನ ಪ್ಯಾರಾದಲ್ಲಿ ನಾವು ಮಾಡಿದ ವಿಭಜನೆಗಳನ್ನು ಈಗ ಮತ್ತೆ ಗಮನಿಸಬೇಕು.

[p] ಎಂಬ ಧ್ವನಿ ಉಚ್ಚಾರಣಾ ಸ್ಥಾನದ ದೃಷ್ಟಿಯಿಂದ ಓಷ್ಠ್ಯಧ್ವನಿ; ಉಚ್ಚಾರಣಾ ವಿಧಾನದ ದೃಷ್ಟಿಯಿಂದ ಸ್ಪರ್ಶಧ್ವನಿ. ಅದು ಅಘೋಷವೂ ಹೌದು. ಆದ್ದರಿಂದ ಅದನ್ನು

'ಅಘೋಷ-ಓಷ್ಠ-ಸ್ಪರ್ಶಧ್ವನಿ' (Voiceless bilabial plosive) ಎಂದು ಕರೆಯುತ್ತಾರೆ.

[b]—ಇದು ಘೋಷಧ್ವನಿ. ಆದ್ದರಿಂದ ಇದನ್ನು 'ಘೋಷ-ಓಷ್ಠ-ಸ್ಪರ್ಶಧ್ವನಿ' (Voiced bilabial plosive) ಎಂದು ಕರೆಯುತ್ತಾರೆ.

[s]—ಇದು ಅಘೋಷಧ್ವನಿ ಉಚ್ಚಾರಣಾಸ್ಥಾನದ ದೃಷ್ಟಿಯಿಂದ ಇದು ದಂತ್ಯ ; ಉಚ್ಚಾರಣಾ ವಿಧಾನದ ದೃಷ್ಟಿಯಿಂದ ಇದು ಘರ್ಷ. ಆದ್ದರಿಂದ ಇದನ್ನು 'ಅಘೋಷ-ದಂತ್ಯ-ಘರ್ಷಧ್ವನಿ' (Voiceless dental fricative) ಎಂದು ಕರೆಯುತ್ತಾರೆ.

[z]—ಇದು ಘೋಷಧ್ವನಿ ; ಉಳಿದದ್ದೆಲ್ಲ [s] ಇದ್ದಂತೆ. ಆದ್ದರಿಂದ ಇದನ್ನು 'ಘೋಷ-ದಂತ್ಯ-ಘರ್ಷಧ್ವನಿ' (Voiced dental fricative) ಎಂದು ಕರೆಯುತ್ತಾರೆ.

[k] ಇದು ಅಘೋಷ-ಕಂಠ್ಯ-ಸ್ಪರ್ಶಧ್ವನಿ (Unvoiced velar plosive)

]g] ಇದು ಘೋಷ-ಕಂಠ್ಯ-ಸ್ಪರ್ಶಧ್ವನಿ (Voiced velar plosive)

[n] ಇದು ದಂತ್ಯ-ಅನುನಾಸಿಕ ಧ್ವನಿ (Dental nasal)

ಹೀಗೆ ಒಂದೊಂದು ಧ್ವನಿಯನ್ನೂ ವಿವರಿಸಲೂ ಸಾಧ್ಯ. ಇಂತಹ ವಿವರಣೆಗಳ ಸಹಾಯದಿಂದ ನಮಗೆ ಪರಿಚಿತವಲ್ಲದ ಧ್ವನಿಗಳನ್ನೂ ಹೊರಡಿಸಬಹುದು.

ಕನ್ನಡ ಭಾಷೆಯ ಲಿಪಿ ವ್ಯವಸ್ಥೆ ಬಹುಮಟ್ಟಿಗೆ ಸಮರ್ಪಕವಾದುದು. ಎಂದರೆ ನಮ್ಮಲ್ಲಿ ಒಂದೊಂದು ಧ್ವನಿಗೂ ಪ್ರತ್ಯೇಕವಾದ ಒಂದೊಂದು ಚಿಹ್ನೆ ಉಂಟು. ಇದರಿಂದ ನಾವು ಬಹುಮಟ್ಟಿಗೆ ಮಾತನಾಡಿದಂತೆಯೇ ಬರೆಯಲು ಸಾಧ್ಯ. ಆದರೆ ಕನ್ನಡದಲ್ಲಿಯೂ ಕೆಲವು ಕಡೆ ಧ್ವನಿಗೆ ತಕ್ಕ ಲಿಪಿಯನ್ನು ಕಾಣಲಾರೆವು. ಉದಾಹರಣೆಗೆ : ಅವರು ನಮ್ಮ **ತಂದೆ** ; ಸಂತೆಯಿಂದ ಏನು **ತಂದೆ**—ಎಂಬ ಎರಡು ವಾಕ್ಯಗಳನ್ನು ಗಮನಿಸಬೇಕು. ಇಲ್ಲಿ ಬರವಣಿಗೆಯಲ್ಲಿ ಎರಡು ಕಡೆಗಳಲ್ಲೂ 'ತಂದೆ' ಎಂದೇ ಇದ್ದರೂ ಉಚ್ಚಾರಣೆಯಲ್ಲಿ ವ್ಯತ್ಯಾಸವಿದೆ. ಈ ವ್ಯತ್ಯಾಸವನ್ನು ಬರವಣಿಗೆಯಲ್ಲಿ ನಾವು ತೋರಿಸುತ್ತಿಲ್ಲ. ಆದರೂ ಕನ್ನಡಲಿಪಿಯ ಅಕ್ಷರಗಳ ಸಂಖ್ಯೆ ಕನ್ನಡಕ್ಕೆ ಸಾಕು. ಆದರೆ ಇಂಗ್ಲಿಷಿನ ಬರವಣಿಗೆಯಲ್ಲಿನ ಅಕ್ರಮಗಳನ್ನು ನೋಡಿದರೆ ಹೆದರಿಕೆಯಾಗುತ್ತದೆ. Sun ಮತ್ತು Son—ಇಲ್ಲಿ ಉಚ್ಚಾರ ಒಂದೇ, ಬರವಣಿಗೆ ಬೇರೆ. Lead ಮತ್ತು Lead—ಬರವಣಿಗೆ ಒಂದೇ, ಉಚ್ಚಾರ ಬೇರೆ. Oh, Owe, So, Sow, Though, Hoe ಮುಂತಾದ ಕಡೆ ಕೊನೆಯ ಸ್ವರ ಒಂದೇ, ಬರವಣಿಗೆಯಲ್ಲಿ ಒಂದೊಂದೂ ಬೇರೆ.

Jam ಮತ್ತು Gem—ಮೊದಲ ವ್ಯಂಜನ ಒಂದೇ ; ಆದರೆ ಬೇರೆ ಬೇರೆ ಚಿಹ್ನೆಗಳು.

Thin ಮತ್ತು Then—ಆರಂಭದ ವ್ಯಂಜನಗಳು ಬೇರೆ ; ಆದರೆ ಒಂದೇ ಚಿಹ್ನೆ.

[x] ಎನ್ನುವ ಚಿಹ್ನೆ ಒಂದು ರೀತಿ ಅನಾವಶ್ಯಕ. ಹೀಗೆ ಇಂಗ್ಲಿಷಿನಲ್ಲಿ ಉಚ್ಚಾರಣೆಗೂ ಬರವಣಿಗೆಗೂ ಅಂತರ ಹೇರಳವಾಗಿದೆ. Put ಮತ್ತು But ಎಂಬುದನ್ನು ಒಂದೇ ರೀತಿ ಉಚ್ಚರಿಸಕೂಡದು. ಒಂದು 'ಪುಟ್' ; ಮತ್ತೊಂದು 'ಬಟ್'.

ಅಲ್ಲದೆ ಪ್ರಪಂಚದ ಯಾವ ಲಿಪಿವ್ಯವಸ್ಥೆಯೂ (Alphabet) ಪ್ರಪಂಚದ ಎಲ್ಲ ಭಾಷೆಗಳಲ್ಲಿನ ಎಲ್ಲ ಧ್ವನಿಗಳನ್ನೂ ಒಳಗೊಂಡಿಲ್ಲ. ಹಿಂದಾಗಲೇ ನೋಡಿದಂತೆ, ಕನ್ನಡ ಲಿಪಿಯಲ್ಲಿ ಇಂಗ್ಲಿಷ್ ಭಾಷೆಯ z, f ಮುಂತಾದ ಧ್ವನಿಗಳನ್ನೂ, ಇಂಗ್ಲಿಷ್ ಲಿಪಿಯಲ್ಲಿ ಕನ್ನಡ ಭಾಷೆಯ ಳ್, ಣ್ ಮುಂತಾದುವನ್ನೂ ಬರೆಯಲಾಗುವುದಿಲ್ಲ. ಪ್ರಪಂಚದ ಯಾವುದೇ ಭಾಷೆಯನ್ನಾಗಲಿ ಬರೆಯಲು ಸಾಧ್ಯವಿರುವಂತಹ ಚಿಹ್ನೆಗಳುಳ್ಳ ಒಂದು ಲಿಪಿ ವ್ಯವಸ್ಥೆಯಿದ್ದರೆ ಯಾವ ಭಾಷೆಯನ್ನು ಬೇಕಾದರೂ, ಲಿಪಿಯೇ ಇಲ್ಲದ ಭಾಷೆಯನ್ನೂ ಕೂಡ, ಬರೆಯಲು ಸಾಧ್ಯ ಎಂದು ಕೆಲವು ವಿದ್ವಾಂಸರಿಗೆ ಅನ್ನಿಸಿ ಕ್ರಿ.ಶ. 1912ರಲ್ಲಿ ಒಂದು ಲಿಪಿಯನ್ನು ರೂಪಿಸಿದರು. ಅದೇ 'ಅಂತರರಾಷ್ಟ್ರೀಯ ಧ್ವನಿಲಿಪಿ' (International Phonetic Alphabet. ಇದನ್ನು IPA ಎಂದು ಸಂಗ್ರಹವಾಗಿ ಬರೆಯುತ್ತಾರೆ). ಇದು ರೂಪುಗೊಳ್ಳಲು ಎಲ್ಲಿಸ್, ಸ್ವೀಟ್, ಪಸ್ಸಿ, ಡೇನಿಯಲ್ ಜೋನ್ಸ್ ಮುಂತಾದ ವಿದ್ವಾಂಸರು ಶ್ರಮಿಸಿದರು. ಇದು ಈಚೆಗೆ ಅನೇಕ ಮಾರ್ಪಾಟುಗಳನ್ನು ಹೊಂದಿದೆ.

IPA ಲಿಪಿಯ ಮೂಲತತ್ವವೇನೆಂದರೆ ಒಂದು ಧ್ವನಿಗೆ ಒಂದು ಚಿಹ್ನೆ. ಪ್ರಪಂಚದ ಭಾಷೆಗಳಲ್ಲಿ ಅವರಿಗೆ ಎಷ್ಟು ಧ್ವನಿಗಳು ಇವೆ ಎಂದು ತಿಳಿದಿತ್ತೋ ಅಷ್ಟೂ ಧ್ವನಿಗಳಿಗೆ ಚಿಹ್ನೆಗಳನ್ನು ಅವರು ಕಲ್ಪಿಸಿಕೊಂಡರು. ಸಾಧ್ಯವಾದ ಕಡೆಗಳಲ್ಲಿ ಇಂಗ್ಲಿಷ್ ಲಿಪಿಯ ಅಕ್ಷರಗಳನ್ನೇ ಉಳಿಸಿಕೊಂಡರು. ಕೆಲವು ಕಡೆಗಳಲ್ಲಿ ಆ ಅಕ್ಷರಗಳಿಗೆ ಬೇರೆ ಗುರುತುಗಳನ್ನು (Diacritical marks) ಸೇರಿಸಿ ವ್ಯತ್ಯಾಸಗಳನ್ನು ಮಾಡಿಕೊಂಡರು. ಉದಾಹರಣೆಗೆ 'ನ್' ಧ್ವನಿಗೆ [n] ಚಿಹ್ನೆಯನ್ನೇ ಇಟ್ಟುಕೊಂಡರು. 'ಣ್'ಕ್ಕೆ [n] ಈ ಚಿಹ್ನೆಯ ಎರಡನೆಯ ಗೆರೆಯನ್ನು ಕೆಳಕ್ಕೆ ಎಳೆದು ಬಲಕ್ಕೆ ಬಾಗಿಸಿದರು ; 'ಙ'ಕ್ಕೆ ಅದೇ ಗೆರೆಯನ್ನು ಕೆಳಕ್ಕೆ ಎಳೆದು ಎಡಕ್ಕೆ ಬಾಗಿಸಿದರು. [l]. ಇದು 'ಲ್'; ಅದೇ ಚಿಹ್ನೆಯನ್ನು ಕೆಳಕ್ಕೆ ಲಂಬಿಸಿ ಕೊಂಡಿಯನ್ನು ಬಲಕ್ಕೆ ತಿರುಗಿಸಿ 'ಳ್'ಕ್ಕೆ ಸಂಕೇತವಾಗಿ ಮಾಡಿಕೊಂಡರು. ಇತರ ಯೂರೋಪಿಯನ್ ಭಾಷೆಗಳಿಂದಲೂ ಕೆಲವು ಚಿಹ್ನೆಗಳನ್ನು ತೆಗೆದುಕೊಂಡರು. ಇದರಿಂದ ಒಂದು ಸಮಗ್ರವಾದ ಲಿಪಿ ವ್ಯವಸ್ಥೆ ಸಾಧ್ಯವಾಯಿತು. ಈ ಚಿಹ್ನೆಗಳನ್ನು ಯಾರು ಬೇಕಾದರೂ ಭಾಷೆಯ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳಬಹುದು. ಬೇರೆ ಬೇರೆ ಗುರುತುಗಳನ್ನು ಬಳಸಿ. ಈ ಲಿಪಿಯಿಂದ ಪ್ರಪಂಚದ ಯಾವ ಭಾಷೆಯನ್ನಾದರೂ ಸರಿಯಾಗಿ ಯಥಾವತ್ತಾಗಿ ಬರೆಯಬಹುದು ; ಈ ಲಿಪಿ ಗೊತ್ತಿದ್ದರೆ ಅದನ್ನು ಯಥಾವತ್ತಾಗಿ ಓದಬಹುದು. ಆದರೂ ಈ ಲಿಪಿ ದೋಷರಹಿತವಾದುದಲ್ಲ ; ಇದಕ್ಕೂ ಇತಿಮಿತಿಗಳಿಲ್ಲದಿಲ್ಲ.

ಅಮೆರಿಕದ ಈಚಿನ ಭಾಷಾವಿಜ್ಞಾನಿಗಳು IPA ಲಿಪಿ ವ್ಯವಸ್ಥೆಯಲ್ಲಿ ಇನ್ನೂ ಕೆಲವು ಪ್ರಮುಖ ಬದಲಾವಣೆಗಳನ್ನು ಮಾಡಿಕೊಂಡು ತಾವೇ ಒಂದು ವರ್ಣಮಾಲೆಯನ್ನು ಬಳಸಿಕೊಳ್ಳುತ್ತಿದ್ದಾರೆ.

IPAಯಲ್ಲಿ ಧ್ವನಿಗಳನ್ನು ಈ ರೀತಿ ಅಳವಡಿಸಿರುತ್ತಾರೆ—ಕೆಲವು ಉದಾಹರಣೆಗಳನ್ನು ಮಾತ್ರ ಮುಂದೆ ಕೊಟ್ಟಿದೆ. (IPA ಪಟವನ್ನು ಅನುಬಂಧದಲ್ಲಿ ಕೊಡಲಾಗಿದೆ.)

| | Bilabial | Dental and Alveolar | Velar |
|---|---|---|---|
| Plosive | Pb | t d | k g |
| Nasal | m | n | — |
| 'Lateral | — | l | — |
| Fricative | — | sz | — |

ಒಂದೊಂದು ಮನೆಯಲ್ಲಿ ಎರಡು ಧ್ವನಿಗಳಿದ್ದರೆ ಮೊದಲನೆಯದು ಅಘೋಷ ಧ್ವನಿ, ಎರಡನೆಯದು ಘೋಷ ಧ್ವನಿ. (ಅಚ್ಚಿನ ಮೊಳೆಗಳ ಮಿತಿಗಳಿಂದಾಗಿ ಇತರ ಚಿಹ್ನೆಗಳನ್ನು ಇಲ್ಲಿ ಕೊಡಲು ಸಾಧ್ಯವಾಗಿಲ್ಲ.)

ಅಲ್ಪಪ್ರಾಣ, ಮಹಾಪ್ರಾಣಗಳಿಗಿರುವ ವ್ಯತ್ಯಾಸವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಬಹುದು. ಅಲ್ಪಪ್ರಾಣಗಳಂತೆಯೇ ಮಹಾಪ್ರಾಣಗಳನ್ನೂ ಉಚ್ಚರಿಸುತ್ತೇವೆ. ಆದರೆ ಮಹಾಪ್ರಾಣಗಳ ಉಚ್ಚಾರಣೆಯಲ್ಲಿ ಹೆಚ್ಚು ಉಸಿರನ್ನು ಹೆಚ್ಚು ಒತ್ತಡದಿಂದ ಹೊರಕ್ಕೆ ಕಳುಹಿಸುತ್ತೇವೆ. IPA ಯಲ್ಲಿ ಅಲ್ಪಪ್ರಾಣದ ಮುಂದೆ -h ಅಕ್ಷರವನ್ನು ಬರೆದರೆ ಅದು ಮಹಾಪ್ರಾಣಕ್ಕೆ ಸಂಕೇತವಾಗುತ್ತದೆ. ಕ್ [k] ; ಖ್ [kh] ಅಥವಾ [$k^h$]. ಹ್ರಸ್ವಸ್ವರಗಳನ್ನು ದೀರ್ಘವಾಗಿ ಎಳೆಯುವುದರಿಂದ ದೀರ್ಘಸ್ವರಗಳಾಗುತ್ತವೆ. ದೀರ್ಘವನ್ನು ಸ್ವರದ ಮೇಲೆ ಒಂದು ಅಡ್ಡಗೀಟನ್ನು ಬರೆಯುವುದರ ಮೂಲಕವೋ ಅಥವಾ ಅದರ ಮುಂದೆ ಒಂದರ ಕೆಳಗೊಂದು ಎರಡು ಚುಕ್ಕೆಗಳನ್ನು ಹಾಕುವುದರಿಂದಲೋ ಸೂಚಿಸುತ್ತಾರೆ. ಅ=[a]. ಆ=[ā] ಅಥವಾ [a:].

ಭಾಷಾವಿಜ್ಞಾನಿಗೆ ಧ್ವನಿವಿಜ್ಞಾನದ ಜ್ಞಾನವು ಅತ್ಯವಶ್ಯಕವೆಂದು ಭಾವಿಸುತ್ತಾರೆ. ಧ್ವನಿವಿಜ್ಞಾನದಲ್ಲಿ ಪರಿಣತರಾಗದೆ ಯಾರೂ ಭಾಷಾವಿಜ್ಞಾನದಲ್ಲಿ ಉತ್ತಮ ಕೆಲಸವನ್ನು ಮಾಡಲಾರರು. ಧ್ವನಿಗಳ ಉತ್ಪತ್ತಿ, ಅವುಗಳ ಸ್ವರೂಪ, ಅವುಗಳನ್ನು ಗುರುತಿಸುವುದು, ಅವುಗಳಿಗೆ ಸರಿಯಾದ ಸಂಕೇತಗಳನ್ನು ಬಳಸುವುದು—ಇವುಗಳು ದೀರ್ಘವಾದ ಅಭ್ಯಾಸದಿಂದಲೂ, ಅರಿತವರ ಮಾರ್ಗದರ್ಶನದಿಂದಲೂ ಬರುತ್ತವೆ. ಒಂದೇ ಧ್ವನಿಯಂತೆ ಕಾಣುವ ಎರಡು ಮೂರು ಬೇರೆ ಬೇರೆ ಧ್ವನಿಗಳನ್ನು ಗುರುತಿಸಲು ಬಹು ಸೂಕ್ಷ್ಮವಾದ ಶ್ರವಣೇಂದ್ರಿಯವೂ ಎಚ್ಚರಿಕೆಯೂ ಅಗತ್ಯ. ಆದ್ದರಿಂದ ಭಾಷಾವಿಜ್ಞಾನದ ಅಧ್ಯಯನದಲ್ಲಿ ಧ್ವನಿವಿಜ್ಞಾನಕ್ಕೆ ಬಹುಪ್ರಮುಖವಾದ ಸ್ಥಾನವು ಬಂದಿದೆ.

# 11 ವಿವರಣಾತ್ಮಕ, ಐತಿಹಾಸಿಕ ಮತ್ತು ತೌಲನಿಕ ಭಾಷಾವಿಜ್ಞಾನ

ಯಾವುದೇ ಭಾಷೆಯನ್ನಾಗಲಿ, ಅದನ್ನು ಎರಡು ದೃಷ್ಟಿಗಳಿಂದ ನೋಡಲು ಸಾಧ್ಯ. ಭಾಷೆಯನ್ನು ನಾವು ಬಳಸುತ್ತಿದ್ದೇವೆ, ಪ್ರತಿನಿತ್ಯವೂ ಅದನ್ನು ಕೇಳುತ್ತಿರುತ್ತೇವೆ. ಅದು ಈಗ ಯಾವ ಸ್ವರೂಪದಲ್ಲಿದೆಯೋ ಹಾಗೆಯೇ ಅದನ್ನು ಅಭ್ಯಸಿಸುವುದು, ಅದರ ಸ್ವರೂಪವನ್ನು ವಿವರಿಸುವುದು ಒಂದು ರೀತಿ. ಇದನ್ನು **ವಿವರಣಾತ್ಮಕ ಭಾಷಾ ವಿಜ್ಞಾನ** (Descriptive Linguistics) ಎಂದು ಕರೆಯುತ್ತಾರೆ. ಇಲ್ಲಿ ಭಾಷಾ ವಿಜ್ಞಾನಿಯು ಅದರ ಹಿಂದಿನ ಇತಿಹಾಸವನ್ನು ಕುರಿತ ವಿವೇಚನೆಗೆ ತೊಡಗುವುದಿಲ್ಲ. ಭಾಷೆಯಲ್ಲಿ ಇನ್ನೊಂದು ಭಾಷೆಯಿಂದ ಸ್ವೀಕರಿಸಿದ ಪದಗಳು ಬಳಕೆಯಲ್ಲಿರಬಹುದು. ಅವನು ಅಂತಹ ಪದಗಳನ್ನು ಆ ಭಾಷೆಗೆ ಸೇರಿದ ಪದಗಳೆಂದೇ ಭಾವಿಸಿ ಮುಂದುವರಿ ಯುತ್ತಾನೆ. ಉದಾಹರಣೆಗೆ ಕನ್ನಡ ಭಾಷೆಗೆ ವಿವರಣಾತ್ಮಕ ವ್ಯಾಕರಣವನ್ನು ಬರೆಯುವ ವ್ಯಕ್ತಿಗೆ ನೆಲ, ಹೊಲ, ಮಣ್ಣು, ಹುಡುಗ ಹೇಗೆ ಕನ್ನಡ ಪದಗಳೋ ಕೋರ್ಟು, ಜವಾನು, ಪಾದ್ರಿ, ಕಾಲೇಜು ಎಂಬುವೂ ಕನ್ನಡ ಪದಗಳೇ. ಎಂದರೆ ವಿವರಣಾತ್ಮಕ ಭಾಷಾವಿಜ್ಞಾನವು ಭಾಷೆಯನ್ನು ಒಂದು ಕಾಲ, ಒಂದು ದೇಶಕ್ಕೆ ಸೀಮಿತಗೊಳಿಸಿ, ಅಲ್ಲಿ ಬಳಕೆಯಲ್ಲಿರುವಂತೆ ಮಾತ್ರ ಅದನ್ನು ವಿವರಿಸುತ್ತದೆ.

ಪ್ರತಿ ಭಾಷೆಗೂ ಒಂದು ಇತಿಹಾಸವಿದ್ದೇ ಇರುತ್ತದೆ ಎಂಬ ಅಂಶವನ್ನು ಹಿಂದೆ ಆಗಲೇ ಗುರುತಿಸಿದ್ದೇವೆ. ಭಾಷೆ ತನ್ನ ನೂರಾರು ವರ್ಷಗಳ ಇತಿಹಾಸದಲ್ಲಿ ಅನೇಕ ಕಾರಣ ಗಳಿಂದಾಗಿ ಅನೇಕ ವ್ಯತ್ಯಾಸಗಳನ್ನು ಪಡೆಯುತ್ತಾ ಹೋಗುತ್ತದೆ. ಗ್ರಾಂಥಿಕ ಭಾಷೆ ಗಳಿಗೆ (Cultivated languages) ಲಿಪಿಯಿರುವುದರಿಂದ ಅವುಗಳಲ್ಲಿ ಪ್ರಾಚೀನ ಬರಹಗಳು ದೊರಕುತ್ತವೆ. ಭಾಷೆಯ ಈಗಿನ ಸ್ವರೂಪದೊಡನೆ ಅದರ ಹಿಂದಿನ ಸ್ವರೂಪ ಗಳನ್ನು ಹೋಲಿಸಿ ನೋಡುವುದು ಸಾಧ್ಯ ; ಭಾಷೆ ಯಾವ ಯಾವ ಕಾಲದಲ್ಲಿ ಯಾವ ಯಾವ ಅವಸ್ಥೆಗಳನ್ನು ತಾಳಿತು ಎಂಬ ಸಂಗತಿಗಳನ್ನು ತಿಳಿಯಬಹುದು. ಆದರೆ ಲಿಪಿಯಿಲ್ಲದೆ, ಕೇವಲ ಆಡುಮಾತಿನಲ್ಲಿ ಉಳಿದಿರುವ ನಿಗ್ರಾಂಥಿಕ ಭಾಷೆಗಳಲ್ಲಿ (Uncultivated languages) ಹಿಂದಿನ ಬರಹಗಳು ದೊರಕುವುದಿಲ್ಲ. ಆ ಭಾಷೆ ಒಂದೆರಡು ಶತಮಾನಗಳ ಹಿಂದೆ ಯಾವ ಸ್ವರೂಪದಲ್ಲಿದ್ದಿತು ಎಂಬುದನ್ನು ತಿಳಿಯಲು ಆಧಾರಗಳಿಲ್ಲ. ಆದರ ಈಗಿನ ಸ್ಥಿತಿಯೊಡನೆ ಹಿಂದಿನ ಸ್ಥಿತಿಗಳನ್ನು ಹೋಲಿಸಲು ಸಾಧ್ಯ

ವಿಲ್ಲ. ಈ ದೃಷ್ಟಿಯಿಂದ ಮಾತ್ರ ಆ ಭಾಷೆಗೆ ಇತಿಹಾಸವಿಲ್ಲ ಎಂದು ಹೇಳಬಹುದು. ಭಾಷೆಯು ಒಂದು ಅವಸ್ಥೆಯೊಡನೆ ಇನ್ನೊಂದು ಅವಸ್ಥೆಯನ್ನು ಅಥವಾ ಅವಸ್ಥೆಗಳನ್ನು ಹೋಲಿಸಿ ನೋಡುವುದನ್ನು **ಐತಿಹಾಸಿಕ ಭಾಷಾವಿಜ್ಞಾನ** (Historical Linguistics) ಎಂದು ಕರೆಯುತ್ತಾರೆ. ಭಾಷೆಯ ಧ್ವನಿಗಳು, ಅದರ ಕೋಶ (Vocabulary), ವ್ಯಾಕರಣ ಇತ್ಯಾದಿಗಳಲ್ಲಿ ಕಾಲಕಾಲಕ್ಕೆ ನಡೆದ ಮಾರ್ಪಾಟು ಗಳನ್ನು, ಸಾಧ್ಯವಾದರೆ ಸಕಾರಣವಾಗಿ, ನಿರೂಪಿಸುವುದೇ ಐತಿಹಾಸಿಕ ಭಾಷಾವಿಜ್ಞಾನದ ಮುಖ್ಯ ಉದ್ದೇಶ. ಈ ಗ್ರಂಥದ ಹಿಂದಿನ ಅಧ್ಯಾಯಗಳಾದ ಧ್ವನಿವ್ಯತ್ಯಾಸ, ಅರ್ಥವ್ಯತ್ಯಾಸ, ಭಾಷಾ ಸ್ವೀಕರಣಗಳು, ಸಾಮ್ಯಮೂಲವ್ಯತ್ಯಾಸ, ಅರ್ಥವ್ಯತ್ಯಾಸಗಳು ಐತಿಹಾಸಿಕ ಭಾಷಾವಿಜ್ಞಾನಕ್ಕೆ ಸೇರಿದುವು.

ಐತಿಹಾಸಿಕ ಭಾಷಾವಿಜ್ಞಾನದ ಅಂಗ **ತೌಲನಿಕ ಭಾಷಾವಿಜ್ಞಾನ** (Comparative Linguistics). ಇದನ್ನು ಐತಿಹಾಸಿಕ ಭಾಷಾವಿಜ್ಞಾನದ ಪ್ರಮುಖ ಅಂಗ ವೆಂದು ಭಾವಿಸಿದರೂ ಸರಿಯೇ, ಅಥವಾ ಅದಕ್ಕೇ ಪ್ರತ್ಯೇಕ ಸ್ಥಾನವನ್ನು ಕೊಟ್ಟರೂ ಸರಿಯೇ. ನಾಲ್ಕಾರು ಪ್ರತ್ಯೇಕ ಭಾಷೆಗಳನ್ನು ನಾವು ಅಧ್ಯಯನ ಮಾಡಿದಾಗ ಅವು ಗಳಲ್ಲಿ ಎಷ್ಟರಮಟ್ಟಿನ ಸಾಮ್ಯ ಕಂಡುಬರುತ್ತದೆಯೆಂದರೆ ಅವೆಲ್ಲವೂ ಒಂದು ಗುಂಪಿಗೆ ಸೇರಿದುವು, ಮೂಲತಃ ಒಂದು ಭಾಷೆಯಿಂದ ಕವಲೊಡೆದು ಬಂದುವು ಎಂಬ ಭಾವನೆ ಬರುತ್ತದೆ. ಅವುಗಳನ್ನು ಪರಸ್ಪರ ಹೋಲಿಸಿ, ತುಲನ ಮಾಡಿ, ಅವುಗಳಿಗೆ ಮೂಲ ವಾಗಿದ್ದಿರಬಹುದಾದ ಪಿತೃ ಭಾಷೆಯನ್ನು (Parent-language) ಅಥವಾ ಮೂಲ ಭಾಷೆಯನ್ನು (Proto-language) ಪುನಾರಚಿಸುವುದು ತೌಲನಿಕ ಭಾಷಾವಿಜ್ಞಾನದ ಮುಖ್ಯ ಉದ್ದೇಶ. ತೌಲನಿಕ ಭಾಷಾವಿಜ್ಞಾನಕ್ಕೆ ಐತಿಹಾಸಿಕ ಭಾಷಾವಿಜ್ಞಾನದ ಸಹಾಯವೂ ಅದಕ್ಕಿಂತ ಹೆಚ್ಚಾಗಿ ವಿವರಣಾತ್ಮಕ ಭಾಷಾವಿಜ್ಞಾನದ ಸಹಾಯವೂ ಅತ್ಯಂತ ಆವಶ್ಯಕ.

ಈ ಅಧ್ಯಾಯದಲ್ಲಿ ವಿವರಣಾತ್ಮಕ ಭಾಷಾವಿಜ್ಞಾನ ಮತ್ತು ತೌಲನಿಕ ಭಾಷಾವಿಜ್ಞಾನ ಗಳ ಅತ್ಯಂತ ಸ್ಥೂಲಪರಿಚಯವನ್ನು ಮಾತ್ರ ಕೊಡಲಾಗಿದೆ. ಇಲ್ಲಿ ಹೆಚ್ಚು ವಿವರಗಳಿಗೆ ಹೋಗಿಲ್ಲ. ಪಾರಿಭಾಷಿಕ ಪದಗಳನ್ನು ಆದಷ್ಟು ಕಡಮೆಮಾಡಿ, ಅವುಗಳನ್ನು ವಿವರಿಸಲು ಪ್ರಯತ್ನಮಾಡಿದೆ. ಮೇಲಿನ ಮೂರು ಶಾಖೆಗಳೂ ಪರಸ್ಪರ ಸಂಪೂರ್ಣ ಭಿನ್ನವಾದು ವಲ್ಲ; ಅವು ಪರಸ್ಪರಾವಲಂಬಿಗಳು ಮತ್ತು ಪರಸ್ಪರ ಸಂಬಂಧಿಗಳು ಎಂಬುದನ್ನು ಮರೆಯಬಾರದು.

## ವಿವರಣಾತ್ಮಕ ಭಾಷಾವಿಜ್ಞಾನ

ನಾವು ಆಡುವ ಭಾಷೆಯನ್ನು ಪರಿಶೀಲಿಸಿದರೆ ಮೊದಲು ಕಣ್ಣಿಗೆ ಬೀಳತಕ್ಕುವೆಂದರೆ ವಾಕ್ಯಗಳು. ನಾವು ವಾಕ್ಯಗಳಲ್ಲಿ ಮಾತನಾಡುತ್ತೇವೆ. (ಕೆಲವು ಸಾರಿ ಒಂದೇ ಪದವೂ ವಾಕ್ಯದ ಸ್ಥಾನದಲ್ಲಿ ನಿಲ್ಲಬಹುದು. ಉದಾಹರಣೆಗೆ–'ಎಲ್ಲಿಗೆ ಹೋಗಿದ್ದ ?' 'ಶಾಲೆಗೆ').

ವಾಕ್ಯಗಳಲ್ಲಿ ಪದಗಳಿರುತ್ತವೆ. ಪದಗಳಲ್ಲಿ ಧ್ವನಿಗಳಿರುತ್ತವೆ. ಭಾಷೆಯ ಅತ್ಯಂತ ಚಿಕ್ಕ ಘಟಕವೆಂದರೆ ಧ್ವನಿ. ಆದ್ದರಿಂದ ವಿವರಣಾತ್ಮಕ ಭಾಷಾವಿಜ್ಞಾನದ ಆರಂಭದಲ್ಲಿ ಧ್ವನಿ ಹುಟ್ಟುವ ಬಗ್ಗೆ, ಧ್ವನಿಗಳ ವರ್ಗೀಕರಣ, ಅಂತರರಾಷ್ಟ್ರೀಯ ಧ್ವನಿಲಿಪಿ ಇತ್ಯಾದಿಗಳ ಚರ್ಚೆ ಬರುತ್ತದೆ. ವಾಸ್ತವವಾಗಿ ನೋಡಿದರೆ ಧ್ವನಿವಿಜ್ಞಾನವು ವಿವರಣಾತ್ಮಕ ಭಾಷಾವಿಜ್ಞಾನಕ್ಕಾಗಲಿ, ಐತಿಹಾಸಿಕ ಭಾಷಾವಿಜ್ಞಾನಕ್ಕಾಗಲಿ ಸೇರುವುದಿಲ್ಲ. ಅದು ಎಲ್ಲ ಶಾಖೆಗಳಿಗೂ ಬೇಕಾದದ್ದು. ಆದ್ದರಿಂದ ಅದು ಸಾಮಾನ್ಯ ಭಾಷಾವಿಜ್ಞಾನದ (General Linguistics) ಶೀರ್ಷಿಕೆಯಡಿ ಬರಬೇಕಾದ ವಿಷಯ.[1] ವಿವರಣಾತ್ಮಕ ಭಾಷಾವಿಜ್ಞಾನಿ ಪ್ರಚಲಿತವಾಗಿರುವ ಭಾಷೆಗಳನ್ನು ಕೇಳಿ, ಅವುಗಳನ್ನು ಆದಷ್ಟು ನಿಷ್ಕೃಷ್ಟವಾಗಿ ಧ್ವನಿಲಿಪಿಯಲ್ಲಿ ಬರೆದುಕೊಳ್ಳಬೇಕಾಗುವುದರಿಂದ ಅವನಿಗೆ ಧ್ವನಿ ವಿಜ್ಞಾನದ ಪೂರ್ಣ ಪರಿಚಯವಿರಬೇಕಾದುದು ಅತ್ಯಂತ ಆವಶ್ಯಕ. 'ಧ್ವನಿವಿಜ್ಞಾನ' ಎಂಬ ಅಧ್ಯಾಯದಲ್ಲಿ ಹಿಂದೆ ಆಗಲೇ ಧ್ವನಿಗಳ ಉತ್ಪತ್ತಿ ಇತ್ಯಾದಿ ವಿಷಯಗಳನ್ನು ವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ.

ಮನುಷ್ಯನ ಧ್ವನ್ಯಂಗಗಳು ಹೊರಡಿಸಬಹುದಾದ ಧ್ವನಿಗಳ ಸಂಖ್ಯೆ ಅಪರಿಮಿತ. ಒಂದೊಂದು ಭಾಷೆಯೂ ಎಲ್ಲೋ ಕೆಲವು ಧ್ವನಿಗಳನ್ನು ಮಾತ್ರ ತನ್ನ ಉಪಯೋಗಕ್ಕೆ ಬಳಸಿಕೊಳ್ಳುತ್ತದೆ. ಒಂದೊಂದು ಧ್ವನಿಗೂ ಪರಸ್ಪರ ಇರುವ ವ್ಯತ್ಯಾಸವನ್ನು ಭಾಷೆ ಬೇರೆ ಬೇರೆ ಅರ್ಥಗಳನ್ನು ಸೂಚಿಸಲು ಬಳಸಿಕೊಳ್ಳುತ್ತದೆ. ಕೆಳಗಿನ ಜೋಡಿಗಳನ್ನು ನೋಡಿ—

| | |
|---|---|
| ಕಡಿ ( =to cut) | ಗಡಿ ( =border) |
| ಅನ್ನ ( =rice) | ಅಣ್ಣ ( =brother) |
| ಕಪ್ಪು ( =black) | ಕಬ್ಬು ( =sugar cane) |
| ಹಾಲು ( =milk) | ಹಾಳು ( =ruined) |

ಇಲ್ಲಿಯ ಜೋಡಿಗಳಲ್ಲಿ ವ್ಯತ್ಯಾಸವಿರುವುದು ಒಂದೊಂದು ಧ್ವನಿಯಲ್ಲಿ ಮಾತ್ರ. 'ಕಡಿ' ಮತ್ತು 'ಗಡಿ' ಎಂಬ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳನ್ನು ಕಲ್ಪಿಸಲು ಸಾಧ್ಯವಾಗಿರುವುದು [ಕ್] ಮತ್ತು [ಗ್] ಎಂಬ ಧ್ವನಿಗಳಿಗಿರುವ ವ್ಯತ್ಯಾಸದಿಂದ. ಹಾಗೆಯೇ [ನ್], [ಣ್] ; [ಪ್], [ಬ್] ; [ಲ್], [ಳ್]—ಈ ಧ್ವನಿಗಳಿಗಿರುವ ವ್ಯತ್ಯಾಸಗಳನ್ನು ಕನ್ನಡ ಭಾಷೆಯು ಬಳಸಿಕೊಂಡಿದೆ. ಆದ್ದರಿಂದ ಇವುಗಳಿಗಿರುವ ವ್ಯತ್ಯಾಸವನ್ನು ಉಪಯುಕ್ತ ವ್ಯತ್ಯಾಸವೆಂದು (Distinctive or Functional difference) ಕರೆಯಬಹುದು. ಕನ್ನಡವು ಇವುಗಳಿಗಿರುವ ವ್ಯತ್ಯಾಸವನ್ನು ಬಳಸಿಕೊಳ್ಳದೇ ಇದ್ದಿದ್ದರೆ ಇವುಗಳಿಗಿರುವ ವ್ಯತ್ಯಾಸವು ನಿರುಪಯುಕ್ತ ವ್ಯತ್ಯಾಸವಾಗುತ್ತಿದ್ದಿತು (Non-distinctive or Non-functional difference). ಈ ಮಾತುಗಳು ಕನ್ನಡಕ್ಕೆ ಅನ್ವಯ

---

[1] 'ಭಾಷೆಯೆಂದರೇನು ?', 'ಭಾಷೆಯ ಉಗಮ', 'ಭಾಷಾವರ್ಗೀಕರಣ'—ಇವು ಸಾಮಾನ್ಯ ಭಾಷಾವಿಜ್ಞಾನಕ್ಕೆ ಸೇರಿದ ವಿಷಯಗಳು.

ವಾಗುತ್ತವೆ; ಬೇರೆ ಭಾಷೆಗಳಿಗೆ ಅನ್ವಯವಾಗಬಹುದು, ಅನ್ವಯವಾಗದೇ ಇರಬಹುದು.

ಇಂಗ್ಲಿಷ್ ಭಾಷೆಯಿಂದ ಕೆಲವು ನಿದರ್ಶನಗಳನ್ನು ತೆಗೆದುಕೊಳ್ಳೋಣ.

| | |
|---|---|
| pat | bat |
| pan | ban |
| pin | bin |
| pull | bull |

ಇಲ್ಲಿಯ [p] ಮತ್ತು [b] ಗಳಿಗಿರುವ ವ್ಯತ್ಯಾಸವು ಉಪಯುಕ್ತವಾದುದು, ಕನ್ನಡದಲ್ಲಿ ನಂತೆಯೇ. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳನ್ನಾಡುವವರು [ಪ್] ಮತ್ತು [ಬ್] ಗಳಿಗಿರುವ ವ್ಯತ್ಯಾಸವನ್ನು ಗಮನಿಸುವಂತಹ ಶಿಕ್ಷಣವನ್ನು ಬಾಲ್ಯದಿಂದಲೂ ಪಡೆದಿರು ತ್ತಾರೆ. ಆದರೆ ಈ ಮಾತುಗಳು ಎಲ್ಲ ಭಾಷೆಗಳಿಗೂ ಅನ್ವಯವಾಗಬೇಕಾಗಿಲ್ಲ. ಉದಾ ಹರಣೆಗೆ ಜರ್ಮನ್ ಭಾಷೆಯ ಒಂದು ಉಪಭಾಷೆಯಲ್ಲಿ ಮತ್ತು ಮೆನೊಮಿನಿ ಭಾಷೆಯಲ್ಲಿ ಮೇಲಿನ ಎರಡು ಧ್ವನಿಗಳಿಗೆ ವ್ಯತ್ಯಾಸವನ್ನೇ ಗುರುತಿಸುವುದಿಲ್ಲ. ಆ ಭಾಷೆಗಳಲ್ಲಿ ಆ ಧ್ವನಿಗಳಿಗಿರುವ ವ್ಯತ್ಯಾಸವು ನಿರುಪಯುಕ್ತವಾದುದು. ಇಂಗ್ಲಿಷ್ ಭಾಷೆಯ ಪರಿಚಯ ವಿಲ್ಲದ ಮೇಲಿನ ಉಪಭಾಷೆಯನ್ನಾಡುವ ಜರ್ಮನನ ಕಿವಿಗೆ 'pin' ಮತ್ತು 'bin' ಎಂಬ ಶಬ್ದಗಳಿಗಿರುವ ವ್ಯತ್ಯಾಸವೇ ಕೇಳಿಸದಿರಬಹುದು. ಅದಕ್ಕೆ ಕಾರಣ, ಅವುಗಳಿಗಿರುವ ವ್ಯತ್ಯಾಸವನ್ನು ಗುರುತಿಸುವ ಆವಶ್ಯಕತೆಯೂ ಅವನಿಗೆ ಇಲ್ಲ, ಅಂತಹ ಶಿಕ್ಷಣವನ್ನೂ ಪಡೆದಿರುವುದಿಲ್ಲ. ಮೆನೊಮಿನಿ ಭಾಷೆಯಲ್ಲಿ ನೀರು ಎಂಬ ಅರ್ಥದಲ್ಲಿ [nipēw] ಎಂಬ ಪದವಿದೆ. ಅದನ್ನು [nibēw] ಎಂದು ಉಚ್ಚರಿಸಿದರೂ ಯಾವ ವ್ಯತ್ಯಾಸವೂ ಆಗುವು ದಿಲ್ಲ. [p] ಮತ್ತು [b] ಗಳೆರಡೂ ಒಂದೇ ವರ್ಗಕ್ಕೆ ಸೇರಿದ ಧ್ವನಿಗಳು. ಒಂದು ಬಂದ ಕಡೆ ಮತ್ತೊಂದು ಯಾವ ಅರ್ಥವ್ಯತ್ಯಾಸಕ್ಕೂ ಕಾರಣವಾಗದೆ ಬರುವುದರಿಂದ ಅವೆರಡೂ ಸ್ವಚ್ಛಂದ ಪರಿವರ್ತನ (free variation) ದಲ್ಲಿವೆ ಎಂದು ಹೇಳುತ್ತಾರೆ.

ಇಂಗ್ಲಿಷಿನಲ್ಲಿ ಇನ್ನೊಂದು ಉದಾಹರಣೆಯನ್ನು ನೋಡೋಣ. pin ಮತ್ತು Spin ಎಂಬ ಪದಗಳ ಉಚ್ಚಾರಣೆಯನ್ನು ಗಮನಿಸಿದಾಗ pin ಎಂಬ ಪದದ ಉಚ್ಚಾರದಲ್ಲಿ [p] ಧ್ವನಿಯನ್ನು ಮಹಾಪ್ರಾಣವಾಗಿಯೂ, Spin ಎಂಬ ಪದದ ಉಚ್ಚಾರದಲ್ಲಿ [p] ಧ್ವನಿಯನ್ನು ಅಲ್ಪಪ್ರಾಣವಾಗಿಯೂ ಹೇಳುತ್ತಾರೆ— [phin] ಮತ್ತು [spin] ಎಂಬಂತೆ. ಇಂಗ್ಲಿಷ್ ಭಾಷೆಯ ಇತರ ಅನೇಕ ಪದಗಳನ್ನು ನೋಡಿದರೆ ಪದದ ಆರಂಭದಲ್ಲಿ ಸ್ವರದ ಹಿಂದೆ ಮಹಾಪ್ರಾಣ [ph] ಧ್ವನಿಯೂ, ವ್ಯಂಜನ ಸಮೇತ ವಾಗಿರುವ ಕಡೆ ಅಲ್ಪಪ್ರಾಣ [p] ಧ್ವನಿಯೂ ಬರುತ್ತದೆ. ಎಂದರೆ ಮಹಾಪ್ರಾಣ ಮತ್ತು ಅಲ್ಪಪ್ರಾಣಗಳು ಬರುವ ಸ್ಥಳಗಳು ನಿರ್ದಿಷ್ಟವಾಗಿವೆ. ಒಂದು ಯಾವ ಪರಿಸರ ದಲ್ಲಿ (Environment) ಕಾಣಿಸಿಕೊಳ್ಳುವುದೋ ಅಲ್ಲಿ ಇನ್ನೊಂದು ಕಾಣಿಸಿಕೊಳ್ಳುವು ದಿಲ್ಲ. ಇನ್ನೊಂದು ಯಾವ ಪರಿಸರದಲ್ಲಿ ಕಾಣಿಸಿಕೊಳ್ಳುವುದೋ ಅಲ್ಲಿ ಮೊದಲನೆಯದು ಕಾಣಿಸಿಕೊಳ್ಳುವುದಿಲ್ಲ. ಈ ಎರಡು ಧ್ವನಿಗಳೂ (ph ಮತ್ತು p ಗಳು) ಪೂರಕ

ಪ್ರಸಾರದಲ್ಲಿವೆ (Complementary distribution) ಎಂದು ಹೇಳಬಹುದು.

ತಮಿಳು ಭಾಷೆಯಲ್ಲಿ ಘೋಷ ಮತ್ತು ಅಘೋಷಗಳಿಗೆ ಪ್ರತ್ಯೇಕ ಚಿಹ್ನೆಗಳಿಲ್ಲ. ಎರಡಕ್ಕೂ ಒಂದೇ ಚಿಹ್ನೆಯಿದೆ. ಉದಾಹರಣೆಗೆ [ಕ] ಮತ್ತು [ಗ]ಗಳಿಗೆ ಎರಡು ಪ್ರತ್ಯೇಕ ಚಿಹ್ನೆಗಳೇ ಇಲ್ಲ. ಭಾಷೆಯಲ್ಲಿ [ಕ] ಮತ್ತು [ಗ]ಗಳು ಬಂದ ಕಡೆ ಒಂದೇ ಚಿಹ್ನೆಯನ್ನು ಬಳಸುತ್ತಾರೆ. ಅದಕ್ಕೆ ಕಾರಣ ಘೋಷಧ್ವನಿಗಳು ಮತ್ತು ಅಘೋಷಧ್ವನಿಗಳು ಅಲ್ಲಿ ಕಾಣಿಸಿಕೊಳ್ಳುವ ಪರಿಸರಗಳು ನಿರ್ದಿಷ್ಟವಾಗಿವೆ. ಒಂದು ಬಂದ ಕಡೆ ಮತ್ತೊಂದು ಬರುವುದಿಲ್ಲ. ಪದದ ಆರಂಭದಲ್ಲಿ ಅಘೋಷ ಧ್ವನಿಯೇ ಬರಬೇಕು; ಪದದ ಮಧ್ಯೆ ಘೋಷ ಧ್ವನಿಯೇ ಬರಬೇಕು. 'ಗಣಪತಿ' ಎಂಬುದನ್ನು 'ಕಣಬದಿ' ಎಂದು ಉಚ್ಚರಿಸುತ್ತಾರೆ. ಆದ್ದರಿಂದ ತಮಿಳಿನಲ್ಲಿ [ಕ] ಮತ್ತು [ಗ]ಗಳು ಪೂರಕ ಪ್ರಸಾರದಲ್ಲಿವೆ. ಆವೆರಡು ಧ್ವನಿಗಳೂ ಒಂದು ವರ್ಗಕ್ಕೆ ಸೇರಿದುವು.

ಧ್ವನಿಮಾ ಎಂಬುದು ಒಂದು ಧ್ವನಿ ಅಲ್ಲ, ಅದೊಂದು ಧ್ವನಿಗಳ ವರ್ಗ. (Phoneme is a class of sounds). ಮೆನೊಮಿನಿ ಭಾಷೆಯಲ್ಲಿ [p] ಮತ್ತು [b] ಗಳು ಸ್ವಚ್ಛಂದ ಪರಿವರ್ತನದಲ್ಲಿರುವುದರಿಂದ ಅವೆರಡೂ ಒಂದು ವರ್ಗಕ್ಕೆ ಸೇರಿದುವೆಂದು ಭಾವಿಸಬಹುದು. ಅಥವಾ ಅವೆರಡೂ /p/ ಅಥವಾ /b/ ಎಂಬ ಧ್ವನಿಮಾದ ಎರಡು ಉಪಧ್ವನಿಗಳು (Allophones). /p/ಅಥವಾ /b/ ಎಂದು ಹೇಳಲು ಕಾರಣ, ಆ ಧ್ವನಿಮಾಕ್ಕೆ ನಾವು ಯಾವ ಹೆಸರನ್ನು ಬೇಕಾದರೂ ಕೊಡಬಹುದು. ಧ್ವನಿಮಾ ಎಂಬುದು ನಾವು ಕಲ್ಪಿಸಿದ್ದು, ಆ ವರ್ಗಕ್ಕೆ ನಾವು ಕೊಟ್ಟ ಹೆಸರು. ಹಾಗೆಯೇ ಇಂಗ್ಲಿಷಿನಲ್ಲಿ [ph] ಮತ್ತು [p] ಗಳು ಪೂರಕ ಪ್ರಸಾರದಲ್ಲಿವೆಯಾದ್ದರಿಂದ ಅವೆರಡೂ ಒಂದು ವರ್ಗಕ್ಕೆ ಸೇರಿದುವೆಂದು ಭಾವಿಸಬಹುದು. ಆ ವರ್ಗವನ್ನು ಅಥವಾ ಧ್ವನಿಮಾವನ್ನು ನಾವು /ph/ ಎಂದಾಗಲಿ, /p/ ಎಂದಾಗಲಿ ಬರೆಯಬಹುದು. ಇಂಗ್ಲಿಷಿನಲ್ಲಿ [ph] ಮತ್ತು [p] ಗಳು ಒಂದು ಧ್ವನಿಮಾದ ಎರಡು ಉಪಧ್ವನಿಗಳು.

ಧ್ವನಿಮಾಗಳನ್ನು ಕಂಡುಹಿಡಿಯಲು ಅತ್ಯುತ್ತಮ ಮಾರ್ಗವೆಂದರೆ 'ವೈದೃಶ್ಯ'ಗಳನ್ನು (contrast) ಕಂಡುಹಿಡಿಯುವುದು. ಎರಡು ಧ್ವನಿಗಳು ಒಂದೇ ಪರಿಸರದಲ್ಲಿ ಕಾಣಿಸಿಕೊಂಡು ಅರ್ಥವ್ಯತ್ಯಾಸಕ್ಕೆ ಕಾರಣವಾಗಿದ್ದರೆ ಅವೆರಡೂ 'ವೈದೃಶ್ಯ'ದಲ್ಲಿವೆ ಎಂದು ಹೇಳುತ್ತೇವೆ. ಉದಾಹರಣೆಗೆ ಇಂಗ್ಲಿಷಿನ [pin] ಮತ್ತು [bin] ಪದಗಳಲ್ಲಿ [p] ಬಂದ ಪರಿಸರದಲ್ಲಿಯೇ [b] ಬಂದಿದೆ ; ಅರ್ಥವ್ಯತ್ಯಾಸವೂ ಇದೆ. ಆದ್ದರಿಂದ ಅವೆರಡೂ ಪ್ರತ್ಯೇಕ ಧ್ವನಿಮಾಗಳು. /p/ ಧ್ವನಿಮಾಕ್ಕೆ ಇಂಗ್ಲಿಷಿನಲ್ಲಿ ಎರಡು ಉಪಧ್ವನಿಗಳಿವೆ— ಒಂದು [ph] ಮತ್ತೊಂದು [p]. ಧ್ವನಿಮಾಗಳನ್ನು ಬರೆಯಲು / / ಈ ಚಿಹ್ನೆಯನ್ನೂ, ಉಪಧ್ವನಿಗಳನ್ನು ಬರೆಯಲು [ ] ಈ ಚಿಹ್ನೆಯನ್ನೂ ಬಳಸುತ್ತಾರೆ. ಉಪಧ್ವನಿಗಳನ್ನು ಕಂಡುಹಿಡಿಯಲು ಮೇಲೆ ವಿವರಿಸಿದ ಸ್ವಚ್ಛಂದ ಪರಿವರ್ತನ (Free variation) ಮತ್ತು ಪೂರಕಪ್ರಸಾರಗಳು (Complementary distribution) ಉತ್ತಮ ಸಾಧನಗಳು.

ಒಂದು ಭಾಷೆಗೆ ವರ್ಣಮಾಲೆಯನ್ನು ರಚಿಸುವಾಗ ಆ ಭಾಷೆಯಲ್ಲಿನ ಧ್ವನಿಮಾಗಳಿಗೆ ಮಾತ್ರ ಚಿಹ್ನೆಗಳನ್ನು ಕೊಟ್ಟರೆ ಸಾಕು. ಒಂದೊಂದು ಉಪಧ್ವನಿಗೂ ಚಿಹ್ನೆಯನ್ನು ಕೊಡುತ್ತಾ ಹೋದರೆ ಅದಕ್ಕೆ ಕೊನೆಯೆಂಬುದೇ ಇರುವುದಿಲ್ಲ.

ಧ್ವನಿಮಾ ವಿಜ್ಞಾನವು (Phonemics) ಒಂದು ಭಾಷೆಯ ಧ್ವನಿಮಾಗಳು, ಧ್ವನಿಮಾಗಳ ಉಪಧ್ವನಿಗಳನ್ನು ಕಂಡುಹಿಡಿಯುವ ತಂತ್ರವನ್ನು ವಿವರಿಸುತ್ತದೆ. ಈ ತಂತ್ರವನ್ನು ಧ್ವನಿಮಾ ವಿಶ್ಲೇಷಣತಂತ್ರವೆಂದು (Technique of Phonemic Analysis) ಎಂದು ಕರೆಯುತ್ತಾರೆ. ಹೊಸದಾಗಿ ಒಂದು ಭಾಷೆಯನ್ನು ಅಧ್ಯಯನ ಮಾಡುವಾಗ, ಆ ಭಾಷೆಯ ಉಚ್ಚಾರಣೆಯಲ್ಲಿ ಕೇಳಿಬರುವ ಎಲ್ಲ ಧ್ವನಿಗಳನ್ನೂ ಬರೆದಿಡಬೇಕು. ಧ್ವನಿಲಿಪಿಯಲ್ಲಿ (Phonetic script) ಹೀಗೆ ಬರೆದುಕೊಂಡ ಭಾಷೆಯ ಪದಗಳನ್ನು ಪರೀಕ್ಷೆಗೆ ಗುರಿಮಾಡಿ ಆ ಧ್ವನಿಗಳಲ್ಲಿ ಧ್ವನಿಮಾಗಳು ಯಾವುವು, ಉಪಧ್ವನಿಗಳು ಯಾವುವು ಎಂಬುದನ್ನು ಕಂಡುಹಿಡಿಯಬೇಕು. ಆ ತಂತ್ರದ ವಿವರಣೆ ಈ ಪುಸ್ತಕದ ಯೋಜನೆಗಂತೂ ಹೊರತಾದುದು. ಧ್ವನಿವಿಜ್ಞಾನವು ಸಾಮಾನುಗಳನ್ನು ಒದಗಿಸುತ್ತದೆ. ಧ್ವನಿಮಾವಿಜ್ಞಾನವು ಅಡುಗೆ ಮಾಡುತ್ತದೆ ಎಂದು ಹೇಳುವುದುಂಟು ("Phonetics gathers raw material. Phonemics cooks it.")

ಒಂದು ಭಾಷೆಯ ವ್ಯಾಕರಣವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು: **ಆಕೃತಿಮ ವಿಜ್ಞಾನ** (Morphology) ಮತ್ತು **ವಾಕ್ಯವಿಜ್ಞಾನ** (Syntax), ಪದಗಳ ರಚನೆಯನ್ನು ವಿವರಿಸುವುದು ಆಕೃತಿಮ ವಿಜ್ಞಾನ; ಪದಗಳನ್ನು ಸೇರಿಸಿ ಪದಪುಂಜಗಳನ್ನೂ (Phrases) ಮತ್ತು ವಾಕ್ಯಗಳನ್ನೂ (Sentences) ಮಾಡುವ ವಿಧಾನವನ್ನು ಅಥವಾ ಅವುಗಳ ರಚನೆಯನ್ನು ವಿವರಿಸುವುದೇ ವಾಕ್ಯವಿಜ್ಞಾನ. ಧ್ವನಿಗಳು, ಧ್ವನಿಗಳಿಂದ ಪದಗಳು, ಪದಗಳಿಂದ ವಾಕ್ಯಗಳು—ಹೀಗೆ ಭಾಷೆಯ ಕಟ್ಟಡವು ಸಿದ್ಧವಾಗಿರುತ್ತದೆ.

ಆಕೃತಿಮ (Morpheme) ಒಂದು ಭಾಷೆಯ ಅರ್ಥಪೂರ್ಣವಾದ ಅತ್ಯಂತ ಚಿಕ್ಕ ಘಟಕ ('the smallest meaningful unit'). ಭಾಷೆಯಲ್ಲಿ ಧ್ವನಿಗಳಿಗೆ ಅರ್ಥವಿಲ್ಲ. 'ಕರು' ಎಂಬ ಪದದಲ್ಲಿ [ರು] ಎಂಬ ಧ್ವನಿಗೆ ಅರ್ಥವೇನು ? ಅದಕ್ಕೆ ಏನೂ ಅರ್ಥವಿಲ್ಲ. ಆದರೆ 'ಹುಡುಗರು' ಎಂಬಲ್ಲಿ [-ರು] ಎಂಬುದಕ್ಕೆ ಅರ್ಥವಿದೆ. ಅದು ಬಹುವಚನವನ್ನು ಸೂಚಿಸುತ್ತದೆ. '[See]' ಎಂಬ ಪದದಲ್ಲಿ [s[ ಎಂಬ ಧ್ವನಿಗೆ ಅರ್ಥವಿಲ್ಲ. ಆದರೆ 'boys' ಎಂಬ ಪದದಲ್ಲಿ [-s] ಗೆ ಅರ್ಥವಿದೆ. ಅದು ಬಹುವಚನ ಪ್ರತ್ಯಯ. ಈ ಪ್ರತ್ಯಯವನ್ನು ಮತ್ತೆ ಅರ್ಥಪೂರ್ಣವಾದ ಘಟಕಗಳಾಗಿ ಒಡೆಯಲು ಸಾಧ್ಯವಿಲ್ಲ. ಆದ್ದರಿಂದ ಇದೊಂದು ಆಕೃತಿಮ. princely ಎಂಬ ಪದವನ್ನು ಒಡೆಯಲು ಸಾಧ್ಯ: prince ಮತ್ತು -ly. ಆದ್ದರಿಂದ ಇವೆರಡೂ ಆಕೃತಿಮಗಳು. ಮಾತಿನಲ್ಲಿ ಸ್ವತಂತ್ರವಾಗಿ ಅರ್ಥವತ್ತಾಗಿ ಬಳಸಬಹುದಾದ ರೂಪಗಳನ್ನು ಮುಕ್ತರೂಪಗಳೆಂದೂ (Free form), ಸ್ವತಂತ್ರವಾಗಿ ಬಳಸಲಾಗದ ರೂಪಗಳನ್ನು ಬದ್ಧರೂಪಗಳೆಂದೂ (Bound form)

ರೆಯುತ್ತಾರೆ. go, man, singing, lovely, ಮರ, ಹೋಗುತ್ತಾನೆ—ಇವು ುಕ್ತರೂಪಗಳು.—ing,—ish,—ly,—ದಲ್ಲಿ,—ಇಂದ,—ತ್ತಾನೆ,—ಗಳು ಇವು ದ್ಧರೂಪಗಳು. ಒಂದೋ ಹಲವೋ ಬದ್ಧರೂಪಗಳಿರುವ ಪದವನ್ನು ಸಂಕೀರ್ಣ Complex) ವೆಂದೂ, ಬರಿಯ ಮುಕ್ತರೂಪಗಳಿರುವ ಪದವನ್ನು ಸಮಾಸ (Compound) ವೆಂದೂ ಕರೆಯಬಹುದು.

ಸಂಕೀರ್ಣಪದಗಳು : played, going, ಹಾಡುತ್ತಾನೆ, ಮರಗಳು.

ಸಮಾಸಪದಗಳು : blue-bird, man-child, ಕಮಲನೇತ್ರ. ಒಂದು ರೂಪವು, ದು ಬದ್ಧವಾಗಿರಲಿ ಅಥವಾ ಮುಕ್ತವಾಗಿರಲಿ, ಅದನ್ನು ಇನ್ನೂ ಚಿಕ್ಕ ಅರ್ಥವತ್ತಾದ ಟಕಗಳಾಗಿ ವಿಭಜಿಸಲು ಬಾರದಂತಿದ್ದರೆ ಆಕೃತಿಮವೆಂದು ಕರೆಯಿಸಿಕೊಳ್ಳುತ್ತದೆ. o ಮತ್ತು -ing ಗಳೆರಡನ್ನು ಇನ್ನೂ ಚಿಕ್ಕದಾಗಿ ಒಡೆಯಲು ಸಾಧ್ಯವಿಲ್ಲವಾದ್ದರಿಂದ ವು ಆಕೃತಿಮಗಳು. ಒಂದು ಭಾಷೆಯ ಆಕೃತಿಮಗಳನ್ನು ಗುರುತಿಸಿದ ಮೇಲೆ ಅವು ಟ್ಟುಗೂಡಿ ಪದಗಳಾಗುವ ವಿಧಾನದ, ಆ ಸಮಯದಲ್ಲಿ ನಡೆಯುವ ಸಂಧಿಕಾರ್ಯಗಳ ಧ್ಯಯನವು ಆಮೇಲೆ ನಡೆಯುತ್ತದೆ.

ಭಾಷೆಯಲ್ಲಿ ಒಂದೊಂದು ಪ್ರಕೃತಿಯೂ (Base) ಹಲವು ಆಕಾರಗಳನ್ನು ತಾಳಿ ಬೇರೆ ಬೇರೆ ಅರ್ಥಛಾಯೆಗಳನ್ನು ತಾಳುತ್ತದೆ. 'ಹಾಡು' ಎಂಬ ಪ್ರಕೃತಿಯಿಂದ ಹಾಡುತ್ತಾನೆ, ಹಾಡುವಿಕೆ, ಹಾಡು (Song), ಹಾಡುಗಾರ ಇತ್ಯಾದಿ ಪದಗಳು ಸೃಷ್ಟಿಯಾಗುತ್ತವೆ. ಹೀಗೆ ಪ್ರಕೃತಿಗಳು ಬೇರೆ ಬೇರೆ ಅರ್ಥಗಳನ್ನು ಕೊಡುವುದಕ್ಕಾಗಿ ಬೇರೆ ಬೇರೆ ಆಕಾರಗಳನ್ನು ತಾಳುವ ವಿಧಾನಗಳು ಐದು ಎಂದು ಹೇಳುತ್ತಾರೆ. (1) **ಪ್ರತ್ಯಯೀಕರಣ** (Affixation). ಪ್ರಕೃತಿಯು ಪ್ರತ್ಯಯಗಳನ್ನು ಪಡೆಯುವುದು—ಇದು ಬಹು ಸಾಮಾನ್ಯವಾದುದು. ಪ್ರತ್ಯಯಗಳಲ್ಲಿ ಆದಿಪ್ರತ್ಯಯ (Prefix), ಮಧ್ಯಪ್ರತ್ಯಯ (Infix), ಅಂತ್ಯಪ್ರತ್ಯಯ (Suffix) ಎಂಬ ಪ್ರಭೇದಗಳುಂಟು. ಅವಲಕ್ಷಣ, unkind ಎಂಬಲ್ಲಿ ಅವ-, un- ಎಂಬುವು ಆದಿಪ್ರತ್ಯಯಗಳು. ಮಲಯನ್ ಭಾಷೆಯಲ್ಲಿ ಮಧ್ಯಪ್ರತ್ಯಯಗಳಿವೆ. ಉದಾ : sulat (=writing), su-n-lat (=to write). ಮಧ್ಯ ಪ್ರತ್ಯಯಗಳು ಉಳಿದ ಭಾಷೆಗಳಲ್ಲಿ ಬಹಳ ಅಪೂರ್ವ. coming, ಅಣ್ಣಂದಿರು ಎಂಬಲ್ಲಿ-ing,-ಂದಿರು ಅಂತ್ಯಪ್ರತ್ಯಯಗಳು. (2) **ಆಂತರಿಕ ವ್ಯತ್ಯಾಸ** (Internal change). ಪ್ರಕೃತಿಯು ಆಂತರಿಕ ವ್ಯತ್ಯಾಸಗಳನ್ನು ಪಡೆಯುವುದು. ಉದಾ: sing-sang-sung-song; ಆಡು-ಆಟ. (3) **ಅಭ್ಯಾಸ** (Reduplication). ಪ್ರಕೃತಿಯನ್ನು ಇಡಿಯಾಗಿಯೋ ಅಥವಾ ಅದರ ಒಂದು ಭಾಗವನ್ನೋ ಪುನರಾವರ್ತನಗೊಳಿಸುವುದು. ಸಂಸ್ಕೃತ : ಗಮ್—ಜಗಾಮ ; ತರ್—ತತಾರ. ಇಲ್ಲಿ ಧಾತುಗಳು ಪುನರಾವರ್ತನಗೊಂಡು ಭೂತಕಾಲದ ರೂಪಗಳು ಸಿದ್ಧವಾಗಿವೆ. ಇಂಡೋನೇಷಿಯನ್ ಭಾಷೆಯಲ್ಲಿ ಒಂದು ನಾಮಪದವನ್ನು ಇನ್ನೊಮ್ಮೆ ಪುನರಾವರ್ತನಮಾಡಿದರೆ ಅದರ ಬಹುವಚನ ರೂಪವು ಸಿದ್ಧವಾಗುತ್ತದೆ. (4) **ಭಿನ್ನಪದಾಗಮ** (Suppletion).

ಇಲ್ಲಿ ಒಂದು ಪ್ರಕೃತಿಯು ಸ್ಥಾನದಲ್ಲಿ ಇನ್ನೊಂದು ಭಿನ್ನರೂಪವನ್ನೇ ತರಲಾಗುತ್ತ ಉದಾ: ga-went; bad-worse. (5) **ಶೂನ್ಯಪ್ರತ್ಯಯ** (Zero-suffix ಒಂದು ಪ್ರಕೃತಿ ಯಾವ ವ್ಯತ್ಯಾಸವೂ ಇಲ್ಲದೆ ಭಿನ್ನಾರ್ಥವನ್ನು ಕೊಡಬಹುದು. ಅ ಅದಕ್ಕೆ ಶೂನ್ಯಪ್ರತ್ಯಯ ಹತ್ತಿದೆ ಎಂದು ಹೇಳುವುದು ವಾಡಿಕೆ. sheep (ಏ. ವ)- sheep (ಬ. ವ); ಹಾಡು (=to sing)-ಹಾಡು (=a song).

ಇಂಗ್ಲಿಷ್ ಭಾಷೆಯಲ್ಲಿ ಪದಗಳನ್ನು ಅವುಗಳ ಅರ್ಥವನ್ನನುಸರಿಸಿ ಎಂಟು ವರ್ಗ ಗಳಾಗಿ ವಿಂಗಡಿಸುವ ರೂಢಿ ಉಂಟು. ಅವುಗಳನ್ನು 'Parts of speech' ಎಂ ಕರೆಯುತ್ತಾರೆ.nouns, pronouns, adjectives, verbs, adverbs, prepos tions. conjunctions ಮತ್ತು interjections.—ಆದರೆ ಇದು ಸರ್ವವ್ಯಾಪಕವ ಎಂದು ಭಾವಿಸಲಾಗಿದೆ. ಇಂಗ್ಲಿಷ್ ಭಾಷೆಯ ಈ ವರ್ಗೀಕರಣ ಪ್ರಪಂಚದ ಎ ಭಾಷೆಗಳಿಗೂ ಅನ್ವಯವಾಗುವುದಿಲ್ಲ. ಉದಾಹರಣೆಗೆ, ಟರ್ಕಿಷ್ ಭಾಷೆಯಲ್ಲಿ ವಾಸ್ತ ವಾಗಿ ಎರಡೇ ವರ್ಗಗಳಿವೆಯೆಂದು ಹೇಳುತ್ತಾರೆ—ನಾಮಪದಗಳು ಮತ್ತು ಕ್ರಿಯಾಪ ಗಳು. ಸರ್ವನಾಮಗಳನ್ನು ಪ್ರತ್ಯಯಗಳ ಮೂಲಕ ಸೂಚಿಸಲಾಗುತ್ತದೆ. ಆದ್ದರಿಂ ಅರ್ಥವನ್ನನುಸರಿಸಿ ಪದಗಳನ್ನು ವರ್ಗೀಕರಿಸುವುದಕ್ಕಿಂತ ಅವುಗಳ ರೂಪವನ್ನನುಸರಿ ಅವುಗಳು ವಾಕ್ಯಗಳಲ್ಲಿ ಕಾಣಿಸಿಕೊಳ್ಳುವ ಪರಿಸರಗಳನ್ನನುಸರಿಸುವುದು ಉತ್ತಮ ಇವುಗಳನ್ನು 'Form classes' ಎನ್ನುತ್ತಾರೆ. "The—was good", "The- man came". ಇಂತಹ ಚೌಕಟ್ಟುಗಳನ್ನು ಮಾಡಿ, ಅವುಗಳಲ್ಲಿ ಖಾಲಿ ಬಿಟ್ಟಿರು ಜಾಗಗಳಿಗೆ ಭರ್ತಿಮಾಡಲು ಬರುವಂತಹ ಪದಗಳನ್ನು ಒಂದು ವರ್ಗವಾಗಿ ವಿಂಗಡಿ ಬಹುದು. ಅವುಗಳಿಗೆ ನಾಮಪದ, ಗುಣವಾಚಕ ಎಂಬ ಸಾಂಪ್ರದಾಯಿಕ ಹೆಸ ಗಳನ್ನು ಕೊಡುವುದರಲ್ಲಿ ತಪ್ಪೇನೂ ಇಲ್ಲ.

ಪದಗಳು ಸೇರಿ ಪದಪುಂಜಗಳೂ (Phrase) ವಾಕ್ಯಗಳೂ ಆಗುವ ವಿಧಾನವನ ವಿವರಿಸುವುದು **ವಾಕ್ಯವಿಜ್ಞಾನ** (Syntax). ಒಂದೊಂದು ಭಾಷೆಗೂ ತನ್ನದೇ ಆ ವಾಕ್ಯರಚನಾ ವಿಧಾನವುಂಟು. ಕನ್ನಡದ ವಾಕ್ಯಗಳಲ್ಲಿ ಯಾವ ಕ್ರಮದಲ್ಲಿ ಪದಗಳ ಕಾಣಿಸಿಕೊಳ್ಳುತ್ತವೆಯೋ ಆ ಕ್ರಮದಲ್ಲಿಯೇ ಇಂಗ್ಲಿಷ್ ಭಾಷೆಯಲ್ಲಿ ಕಾಣಿಸಿಕೊಳ್ಳ ವುದಿಲ್ಲ. ಇಂಗ್ಲಿಷ್ ಭಾಷೆಯ ವಾಕ್ಯಗಳಲ್ಲಿ **ಪದಾನುಕ್ರಮಣಿಕೆ** (Word-order ಬಹು ಮುಖ್ಯ. "John saw Jim" ಇದನ್ನು "Jim saw John" ಎಂದು ವ್ಯತ್ಯಾ ಮಾಡಿದರೆ ಅರ್ಥವೇ ವ್ಯತ್ಯಾಸವಾಗುತ್ತದೆ. ಆದರೆ ಕನ್ನಡದಲ್ಲಿ 'ರಾಮನು ಭೀಮನನ ಕಂಡನು' ಎಂದರೂ 'ಭೀಮನನ್ನು ರಾಮನು ಕಂಡನು' ಎಂದರೂ ಒಂದೇ. ಕನ್ನಡ ಪದಗಳಿಗೆ ಪ್ರತ್ಯಯಗಳಿರುವುದರಿಂದ ಅವುಗಳ ಅರ್ಥ ಖಚಿತ ಮತ್ತು ನಿರ್ದಿಷ್ಟ. ಆದ ರಿಂದ ಕನ್ನಡದಲ್ಲಿ ಪದಾನುಕ್ರಮಣಿಕೆಯು ಅಷ್ಟು ಪ್ರಧಾನವಲ್ಲವೆಂದು ಹೇಳಬಹುದ ಕೆಲವು ಭಾಷೆಗಳಲ್ಲಿ ಒಂದು ಪದದ ಲಿಂಗ ವಚನವನ್ನು ಉಳಿದ ಪದಗಳು ಅನುಸರಿ ಬೇಕಾಗುತ್ತದೆ.

ಉದಾ :

**That boy—Those boys.**
**This boy—These boys.**

ಆದರೆ ಕನ್ನಡದಲ್ಲಿ ಆ ಹುಡುಗ—ಆ ಹುಡುಗರು, ಈ ಹುಡುಗ—ಈ ಹುಡುಗರು ಎಂದು ಹೇಳುತ್ತೇವೆ. ಸಂಸ್ಕೃತದ "ವಾಗರ್ಥಾ ಇವ ಸಂಪೃಕ್ತೌ ಜಗತಃ ಪಿತರೌ ಪಾರ್ವತೀ ಪರಮೇಶ್ವರೌ" ಎಂಬಲ್ಲಿ ವಿಶೇಷಣಗಳು ಲಿಂಗ, ವಚನ, ವಿಭಕ್ತಿಗಳಲ್ಲಿ ವಿಶೇಷ್ಯವನ್ನು ಅನುಸರಿಸುವುದನ್ನು ಕಾಣಬಹುದು. ಹೀಗೆ ಒಂದೊಂದು ಭಾಷೆಗೂ ಅದರದೇ ಆದ ವಾಕ್ಯರಚನಾ ಪದ್ಧತಿಯುಂಟು.

ಅಮೇರಿಕದ ಭಾಷಾವಿಜ್ಞಾನಿ ಒಂದು ಭಾಷೆಯನ್ನು ವಿವರಿಸಲು ಹೊರಟು ಮೊದಲು ಅದರ ಧ್ವನಿಮಾಗಳು, ಅವುಗಳ ಉಪಧ್ವನಿಗಳನ್ನು ಕುರಿತು ಚರ್ಚಿಸುತ್ತಾನೆ. ಇದರ ನಂತರ ಆ ಭಾಷೆಯ ಆಕೃತಿಮ ವಿಜ್ಞಾನ ಮತ್ತು ವಾಕ್ಯವಿಜ್ಞಾನಗಳ ವಿವೇಚನೆಯನ್ನು ಮಾಡುತ್ತಾನೆ.

## ತೌಲನಿಕ ಭಾಷಾವಿಜ್ಞಾನ

ನಮಗೆ ಈಗ ತಿಳಿದಿರುವ ಭಾಷೆಗಳನ್ನು ಪರಸ್ಪರ ಹೋಲಿಸಿ ನೋಡಿದಾಗ, ಅವುಗಳಲ್ಲಿರುವ ಸಾದೃಶ್ಯವು ಕೇವಲ ಆಕಸ್ಮಿಕವಾದುದಲ್ಲವೆಂಬುದು ವೇದ್ಯವಾಗುತ್ತದೆ. ಎರಡು ಭಾಷೆಗಳಲ್ಲಿ ನಾಲ್ಕಾರು ಕಡೆ ಮಾತ್ರ ಸಾದೃಶ್ಯವಿದ್ದರೆ ಅದನ್ನು ಆಕಸ್ಮಿಕವೆಂದು ಕರೆದರೂ ತಡೆದೀತು. ಆದರೆ ಒಂದು ಭಾಷೆಯಲ್ಲಿ ಒಂದು ಧ್ವನಿ ಎಲ್ಲೆಲ್ಲಿ ಕಂಡುಬರುತ್ತದೋ ಅಲ್ಲೆಲ್ಲಾ ಇನ್ನೊಂದು ಭಾಷೆಯಲ್ಲಿ ಇನ್ನೊಂದು ಧ್ವನಿ ನಿಯತವಾಗಿ ಕಂಡುಬರುತ್ತಿದ್ದರೆ ಅದು ಆಕಸ್ಮಿಕವಲ್ಲವೆಂದೂ, ಅದು ಐತಿಹಾಸಿಕವಾದ ಯಾವುದೋ ಬೆಳವಣಿಗೆಯನ್ನು ಸೂಚಿಸುತ್ತದೆಯೆಂದೂ ಹೇಳಬಹುದು. ಇಂಗ್ಲಿಷಿನ ಪದಾರಂಭದ [t-] ಜರ್ಮನ್ ಭಾಷೆಯ ಪದಾರಂಭದ [z-] ಇವು ಪರಸ್ಪರ ಸಂವಾದಿಗಳಾಗಿವೆ. ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳ [b]=ಸಂಸ್ಕೃತದ [bh]=ಗ್ರೀಕ್ ಮತ್ತು ಲ್ಯಾಟಿನ್ [ph]. ಇದರಿಂದ ಮೂಲತಃ ಯಾವುದೋ ಧ್ವನಿ ಬೆಳೆದು ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ರೂಪಗಳನ್ನು ತಾಳಿತು ಎಂದು ಹೇಳಬೇಕಾಗುತ್ತದೆ. ಈ ಎಲ್ಲ ಭಾಷೆಗಳಿಗೆ ಮೂಲವಾಗಿ ಒಂದು ಭಾಷೆ ಇದ್ದಿತೆಂದೂ ಅದರಿಂದ ಈ ಭಾಷೆಗಳು ಭಿನ್ನಗೊಂಡು ಬೆಳೆದು ಸ್ವತಂತ್ರ ಭಾಷೆಗಳಾದುವೆಂದೂ ಹೇಳಬಹುದು. ಈ ಮೂಲಭಾಷೆ ಈಗ ಇಲ್ಲ. ಆದರೆ ಅದನ್ನು ಊಹಿಸಿ ಅದರ ರೂಪಗಳನ್ನು ಹೆಚ್ಚು ಕಡಮೆ ಊಹಿಸಲು ಸಾಧ್ಯ. ಇದನ್ನು ಮೂಲಭಾಷೆಯ ಪುನಾರಚನೆ (Reconstruction) ಎಂದೂ ಕರೆಯುತ್ತಾರೆ.

ಒಂದು ಭಾಷೆಯು ವಿಸ್ತಾರವಾದ ಪ್ರದೇಶದಲ್ಲಿ ಹಬ್ಬಿದ್ದರೆ ಅದು ಉಪಭಾಷೆಗಳಾಗಿ ಒಡೆಯುತ್ತದೆ ಎಂಬುದನ್ನು ಹಿಂದೆ ಆಗಲೇ ನೋಡಿದ್ದೇವೆ. ಈ ಉಪಭಾಷೆಗಳನ್ನಾಡುವ

ಜನರಲ್ಲಿ ಪರಸ್ಪರ ಸಂಪರ್ಕವು ಕಡಮೆಯಾಗಿದ್ದರೆ ಅಥವಾ ನಿಂತುಹೋಗಿದ್ದರೆ ಅ ಗಳಲ್ಲಿ ಪರಸ್ಪರ ವ್ಯತ್ಯಾಸಗಳು ಹೆಚ್ಚಿ ಅವು ಕ್ರಮೇಣ ಸ್ವತಂತ್ರ ಭಾಷೆಗಳಾಗಬಹುದ

ಭಾಷೆ → ಉಪಭಾಷೆಗಳು → ಸ್ವತಂತ್ರಭಾಷೆಗಳು

ಈ ದೃಷ್ಟಿಯಿಂದ ನೋಡಿದರೆ ಸಂಸ್ಕೃತ, ಗ್ರೀಕ್, ಲ್ಯಾಟಿನ್, ಜರ್ಮನ್ ಮುಂತಾ ಭಾಷೆಗಳಿಗೆ ಮೂಲವಾಗಿ ಮೂಲ ಇಂಡೋ-ಯುರೋಪಿಯನ್ ಭಾಷೆಯೊಂದಿದ್ದಿ ಎಂದೂ, ಕನ್ನಡ, ತಮಿಳು, ತೆಲುಗು, ಮಲೆಯಾಳ, ಕೊಡಗು, ತುಳು ಮುಂತಾ ದ್ರಾವಿಡ ಭಾಷೆಗಳಿಗೆ ಮೂಲವಾಗಿ ಮೂಲದ್ರಾವಿಡವೊಂದು ಇದ್ದಿತೆಂದೂ ಹೇ ಬೇಕಾಗುತ್ತದೆ. ಈಗ ಸ್ವತಂತ್ರವಾಗಿರುವ ಭಾಷೆಗಳು ಒಮ್ಮೆ ಉಪಭಾಷೆಗಳ ಘ ದಲ್ಲಿದ್ದುವೆಂದೂ ಊಹಿಸಬಹುದು.

ಇದನ್ನು ಒಪ್ಪಿಕೊಂಡರೂ, ಭಾಷೆಗಳನ್ನು ಪರಸ್ಪರ ಹೋಲಿಸುವುದು ಹೇಗೆ ಹೋಲಿಸಿ ಮೂಲಭಾಷೆಯ ಪದಗಳನ್ನು ಊಹಿಸಲು ಸಾಧ್ಯವೇ ಎಂಬ ಸಂದೇಹ ಬ ಬಹುದು. ಅದಕ್ಕೆ ಉತ್ತರವಿಷ್ಟೇ. ಭಾಷೆಗಳು ಕೆಲವು ನಿರ್ದಿಷ್ಟ ತತ್ತ್ವಗಳಿಗನುಸಾ ವಾಗಿ ವ್ಯತ್ಯಾಸಗೊಳ್ಳುತ್ತವೆ. (ಈ ತತ್ತ್ವಗಳು ಒಂದೊಂದು ಭಾಷಾವರ್ಗಕ್ ಒಂದೊಂದು ಸ್ಥಳಕ್ಕೂ ಬೇರೆಯಾಗಬಹುದು.) ಭಾಷೆಗಳಲ್ಲಿ ಇರುವ ವ್ಯತ್ಯಾಸಗಳ ಸಾದೃಶ್ಯಗಳೂ ಒಂದು ನಿಯಮವನ್ನನುಸರಿಸುತ್ತವೆ. ಉದಾಹರಣೆಗೆ ಮೂ ಇಂಡೋ-ಯುರೋಪಿಯನ್ ಭಾಷೆಯ ಸ್ವರದ ಹಿಂದಿನ s- = ಲ್ಯಾಟಿನ್ ಮತ್ತು ಐರಿ ಭಾಷೆಗಳ s- = ಗ್ರೀಕ್ ಮತ್ತು ವೆಲ್ಷ್ ಭಾಷೆಗಳ h-. ಅದರಿಂದಲೇ ಭಾಷೆಗಳನ ಹೋಲಿಸಲು ಸಾಧ್ಯವಾಗಿರುವುದು.

ತೌಲನಿಕ ತತ್ತ್ವಗಳು ಆಧಾರರಹಿತವಾದುವಲ್ಲವೆಂಬುದನ್ನು ಸಾಧಿಸಿ ತೋರಿಸಲ ಸಹಾಯಕವಾಗಿ ಲ್ಯಾಟಿನ್ ಭಾಷೆಯೂ ಅದರಿಂದ ಉತ್ಪನ್ನವಾದ ಇಟಾಲಿಯನ ಫ್ರೆಂಚ್, ಸ್ಪ್ಯಾನಿಷ್ ಮತ್ತು ಪೋರ್ಚುಗೀಸ್ ಭಾಷೆಗಳೂ ಇವೆ. ಇಲ್ಲಿ ಮೂ ಭಾಷೆ ಲ್ಯಾಟಿನ್ ; ಉಳಿದುವು ಅದರಿಂದ ಕವಲೊಡೆದ ಭಾಷೆಗಳು. ಅದೃಷ್ಟವಶಾ ಇಲ್ಲಿ ಮಾತ್ರ ಮೂಲಭಾಷೆಯೂ ಗೊತ್ತಿದೆ, ಅದರಿಂದ ಕವಲೊಡೆದ ಭಾಷೆಗಳ ಗೊತ್ತಿವೆ.



ಇಟಾಲಿಯನ್ ಮುಂತಾದುವು ಈಗ ಸ್ವತಂತ್ರ ಭಾಷೆಗಳು. ತೌಲನಿಕ ಭಾಷಾವಿಜ್ಞಾನದ ತತ್ವಗಳ ಪ್ರಕಾರವಾಗಿ ಇಟಾಲಿಯನ್, ಫ್ರೆಂಚ್, ಸ್ಪ್ಯಾನಿಷ್, ಪೋರ್ಚುಗೀಸ್ ಭಾಷೆಗಳನ್ನು ಹೋಲಿಸಿ ಮೂಲ ಲ್ಯಾಟಿನ್ ಭಾಷೆಯನ್ನು ಪುನಾರಚಿಸಿ, ಈ ಪುನಾರಚಿಸಿದ ಲ್ಯಾಟಿನ್ ಭಾಷೆಯ ರೂಪಗಳನ್ನು ನಮಗೆ ಸಿಕ್ಕಿರುವ ಲ್ಯಾಟಿನ್ ಭಾಷೆಯ ರೂಪಗಳೊಡನೆ ಹೋಲಿಸಿ ನೋಡಿದಾಗ ಫಲಿತಾಂಶವು ಬಹು ತೃಪ್ತಿಕರವಾಗಿರುವುದು ಗೋಚರವಾಗುತ್ತದೆ. ಇದರಿಂದ ತೌಲನಿಕ ತತ್ವಗಳಿಗೆ ಪುಷ್ಟಿ ದೊರಕಿದೆ.

ತೌಲನಿಕ ತತ್ವಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ವಿವರಿಸಬಹುದು. ಎಲ್ಲ ಭಾಷೆಗಳಲ್ಲೂ ಒಂದು ಪರಿಸರದಲ್ಲಿ ಒಂದೇ ಧ್ವನಿಯು ನಿಯತವಾಗಿ ಕಂಡುಬರುತ್ತಿದ್ದರೆ ಆ ಧ್ವನಿಯು ಮೂಲಭಾಷೆಯಲ್ಲಿಯೂ ಇದ್ದಿತೆಂದು ಹೇಳಬಹುದು. ಆದರೆ ಎಲ್ಲ ಭಾಷೆಗಳಲ್ಲಿ ಒಂದೇ ಪರಿಸರದಲ್ಲಿ ಭಿನ್ನ ಭಿನ್ನ ಧ್ವನಿಗಳಿದ್ದು, ಅವುಗಳೆಲ್ಲ ಒಂದು ನಿಯಮವನ್ನನುಸರಿಸಿ ಕಾಣಿಸಿಕೊಂಡಿದ್ದರೆ, ಅದಕ್ಕೆ ಕಾರಣ ಮೂಲಭಾಷೆಯ ಒಂದು ಧ್ವನಿ ಕೆಲವು ಭಾಷೆಗಳಲ್ಲಿ ಉಳಿದುಕೊಂಡು ಬಂದಿರಬಹುದು; ಇನ್ನು ಕೆಲವು ಭಾಷೆಗಳಲ್ಲಿ ಪರಿಸರದ ಪ್ರಭಾವದಿಂದಲೋ ಅಥವಾ ಇನ್ನಾವುದೋ ಕಾರಣದಿಂದಲೋ ಬೇರೆ ಧ್ವನಿಯಾಗಿ ಅಥವಾ ಧ್ವನಿಗಳಾಗಿ ಪರಿಣಮಿಸಿರಬಹುದು. ನಾವು ಮೂಲಭಾಷೆಯ ಒಂದು ಧ್ವನಿಯನ್ನು ಪುನಾರಚಿಸಿದರೆ ಆ ಮೂಲ ಭಾಷೆಯ ಧ್ವನಿಯು ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪರಿಣಮಿಸಿದ್ದಕ್ಕೆ ಕಾರಣಗಳನ್ನು ಹೇಳುವಂತಿರಬೇಕು. 'ತಂದೆ' ಎಂಬ ಅರ್ಥದಲ್ಲಿ ಇಂಡೋ-ಯುರೋಪಿಯನ್ ಭಾಷೆಗಳಲ್ಲಿರುವ ಪದಗಳನ್ನೆಲ್ಲ ಹೋಲಿಸಿ, ಮೂಲಭಾಷೆಯಲ್ಲಿ *[Pete:r] ಎಂಬ ಪದವು ಇದ್ದಿತೆಂದೂ ಆ ಪದದ ಆರಂಭದ [p] ವ್ಯಂಜನವು ಜರ್ಮಾನಿಕ್ ಭಾಷೆಗಳಲ್ಲಿ (ಇಂಗ್ಲಿಷ್, ಜರ್ಮನ್ ಮುಂತಾದುವು) [f] ಆಯಿತೆಂದೂ, ಉಳಿದ ಕಡೆಗಳಲ್ಲಿ [p] ಆಗಿಯೇ ಉಳಿದುಕೊಂಡಿತೆಂದೂ ಹೇಳುತ್ತಾರೆ. ಇದಕ್ಕೂ ಉಳಿದ ಒಂದೊಂದು ಧ್ವನಿಯೂ ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ಧ್ವನಿಗಳಾದದ್ದಕ್ಕೂ ಕಾರಣಗಳನ್ನು ಕೊಡಬಹುದಾಗಿದೆ. ಮೂಲಭಾಷೆಯ ಧ್ವನಿ ಅಥವಾ ಪದಗಳನ್ನು ಸೂಚಿಸಲು ಅವುಗಳ ಹಿಂದೆ * ಎಂಬ ನಕ್ಷತ್ರಚಿಹ್ನೆಯನ್ನು ಬಳಸುತ್ತಾರೆ.

ಮೂಲಭಾಷೆಯ ಪದಗಳನ್ನು ರಚಿಸುವ ತತ್ವಕ್ಕೆ ದ್ರಾವಿಡ ಭಾಷೆಗಳಿಂದ ನಿದರ್ಶನವೊಂದನ್ನು 'ಭಾಷಾವರ್ಗೀಕರಣ'ವೆಂಬ ಮೂರನೆಯ ಅಧ್ಯಾಯದಲ್ಲಿ ಕೊಡಲಾಗಿದೆ. ಅದನ್ನು ಇಲ್ಲಿ ಸ್ವಲ್ಪ ವಿಸ್ತಾರವಾಗಿ ಪ್ರಸ್ತಾಪ ಮಾಡಬಹುದು.

'ಕಸಕಡ್ಡಿಗಳನ್ನು ಬೇರೆಮಾಡು' ಎಂಬ ಅರ್ಥದಲ್ಲಿ ದ್ರಾವಿಡ ಭಾಷೆಗಳಲ್ಲಿ ಈ ಪದಗಳಿವೆ. (ಪದಗಳನ್ನು ಲಿಪ್ಯಂತರ[1] ಮಾಡಿಕೊಟ್ಟಿದೆ.)

---

[1] ಲಿಪ್ಯಂತರ = Transliteration. ಒಂದು ಭಾಷೆಯನ್ನು ಇನ್ನೊಂದು ಭಾಷೆಯ ಅಕ್ಷರಗಳಲ್ಲಿ ಬರೆಯುವುದೇ ಲಿಪ್ಯಂತರ.

| | |
|---|---|
| Malayalam. | Cēṛuka (ṛ = ಱ) |
| Kota. | Kēṛ— |
| Toda. | Kōṛ— |
| Kannada. | Kēṛu |
| Telugu. | Cerugu |
| | Cēṭa |

ಇವುಗಳಿಗೆಲ್ಲ ಮೂಲವಾಗಿದ್ದಿರಬಹುದಾದ ದ್ರಾವಿಡ ಪದ ಯಾವುದಿರಬಹುದು? ಒಂದೊಂದೇ ಅಕ್ಷರವನ್ನು ನೋಡೋಣ. ಪದಾರಂಭದಲ್ಲಿ ಮಲೆಯಾಳ, ತೆಲುಗುಗಳಲ್ಲಿ [c] ಇದೆ; ಉಳಿದ ಕಡೆ [k-] ಇದೆ. [i] ಮತ್ತು [e] ಎಂಬ ಪೂರ್ವಸ್ವರಗಳ (Front vowels) ಹಿಂದೆ ಮೂಲ ದ್ರಾವಿಡದಲ್ಲಿ [k-] ಇದ್ದರೆ ಅದು ಕನ್ನಡ ಇತ್ಯಾದಿ ಭಾಷೆಗಳಲ್ಲಿ [k-] ಆಗಿಯೇ ಉಳಿಯುತ್ತದೆ. ತಮಿಳು, ಮಲೆಯಾಳ, ತೆಲುಗು ಗಳಲ್ಲಿ [c-] ಆಗಿ ಪರಿಣಮಿಸುತ್ತದೆ. (ತಾಲವ್ಯೀಕರಣದ ನಿಯಮದ ಸ್ಪಷ್ಟ ಪ್ರತಿ ಪಾದನೆಗೆ 3ನೇ ಅಧ್ಯಾಯವನ್ನು ನೋಡಿ) ಇದಕ್ಕೆ ಇತರ ಹಲವು ನಿದರ್ಶನಗಳುಂಟು. ಆದ್ದರಿಂದ ಮೂಲ ದ್ರಾವಿಡದ ಪದದಲ್ಲಿ ಆರಂಭದಲ್ಲಿ *k- ಇದ್ದಿತು.

ಮೊದಲನೆಯ ಸ್ವರ–ತೊದ ಭಾಷೆಯದನ್ನು ಬಿಟ್ಟರೆ[1]–ಉಳಿದೆಡೆ ದೀರ್ಘ [ē] ಇದೆ; ತೆಲುಗಿನ ಒಂದು ಉದಾಹರಣೆಯಲ್ಲಿ ಮಾತ್ರ ಹ್ರಸ್ವ [e] ಇದೆ. ತೆಲುಗಿನ ಒಂದು ಧ್ವನಿ ನಿಯಮದ ಪ್ರಕಾರ ದೀರ್ಘಸ್ವರದಿಂದ ಆರಂಭವಾಗುವ ಧಾತುವಿನ ಮುಂದೆ ಸ್ವರದಿಂದ ಆರಂಭವಾಗುವ ಪ್ರತ್ಯಯ ಬಂದರೆ ತೆಲುಗಿನ ಧಾತುವಿನ ದೀರ್ಘ ಸ್ವರವು ಹ್ರಸ್ವವಾಗುತ್ತದೆ. ಆದ್ದರಿಂದ ಮೂಲಭಾಷೆಯ ಸ್ವರ [ē-] ಎಂಬುದು ಸಿದ್ಧ ವಾಗುತ್ತದೆ. ಮುಂದಿನ ವ್ಯಂಜನ [-ṛ] ಅಥವಾ ಶಕಟರೇಫ. ಇದು ಕೆಲವೆಡೆ ಹಾಗೇ ಉಳಿದಿದೆ. ತೆಲುಗಿನಲ್ಲಿ [ṭ] ಆಗಿದೆ. ಆದ್ದರಿಂದ ಮೂಲಭಾಷೆಯಲ್ಲಿ *[Kēṛ] ಎಂಬ ಧಾತುವಿದ್ದಿತು. ಈ ರೂಪವನ್ನು ನಾವು ಇಟ್ಟುಕೊಂಡರೆ ದ್ರಾವಿಡವರ್ಗಕ್ಕೆ ಸೇರಿದ ಎಲ್ಲ ಭಾಷೆಗಳಲ್ಲಿಯೂ ಇರುವ ಇದಕ್ಕೆ ಸಂವಾದಿಯಾದ ಪದಗಳನ್ನು ವಿವರಿಸಲು ಸಾಧ್ಯ ವಾಗುತ್ತದೆ. ಹೀಗೆಯೇ ಎಲ್ಲ ಅಚ್ಚ ದ್ರಾವಿಡ ಪದಗಳನ್ನು ಪುನಾರಚಿಸಿ, ಮೂಲ ದ್ರಾವಿಡ ಭಾಷೆಯ ಸ್ಥೂಲ ಚಿತ್ರವೊಂದನ್ನು ಕೊಡಲು ಸಾಧ್ಯ.

ತೌಲನಿಕ ಅಧ್ಯಯನದಿಂದ ಇಂಡೋ-ಯುರೋಪಿಯನ್ ಮತ್ತು ದ್ರಾವಿಡ ಭಾಷೆಗಳ ವಂಶವೃಕ್ಷವನ್ನು ರಚಿಸಿದ್ದಾರೆ. (ಕೆಲವು ಶಾಖೆಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ. ಮುಂದಿನ ಪುಟವನ್ನು ನೋಡಿ.)

ಇಂಡೋ-ಯುರೋಪಿಯನ್ ಭಾಷೆಗಳಿಗೆ ಸಂಬಂಧಿಸಿದಂತೆ ತೌಲನಿಕ ಅಧ್ಯಯನವು ಅತ್ಯುತ್ತಮವಾಗಿ ನಡೆದಿದೆ. ಮೂಲ ಇಂಡೋ-ಯುರೋಪಿಯನ್ ಭಾಷೆಯಲ್ಲಿ ಕೆಲವು ವಾಕ್ಯಗಳನ್ನು ರಚಿಸಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ತೌಲನಿಕ ಅಧ್ಯಯನ ಇನ್ನೂ

[1] ತೊದ ಭಾಷೆಯ ಸ್ವರದ ಬೆಳವಣಿಗೆಯು ಭಿನ್ನವಾಗಿದೆ.

ಮೂಲ ಇಂಡೋ-ಯುರೋಪಿಯನ್

ಮೂಲ ಇಟಾಲಿಯನ್ | ಮೂಲ ಜರ್ಮಾನಿಕ್ | ಮೂಲ ಇಂಡೋ-ಪರ್ಷಿಯನ್

ಫ್ರೆಂಚ್ ಇಟಾಲಿಯನ್ ಸ್ಪ್ಯಾನಿಷ್ ಇತ್ಯಾದಿ | ಇಂಗ್ಲಿಷ್ ಜರ್ಮನ್ ಸ್ಕಾಂಡಿನೇವಿಯನ್ ಇತ್ಯಾದಿ | ಪರ್ಷಿಯನ್ ಭಾಷೆಗಳು ಭಾರತೀಯ ಭಾಷೆಗಳು (ಸಂಸ್ಕೃತ, ಹಿಂದಿ ಇತ್ಯಾದಿ)

ಮೂಲ-ದ್ರಾವಿಡ

ಮೂಲ ದಕ್ಷಿಣ ದ್ರಾವಿಡ | ಮೂಲ ಮಧ್ಯ ದ್ರಾವಿಡ | ಮೂಲ ಉತ್ತರ ದ್ರಾವಿಡ

ಮೂಲ ತಮಿಳು ಮೂಲ ಕನ್ನಡ | ಮೂಲ ತೆಲುಗು ಮೂಲ ಪಾರ್ಜಿ | ಮೂಲ ಕುರುಖ್

ಳೆಯ ತಮಿಳು | ಮೂಲ ಕುಇ | ಮೂಲ ಗದಬ ಮೂಲ ನಾಯ್ಕಿ

ಮಿಳು ಮಲಯಾಳಂ ತೊದ ಕೊತ ಕನ್ನಡ ಬಡಗ ಕೊಡಗು ತುಳು ತೆಲುಗು ಕುಇ ಕುವಿ ಪಾರ್ಜಿ ಒಲ್ಲಾರಿ ಗದಬ ಕೋಲಾಮಿ ನಾಯ್ಕಿ ಗೋಂಡಿ ಕುರುಖ್ ಮಾಲ್ತೊ ಬ್ರಾಹೂಇ

(ಡಾ. ಭ್. ಕೃಷ್ಣಮೂರ್ತಿಯವರ Proto-Dravidian* Ẓ ಎಂಬ ಲೇಖನದಿಂದ ಉದ್ಧೃತ, *Indian Linguistics*, 1958)

ಸರಿಯಾಗಿ ನಡೆದಿಲ್ಲ. ಮೂಲದ್ರಾವಿಡದಿಂದ ತೆಲುಗು ಮೊದಲು ಪ್ರತ್ಯೇಕವಾಯಿತೆಂದೂ ಬಳಿಕ ಕನ್ನಡ ತಮಿಳು ಕೆಲವು ಕಾಲ ಒಟ್ಟಿಗಿದ್ದು ಆಮೇಲೆ ಕವಲೊಡೆದುವೆಂದೂ ತಮಿಳಿನಿಂದ ಮಲಯಾಳವೂ ಕನ್ನಡದಿಂದ ಬಡಗವೂ ಹುಟ್ಟಿದುವೆಂದೂ ಭಾಷಾವಿಜ್ಞಾನಿಗಳು ಭಾವಿಸುತ್ತಾರೆ. ತುಳುಭಾಷೆಯು ಮೂಲದ್ರಾವಿಡದಿಂದ ಪ್ರತ್ಯೇಕವಾಗಿ ಕವಲೊಡೆದಂತೆ ಕಾಣುತ್ತದೆ.[1]

ಭಾಷಾವಿಜ್ಞಾನಿಗಳು ಮೂಲಭಾಷೆಯ ಪದಗಳನ್ನು ಕಲ್ಪಿಸುತ್ತಾರೆ, ನಿಜ. ಆದರೆ ಹಾಗೆ ಕಲ್ಪಿಸಿದ ಪದಗಳು ವಾಸ್ತವವಾಗಿ ಅದೇ ರೂಪದಲ್ಲಿದ್ದುವು ಎಂದು ಧೈರ್ಯವಾಗಿ ಯಾರೂ ಹೇಳಲಾರರು. ಮೂಲಭಾಷೆ ಹೆಚ್ಚು ಕಡಿಮೆ ಹೇಗಿದ್ದಿತು ಎಂಬುದನ್ನು ತಿಳಿಯಲು ಅವು ತೋರ್ಬೆರಳು ಮಾತ್ರ; ಮೂಲಭಾಷೆ ಬೆಳೆದು ಮುಂದೆ ಬೇರೆ ಬೇರೆ ಭಾಷೆಗಳಲ್ಲಿ ನಡೆದ ಮಾರ್ಪಾಟುಗಳ ವಿವರಣೆ ಕೊಡುವುದು ಹೆಚ್ಚು ಸುಲಭ. ಆದರೂ ತೌಲನಿಕ ಭಾಷಾವಿಜ್ಞಾನವು ಹತ್ತೊಂಬತ್ತನೇ ಶತಮಾನದಲ್ಲಿ ಅತ್ಯಂತ ಫಲಕಾರಿಯಾದ, ಜಯಪ್ರದವಾದ ಕ್ಷೇತ್ರವೆನ್ನಿಸಿಕೊಂಡಿದ್ದಿತು.

[1] ಹಿಂದಿನ ಪುಟವನ್ನು ನೋಡಿ. ಈ ವಂಶವೃಕ್ಷದಲ್ಲಿ ದ್ರಾವಿಡ ಭಾಷೆಗಳ ವಿಕಾಸವನ್ನು ತೋರಿಸಿದೆ.

# 12 ಭಾಷಾವಿಜ್ಞಾನದ ಇತಿಹಾಸ

ಪ್ರತಿಯೊಂದು ಜ್ಞಾನದ ಶಾಖೆಗೂ ಒಂದು ಇತಿಹಾಸವಿರುವಂತೆ ಭಾಷಾವಿಜ್ಞಾನಕ್ಕೂ ಒಂದು ಇತಿಹಾಸವಿದೆ. ಭಾಷಾವಿಜ್ಞಾನವು ಬೆಳೆದು ಪ್ರಬುದ್ಧಾವಸ್ಥೆಗೆ ಬಂದದ್ದು ಹತ್ತೊಂಬತ್ತನೆಯ ಶತಮಾನದಲ್ಲಿ. ಅದಕ್ಕಿಂತ ಹಿಂದೆ ಭಾಷೆಗಳ ಅಧ್ಯಯನವನ್ನು ವ್ಯಾಕರಣಗಳಲ್ಲಿ ಕಾಣಬಹುದಿತ್ತು. ವ್ಯಾಕರಣಗಳು ಭಾಷೆಯಲ್ಲಿ ಸಾಧು, ಅಸಾಧುಗಳು ಯಾವುವು, ಯಾವ ರೂಪ ಸರಿ, ಯಾವ ರೂಪ ತಪ್ಪು ಎಂಬ ವಿವೇಚನೆಯಲ್ಲಿ ತೊಡಗುತ್ತಿದ್ದುವು. ಭಾಷೆಗಳಿಗೆ ನಿಯಮಗಳನ್ನು ಹಾಕುವುದರಲ್ಲಿ ಹೆಚ್ಚು ಮಗ್ನವಾಗುತ್ತಿದ್ದುವೇ ಹೊರತು ಭಾಷೆಯ ನಿಜವಾದ ಸ್ವರೂಪವನ್ನು ತಿಳಿಸುವುದರಲ್ಲಿ ಆಸಕ್ತವಾಗಿದ್ದಿಲ್ಲ. ಅವು ಬಹುಮಟ್ಟಿಗೆPrescriptiveಆಗಿದ್ದುವೇಹೊರತುDescriptiveಆಗಿದ್ದಿಲ್ಲ.ಈಗಲೂ ಕೂಡ ಭಾಷೆಯಲ್ಲಿ ಸಾಧು ಯಾವುದು, ಅಸಾಧು ಯಾವುದು ಎಂಬುದರ ಚರ್ಚೆ ನಿಂತಿಲ್ಲ. 'It is I' ಸರಿಯೋ, 'It is me' ಸರಿಯೋ? Often, Soften ಎಂಬ ಪದಗಳಲ್ಲಿ [t] ಯನ್ನು ಉಚ್ಚರಿಸಬೇಕೋ ಬೇಡವೋ ? ಪ್ರಥಮಾ ವಿಭಕ್ತಿಯಲ್ಲಿ 'ರಾಮನು' ಎಂದು ಹೇಳಬೇಕೋ, 'ರಾಮ' ಎಂದರೆ ಸಾಕೆ ? 'ಕಡಮೆ' ಸರಿಯೋ 'ಕಡಿಮೆ' ಸರಿಯೋ ? ಈ ಚರ್ಚೆಗಳು ಒಂದಲ್ಲ ಒಂದು ರೀತಿಯಲ್ಲಿ ಎಲ್ಲ ಭಾಷೆಗಳಲ್ಲೂ ನಡೆಯುತ್ತಲೇ ಇರುತ್ತವೆ.

ಭಾಷೆಯ ವಿಷಯದಲ್ಲಿ ಕುತೂಹಲವನ್ನು ತಾಳಿ ಅದನ್ನು ವಿವರಿಸಲು ಪ್ರಯತ್ನಿಸಿದ ಅತ್ಯಂತ ಪ್ರಾಚೀನರೆಂದರೆ ಭಾರತೀಯರು. ವೇದಗಳ ಪಾಠವನ್ನೂ ಉಚ್ಚಾರಣೆಯನ್ನೂ ಶುದ್ಧವಾಗಿಡಲು ಕ್ರಮಪಾಠ, ಪದಪಾಠ, ಜಟಾಪಾಠ, ಘನಪಾಠ ಇತ್ಯಾದಿ ವಿಧಾನಗಳನ್ನು ಏರ್ಪಡಿಸಿಕೊಂಡರು. ಪದಪಾಠದಲ್ಲಿ ಒಂದೊಂದು ಪದವನ್ನೂ ಬಿಡಿಸಿ ಪ್ರತ್ಯೇಕವಾಗಿ ತೋರಿಸಲಾಗುತ್ತದೆ ; ಸಮಾಸಗಳನ್ನು ಬಿಡಿಸಲಾಗುತ್ತದೆ. ಇದನ್ನೆಲ್ಲ ಮಾಡಬೇಕಾದರೆ ಭಾಷೆಯನ್ನು ವಿಶ್ಲೇಷಿಸಿರಬೇಕು. ಮುಂದೆ ಪ್ರಾತಿಶಾಖ್ಯಗಳು ಬಂದುವು. ವೇದಗಳನ್ನು ವಾಚನಮಾಡುವ ವಿಧಾನವು ಇಲ್ಲಿದ್ದರೂ ಭಾಷೆಯ ವಿಷಯಕವಾದ ಅಮೂಲ್ಯ ಅಂಶವು ಇಲ್ಲಿ ದೊರಕುತ್ತದೆ. ಸಂಸ್ಕೃತ ಭಾಷೆಯ ಧ್ವನಿಗಳ ಒಂದು ಕ್ರಮಬದ್ಧ ಜೋಡಣೆಯೂ ಇಲ್ಲಿದೆ. ಮುಂದೆ ಬಂದ ಯಾಸ್ಕನು ವೇದಗಳಲ್ಲಿ ಬರುವ ಪದಗಳಿಗೆ ನಿಷ್ಪತ್ತಿ ಹೇಳಿದ್ದಾನೆ. ಅವನ ವಿಧಾನವು ಬಹು ಬೆಲೆಯುಳ್ಳದು. ತನಗೆ ಸಂದೇಹ ಬಂದ ಕಡೆ ಅದನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾನೆ. ಯಾಸ್ಕನ

ಹೆಸರಿನ ಜೊತೆಗೆ, ಅಪರೂಪವಾದ ವೈದಿಕ ಪದಗಳ ಪಟ್ಟಿಗಳನ್ನೊಳಗೊಂಡಿರುವ ಅನೇಕ ನಿಘಂಟುಗಳನ್ನು ಇಲ್ಲಿ ಹೆಸರಿಸಬಹುದು.

ಯಾಸ್ಕನಿಗೂ ಪಾಣಿನಿಗೂ ಮಧ್ಯೆ ಹಲವು ವೈಯಾಕರಣಿಗಳು ಕಾಣಿಸಿಕೊಳ್ಳುತ್ತಾರೆ. ಆಪಿಸಲಿ, ಕಾಶಕೃತ್ಸ್ನ ಮೊದಲಾದವರು ವ್ಯಾಕರಣಗಳನ್ನು ಬರೆದಿದ್ದರು. 'ಐಂದ್ರ' ಎಂಬ ಹೆಸರಿನ ಒಂದು ವ್ಯಾಕರಣಶಾಖೆ ಇದ್ದಿತಂತೆ. ಈ ಶಾಖೆಯಲ್ಲಿ ಬಹುದೊಡ್ಡ ಹೆಸರು ಕಾಶಕೃತ್ಸ್ನನದು. ಈ ಐಂದ್ರ ಶಾಖೆಯ ಪ್ರಭಾವವು ವಿಶೇಷವಾಗಿ ದಕ್ಷಿಣದಲ್ಲಿ ವ್ಯಾಪಿಸಿದ್ದಿತೆಂದೂ ತಮಿಳು ವ್ಯಾಕರಣಗಳ ಮೇಲೆ ಅದರ ಪ್ರಭಾವವಿದೆಯೆಂದೂ ಹೇಳುತ್ತಾರೆ.

ಪಾಣಿನಿಯು ಬಹುಶಃ ಆ ಕಾಲಕ್ಕೆ ವ್ಯಾವಹಾರಿಕ ಭಾಷೆಯಾಗಿದ್ದ ಸಂಸ್ಕೃತಕ್ಕೆ ವ್ಯಾಕರಣವನ್ನು ಬರೆದನು. ಅದೇ ಅವನ 'ಅಷ್ಟಾಧ್ಯಾಯೀ'. ಮಾನವ ಪ್ರತಿಭೆಯ ಮಹಾ ಸ್ಮಾರಕಗಳಲ್ಲಿ ಇದೂ ಒಂದು ಎಂದು ಭಾಷಾವಿಜ್ಞಾನಿಗಳು ಈ ಗ್ರಂಥವನ್ನು ಕೊಂಡಾಡಿದ್ದಾರೆ. ಸಂಸ್ಕೃತ ಭಾಷೆಯನ್ನು ವಿವರವಾಗಿ ವಿವರಿಸಿ ಅನೇಕ ವ್ಯಾಕರಣ ನಿಯಮಗಳನ್ನು ವಿಧಿಸಿ ತಾನು ವಿವರಿಸಿರುವುದೇ ಶುದ್ಧ ಭಾಷೆಯೆಂದು ಘೋಷಿಸಿದನು. ಅವನು ವಿವರಿಸಿದ್ದು ಅವನ ಸ್ವಂತ ಭಾಷೆಯೇ ಆಗಿದ್ದಿರಬಹುದು. ಇನ್ನಾವ ಭಾಷೆಯನ್ನೂ ಇಷ್ಟು ಕ್ರಮಬದ್ಧವಾಗಿ ವಿವರವಾಗಿ ಯಾವ ದೇಶದಲ್ಲೂ ಯಾರೂ ವಿವರಿಸಿರಲಿಲ್ಲ. ಅವನು ಹಿಂದಿನ ಅನೇಕ ವೈಯಾಕರಣಿಗಳಿಗೆ ಅನೇಕ ವಿಧದಲ್ಲಿ ಕೃತಜ್ಞನಾಗಿದ್ದರೂ, ಅವನ ವಿಶ್ಲೇಷಣ ವಿಧಾನದಲ್ಲಿ ಹೊಸತನವಿದೆ. ಭಾಷೆಯನ್ನು ವಿಶ್ಲೇಷಿಸಿ, 'ಧಾತು'ಗಳನ್ನು ಕಂಡುಕೊಂಡ. ಕ್ರಿಯೆಯನ್ನು ಹೇಳುವ ಏಕಾಕ್ಷರಿಗಳಾದ ವ್ಯಂಜನಗಳೇ ಧಾತುಗಳು. ಒಂದು ಭಾಷೆ ಹೇಗಿರಬೇಕೆಂಬ ವಿಷಯದಲ್ಲಿ ಮಾರ್ಗದರ್ಶನವನ್ನು ಮಾಡಿದ್ದಾನೆ; ಆ ದೃಷ್ಟಿಯಿಂದ ನಿರಂಕುಶಪ್ರಭುವಾಗಿ ಮೆರೆದಿದ್ದಾನೆ. ಭಾಷಾವಿಜ್ಞಾನದ ಮೂಲತತ್ವಗಳು ಅವನಿಗೆ ಕರಗತವಾಗಿದ್ದರೂ, ಅವನು ಮಹಾ ಪ್ರತಿಭಾಶಾಲಿಯಾಗಿದ್ದರೂ ಪರ್ಷಿಯನ್ ಗ್ರೀಕ್ ಮುಂತಾದ ಭಾಷೆಗಳತ್ತ ಅವನ ಮನಸ್ಸು ಹೊರಳಲಿಲ್ಲ. ಭಾರತದ ವಾಯುವ್ಯದಲ್ಲಿ ತಕ್ಷಶಿಲೆಯಲ್ಲಿ ಇದ್ದ ಪಾಣಿನಿಗೆ ಇರಾನಿಯನ್ನರ ಗ್ರೀಕರ ಪರಿಚಯವಿದ್ದಿರಬೇಕು.

ಸಂಸ್ಕೃತದ ಮೇಲೆ ಪಾಣಿನಿಯ ಅಷ್ಟಾಧ್ಯಾಯಿಯ ಪ್ರಭಾವವು ಅದ್ಭುತ. ಆಧುನಿಕರ ಪ್ರಕಾರ ವ್ಯಾಕರಣವು ಭಾಷೆಗೆ ನಿಯಮಗಳನ್ನು ಹಾಕಕೂಡದು; ಅದು ಭಾಷೆಯನ್ನು ವಿವರಿಸಬೇಕು; ಸರಿ ಯಾವುದು ತಪ್ಪು ಯಾವುದು ಎಂಬುದನ್ನು ಹೇಳಬಾರದು. ಇದನ್ನು ಪಾಣಿನಿಗೆ ಅನ್ವಯಿಸಲೇಕೂಡದು. ಭಾರತೀಯರು ಅವನನ್ನು ಋಷಿಯೆಂದು ಭಾವಿಸಿದರು. ಇದಕ್ಕೆ ಎರಡು ಕಾರಣಗಳಿರಬಹುದು—ಒಂದು, ಅವನ ಕೃತಿ ಮನುಷ್ಯನ ಇತಿಹಾಸದಲ್ಲೇ ಅತ್ಯಪೂರ್ವವಾದ ವಿಶ್ಲೇಷಣಾತ್ಮಕ ಕೃತಿ. ಎರಡನೆಯದು, ಅವನ ಕಾಲಕ್ಕಾಗಲೇ ಸಂಸ್ಕೃತಕ್ಕೆ ದೈವತ್ವದ ಬಣ್ಣವು ಬಂದಿದ್ದಿತು. ಸಂಸ್ಕೃತಕ್ಕೆ ಅವನು ಅನುಲ್ಲಂಘನೀಯವಾದ ನಿಯಮಗಳನ್ನು ಹಾಕಿದ್ದರಿಂದ ವ್ಯಾವಹಾರಿಕ ಭಾಷೆ

ಯಾಗಿದ್ದ ಸಂಸ್ಕೃತವು ಕ್ರಮೇಣ ವ್ಯವಹಾರದಲ್ಲಿ ನಿಂತುಹೋಗಿ ಕೇವಲ ಗ್ರಂಥಸ್ಥ ವಾಯಿತು, 'ಮೃತಭಾಷೆ'(Dead Language)ಯಾಯ್ತು. ಜನಗಳು ವ್ಯತ್ಯಾಸ ಗೊಂಡಂತೆ ಭಾಷೆಯೂ ವ್ಯತ್ಯಾಸಗೊಳ್ಳಬೇಕು. ಆದರೆ ಭಾಷೆಯು ವ್ಯತ್ಯಾಸಗೊಳ್ಳಲು ಅಡ್ಡಿಗಳಿದ್ದರೆ ಜನರು ಆ ಭಾಷೆಯನ್ನು ಕೈಬಿಟ್ಟು ಇನ್ನೊಂದು ಭಾಷೆಯನ್ನು ಸ್ವೀಕರಿಸು ತ್ತಾರೆ, ತಮ್ಮ ವ್ಯವಹಾರಗಳಿಗೆ. ಪಾಣಿನಿಯಿಂದ ಸಂಸ್ಕೃತವು ಬಿಗಿಯಾಯಿತು, ಅನಮ್ಯ ವಾಯಿತು (Rigid).

ಮುಂದೆ ಬಂದ ವೈಯಾಕರಣಿಗಳೆಲ್ಲರೂ ಪಾಣಿನಿಯ ಮಾರ್ಗವನ್ನು ತುಳಿದರು, ಅವನ ಛಾಯಾನುವರ್ತಿಗಳಾದರು. ಮುಂದೆ ಬಂದ ವ್ಯಾಕರಣಗಳು ಅಷ್ಟಾಧ್ಯಾಯಿಗೆ ವ್ಯಾಖ್ಯಾನಗಳು ಅಥವಾ ಅಲ್ಲಿ ಬಂದಿರುವ ವಿಷಯಗಳನ್ನೇ ಇನ್ನೊಂದು ರೀತಿಯಲ್ಲಿ ಜೋಡಿಸಿ ಕೊಟ್ಟಿರತಕ್ಕುವು. ಪಾಣಿನಿಯ ಸೂತ್ರಗಳಲ್ಲಿ ಹಲವನ್ನು ತಿದ್ದುವ ಕಾರ್ಯ ವನ್ನು ಕಾತ್ಯಾಯನನು ಮಾಡಿದನು. ಇವನು ಪಾಣಿನಿಗಿಂತ (ಕ್ರಿ.ಪೂ. 350-250) ಕೆಲವು ಶತಮಾನ ಈಚಿನವನು. ಪಾಣಿನಿಯ ವ್ಯಾಕರಣಕ್ಕೆ ಹಲವು ಹೊಸ ಅಂಶ ಗಳನ್ನು ಸೇರಿಸಿದ್ದಾನೆ. ಆದರೆ ಪಾಣಿನಿಯ ನಂತರ ಬಂದ ಬಹುದೊಡ್ಡ ವೈಯಾಕರಣಿ ಯೆಂದರೆ ಪತಂಜಲಿ. ಕಾತ್ಯಾಯನನು ಪಾಣಿನಿಯನ್ನು ಟೀಕಿಸಿದ ಕಡೆಗಳಲ್ಲಿ ಪಾಣಿನಿ ಯನ್ನು ಸಮರ್ಥಿಸಿ ಕಾತ್ಯಾಯನನನ್ನು ತೀವ್ರವಾಗಿ ಟೀಕಿಸಿದ್ದಾನೆ, ತನ್ನ ಮಹಾಭಾಷ್ಯ ದಲ್ಲಿ. ಕೆಲವೆಡೆ ಪಾಣಿನಿಯ ವ್ಯಾಕರಣಕ್ಕೆ ನೂತನ ವಿಷಯಗಳನ್ನು ಸೇರಿಸಿದ್ದಾನೆ.

ಭಾರತದ ವ್ಯಾಕರಣಗಳ ಇತಿಹಾಸದಲ್ಲಿ ಪಾಣಿನಿ, ಕಾತ್ಯಾಯನ, ಪತಂಜಲಿಯರು ಮೂರು ಪ್ರಮುಖ ಘಟ್ಟಗಳೆಂದು ಹೇಳಬಹುದು. ಪತಂಜಲಿಯ ಬಳಿಕ ಅನೇಕ ವ್ಯಾಖ್ಯಾನಗಳೂ, ಅವುಗಳ ಮೇಲೆ ಮತ್ತೆ ವ್ಯಾಖ್ಯಾನಗಳೂ ಹುಟ್ಟಿವೆ. ಜಯಾದಿತ್ಯ ಮತ್ತು ವಾಮನರ ಕಾಶಿಕಾವೃತ್ತಿ (ಅಷ್ಟಾಧ್ಯಾಯಿಯ ಮೇಲೆ), ಕೈಯಟನ ಪ್ರದೀಪ (ಮಹಾಭಾಷ್ಯದ ಮೇಲೆ), ಭಟ್ಟೋಜಿದೀಕ್ಷಿತನ ಸಿದ್ಧಾಂತ ಕೌಮುದಿ (ಪಾಣಿನಿಯ ಸೂತ್ರಗಳ ವ್ಯವಸ್ಥಾಪನ)—ಇವು ಮುಖ್ಯವಾಗಿ ಉಲ್ಲೇಖಾರ್ಹವಾದುವು. ಇವರ ಜೊತೆಗೆ ಹೇಮಚಂದ್ರನ ಹೆಸರು ಉಲ್ಲೇಖಾರ್ಹವಾಗಿದೆ. ಗುಜರಾತಿನ ಈ ಜೈನ ಸನ್ಯಾಸಿ ಮಹಾವಿದ್ವಾಂಸನಾಗಿದ್ದನು. ಅನೇಕ ವಿಷಯಗಳ ಮೇಲೆ ಕೃತಿರಚನೆ ಮಾಡಿ ದ್ದಾನೆ. 'ಶಬ್ದಾನುಶಾಸನ'ವೆಂಬ ತನ್ನ ಕೃತಿಯಲ್ಲಿ ಸಂಸ್ಕೃತ ವ್ಯಾಕರಣವನ್ನು ಬರೆದಿ ದ್ದರೂ ಅಲ್ಲಿ ಅವನು ಜಯಶೀಲನಾಗಿಲ್ಲ. ಆದರೆ ಆ ವ್ಯಾಕರಣದ ಕೊನೆಯಲ್ಲಿ ತನ್ನ ಕಾಲದ ಪ್ರಾಕೃತಗಳನ್ನು ವಿಶ್ಲೇಷಣೆಮಾಡಿದ್ದಾನೆ. ಆದ್ದರಿಂದ ಈ ಕೃತಿಯು ಸ್ಮರ ಣಾರ್ಹವಾಗಿದೆ. ಅಷ್ಟಾಧ್ಯಾಯಿಯಿಂದ ಸಂಸ್ಕೃತ ಭಾಷೆ ಹೇಗೆ ಅನಮ್ಯವಾಗಿ ವ್ಯವ ಹಾರದಿಂದ ತಪ್ಪಿಹೋಯಿತೋ ಹಾಗೆಯೇ ಅವನ ಈ ಪ್ರಾಕೃತ ವ್ಯಾಕರಣದಿಂದ ಜೈನ ಪ್ರಾಕೃತವು ಅನಮ್ಯವಾಗಿ, ಬಳಿಕ ವ್ಯವಹಾರದಿಂದ ಚ್ಯುತವಾಯಿತು. ಸಂಸ್ಕೃತ ವ್ಯಾಕರಣಗಳ ಮಾದರಿಯನ್ನನುಸರಿಸಿ ದೇಶೀಯ ಭಾಷೆಗಳಲ್ಲಿ ಅನೇಕ ವ್ಯಾಕರಣಗಳು ಹುಟ್ಟಿವೆ. ಕನ್ನಡದಲ್ಲಿ ಪ್ರತಿಭಾಶಾಲಿಯೊಬ್ಬನಿಂದ ಒಂದು ಶ್ರೇಷ್ಠ ವ್ಯಾಕರಣವು

ಹದಿಮೂರನೇ ಶತಮಾನದಲ್ಲಿ ನಿರ್ಮಾಣಗೊಂಡಿತು. ಅದೇ ಕೇಶಿರಾಜನ (ಸು. ೧೨೬೦) 'ಶಬ್ದಮಣಿದರ್ಪಣ.' ಅವನ ಕಾಲಕ್ಕಾಗಲೇ ಹಳಗನ್ನಡವು ನಡುಗನ್ನಡವಾಗಿ ಪರಿವರ್ತನೆ ಹೊಂದಿ, ಆ ನಡುಗನ್ನಡದಲ್ಲಿ ಅಪಾರವಾದ ಸಾಹಿತ್ಯವು ಸೃಷ್ಟಿಯಾಗಿತ್ತು. ಆದರೆ ಅವನು ವಿಶ್ಲೇಷಿಸಲು ಹೊರಟಿದ್ದು ಕೇವಲ ಗ್ರಂಥಸ್ಥವಾಗಿದ್ದ ಹಳಗನ್ನಡವನ್ನು. ಭಾಷೆಗೆ ನಿಯಮಗಳನ್ನು ಹಾಕಿ, ಹಳಗನ್ನಡವನ್ನು ಉಳಿಸಲು ಅವನು ಮಾಡಿದ ಪ್ರಯತ್ನಗಳು ವಿಫಲಗೊಂಡುವು. ಅವನ ಕಾಲಕ್ಕಾಗಲೇ ಅವನು ತನ್ನ ಪ್ರತಿಭಟನೆಯನ್ನು ಸೂಚಿಸಿದ ಮಾರ್ಪಾಟುಗಳು ನಡೆದುಹೋಗಿದ್ದುವು. ಅವನು ಸಂಸ್ಕೃತದ ಮಾದರಿಯನ್ನನುಸರಿಸಿ ಬರೆದ ಕನ್ನಡ ವ್ಯಾಕರಣದಲ್ಲಿ ಕೆಲವು ಅಸಂಗತಿಗಳಿವೆ. ಉದಾಹರಣೆಗೆ ಕನ್ನಡದಲ್ಲಿ ದ್ವಿವಚನವಿದೆ ಎಂದು ಸಾಧಿಸಲು ಪ್ರಯತ್ನಿಸಿರುವುದು. ಆದರೂ ಕೇಶಿರಾಜನ ದೃಷ್ಟಿ ಒಬ್ಬ ಭಾಷಾವಿಜ್ಞಾನಿಯ ದೃಷ್ಟಿ ಎಂಬುದನ್ನು ಮರೆಯಬಾರದು. ಅವನು ಹಳಗನ್ನಡಕ್ಕೆ ನಿಯಮಗಳನ್ನು ಹಾಕಿದ್ದರೂ, ವಸ್ತುನಿಷ್ಠವಾದ ದೃಷ್ಟಿಯನ್ನಿರಿಸಿಕೊಂಡು ಅದನ್ನು ವಿಶ್ಲೇಷಣೆ ಮಾಡಿದ್ದಾನೆ. ಕವಿಗಳ ಪ್ರಯೋಗಗಳನ್ನು ಮುಂದಿಟ್ಟುಕೊಂಡು ಹಿಂದೆ ನಡೆದಿದ್ದಾನೆ. ಎಲ್ಲಿಯೂ ತಾನೇ ಪ್ರಯೋಗಗಳನ್ನು ಕಲ್ಪಿಸಿಲ್ಲ. ಅವನ ಕೃತಿ ಹಳಗನ್ನಡದ ಒಂದು ಉತ್ತಮ ವಿವರಣಾತ್ಮಕ ವ್ಯಾಕರಣ (Descriptive Grammar) ಎಂದು ಹೇಳಬಹುದು.

ಗ್ರೀಸ್ ಪಾಶ್ಚಾತ್ಯ ಸಂಸ್ಕೃತಿಯ ತಲಕಾವೇರಿ. ಪಶ್ಚಿಮದಲ್ಲಿ ಭಾಷಾಧ್ಯಯನವು ಆರಂಭವಾದದ್ದು ಗ್ರೀಕರಿಂದ. ನಾವು ಸಾಮಾನ್ಯವಾಗಿ ಗಮನಿಸದ ಸಣ್ಣ ಸಣ್ಣ ವಿಷಯಗಳಲ್ಲೂ ಅಚ್ಚರಿಪಡುವ ಪ್ರವೃತ್ತಿ ಗ್ರೀಕರಿಗಿತ್ತು. ಭಾಷೆಯ ಹುಟ್ಟು, ಇತಿಹಾಸ, ರಚನೆಗಳ ವಿಷಯದಲ್ಲಿ ಅವರು ಧೈರ್ಯವಾಗಿ ಆಲೋಚಿಸಿದರು. ಪಾಶ್ಚಾತ್ಯರ ವ್ಯಾಕರಣಗಳು ಬಹುಮಟ್ಟಿಗೆ ಗ್ರೀಕರ ಬಳುವಳಿ ಎಂದು ಹೇಳಬಹುದು.

ಗ್ರೀಕರಿಗೆ ಗ್ರೀಕ್ ಒಂದೇ ನಿಜವಾದ ಭಾಷೆ. ಉಳಿದ ಭಾಷೆಗಳನ್ನು 'barbori' ಎಂದು ಕರೆದರು. ಗ್ರೀಕ್ ತತ್ತ್ವಶಾಸ್ತ್ರಜ್ಞರಿಗೆ ಬಹುಪ್ರಿಯವಾಗಿದ್ದ ಸಮಸ್ಯೆಯೆಂದರೆ, ಪದಗಳು ಸಹಜವೇ? ಅಥವಾ ಅರ್ಥವನ್ನು ಸೂಚಿಸಲು ಮಾನವನು ನಿರ್ಮಿಸಿಕೊಂಡಿರುವ ಯಾದೃಚ್ಛಿಕ ಸಂಕೇತಗಳೇ? ಈ ವಿಷಯವಾಗಿ ಅವರಲ್ಲಿ ಬೇಕಾದಷ್ಟು ಚರ್ಚೆ ನಡೆದಿದೆ. ಪ್ಲೇಟೋವಿನ 'ಕ್ರತಿಲೊಸ್ಸ್'ನಲ್ಲಿ ಇದನ್ನು ಕಾಣಬಹುದು. ಪ್ಲೇಟೋವಿನ ಸಂಭಾಷಣೆಗಳಲ್ಲಿ ಬರುವ ಸಾಕ್ರಟೀಸನ ಪ್ರಕಾರ ಈಗ ಇರುವಂತೆ ಭಾಷೆಯಲ್ಲಿ ಪದಕ್ಕೂ ವಸ್ತುವಿಗೂ ಸಹಜ ಸಂಬಂಧವೇನೂ ಇಲ್ಲ. ಆದರೂ ಅಂತಹ ಸಹಜ ಸಂಬಂಧವಿರುವ ಭಾಷೆಯೊಂದು ಸೃಷ್ಟಿಯಾಗಿದ್ದರೆ ಚನ್ನಾಗಿರುತ್ತಿತ್ತು ಎಂದು ಅವನು ಭಾವಿಸುತ್ತಾನೆ. ಅರಿಸ್ಟಾಟಲ್ ತನ್ನ ಬರಹಗಳಲ್ಲಿ ಬಳಸಿದ subject, predicate ಮುಂತಾದ ಪದಗಳನ್ನು ಈಗಲೂ ಬಳಸುತ್ತಿದ್ದೇವೆ. ಅವನ 'parts of speech' ಅನೇಕ ತಪ್ಪು ತಿಳಿವಳಿಕೆಗಳಿಗೆ ಕಾರಣವಾಗಿದೆ. ಗ್ರೀಕರು ತಮ್ಮ ಭಾಷೆಯನ್ನಲ್ಲದೆ ಬೇರೆ ಭಾಷೆಗಳನ್ನು ಅಧ್ಯಯನ ಮಾಡಲಿಲ್ಲ. ತಮ್ಮ ಭಾಷೆಯೇ ಪ್ರಪಂಚದ

ಎಲ್ಲ ಭಾಷೆಗಳ ಲಕ್ಷಣಗಳನ್ನೂ ಒಳಗೊಂಡಿದೆ ಎಂದು ನಂಬಿದ್ದರು. ತಮ್ಮ ಭಾಷೆಗೆ ವ್ಯಾಕರಣ ನಿಯಮಗಳನ್ನು ಹೇಳಿ ಅವು ಸರ್ವಸಾಮಾನ್ಯ ನಿಯಮಗಳೆಂದು (Universal laws) ಎಂದು ಸಾರಿದರು.

ಗ್ರೀಕರ ಭಾಷಾವಿಷಯಕ ಚರ್ಚೆಗಳಲ್ಲಿ ಅಮೂರ್ತ ವಿಷಯಗಳ ವಿವೇಚನೆ ಅಥವಾ abstract speculation ಹೆಚ್ಚು. ಸಾಮಗ್ರಿಯ ಸಂಗ್ರಹ, ಜೋಡಣೆ, ಸೂಕ್ಷ್ಮವಾದ ಪರಿಶೀಲನೆ—ಇಂತಹವು ಗ್ರೀಕ್ ತತ್ವಶಾಸ್ತ್ರಜ್ಞರಲ್ಲಿ ಅಷ್ಟಾಗಿ ಇಲ್ಲವೆಂದೇ ಹೇಳಬೇಕು. ಆ ದೃಷ್ಟಿಯಿಂದ ನೋಡಿದರೆ ಪಾಣಿನಿ ಮುಂತಾದವರ ವೈಜ್ಞಾನಿಕ ದೃಷ್ಟಿಯನ್ನು ಇವರಲ್ಲಿ ಕಾಣಲಾರೆವು.

ಗ್ರೀಕರ ನಂತರ ಬಂದ ಲ್ಯಾಟಿನ್ ವೈಯಾಕರಣಿಗಳಲ್ಲೂ ಭಾಷಾಧ್ಯಯನ ಹೆಚ್ಚು ಪ್ರಗತಿಯನ್ನು ಹೊಂದಲಿಲ್ಲ. ರೋಮನರು ಗ್ರೀಕ್ ಮಾದರಿಯಲ್ಲೇ ಲ್ಯಾಟಿನ್ ವ್ಯಾಕರಣಗಳನ್ನು ರಚಿಸಿದರು. ದೊನಾತಸ್ (Donatus) ಎಂಬ ನಾಲ್ಕನೆಯ ಶತಮಾನದ, ಪ್ರಿಸ್ಕಿಯನ್ (Priscian) ಎಂಬ ಆರನೇ ಶತಮಾನದ ಲ್ಯಾಟಿನ್ ವೈಯಾಕರಣಿಗಳನ್ನು ಇಲ್ಲಿ ಹೆಸರಿಸಬಹುದು. ಮಧ್ಯಯುಗದಲ್ಲಿ ಲ್ಯಾಟಿನ್ ಭಾಷೆಯು ಫ್ರೆಂಚ್, ಇಟಾಲಿಯನ್, ಸ್ಪ್ಯಾನಿಷ್ ಭಾಷೆಗಳಾಗಿ ಕವಲೊಡೆದ ಮೇಲೂ ವಿದ್ವಾಂಸರು ಲ್ಯಾಟಿನ್ ಭಾಷೆಯನ್ನೇ ಅಭ್ಯಸಿಸಿದರು. ಲ್ಯಾಟಿನ್ನಿನ ವಿದ್ವಾಂಸನ ದೃಷ್ಟಿಯಲ್ಲಿ ಲ್ಯಾಟಿನ್ ಒಂದೇ ಪ್ರಪಂಚದ ಏಕೈಕ ತರ್ಕಬದ್ಧವಾದ ಭಾಷೆ ; ಆ ಭಾಷೆಯ ವ್ಯಾಕರಣವೇ 'ಆದರ್ಶ ವ್ಯಾಕರಣ'; ಅದರ ನಿಯಮಗಳು ಎಲ್ಲ ಭಾಷೆಗಳಿಗೂ ಅನ್ವಯಿಸುತ್ತವೆ, ಅನ್ವಯಿಸಬೇಕು. ಕ್ರಿ.ಶ. 1440ರಲ್ಲಿ ಲೌರೆಂಟಿಯುಸ್ ವಲ್ಲ (Laurentius Valla) ಎಂಬಾತನು ಬರೆದ ಲ್ಯಾಟಿನ್ ವ್ಯಾಕರಣವು ಹದಿನೆಂಟನೆಯ ಶತಮಾನದವರೆಗೆ ಪ್ರಭುತ್ವವನ್ನು ನಡಸಿತು. ವಿದ್ವಾಂಸರಿಗೆ ವ್ಯಾಕರಣ ಮತ್ತು ಲ್ಯಾಟಿನ್ ವ್ಯಾಕರಣಗಳು ಸಮಾನಾರ್ಥಕಗಳಾಗಿದ್ದುವು. ಲ್ಯಾಟಿನ್ ವ್ಯಾಕರಣವು ವಿದ್ಯಾರ್ಥಿಗಳ ಅಧ್ಯಯನದ ಮುಖ್ಯ ವಿಷಯವಾಗಿದ್ದಿತು. ಇಂಗ್ಲೆಂಡಿನಲ್ಲಿ 'ಸೆಕಂಡರಿ ಸ್ಕೂಲ್' ಎನ್ನುವುದರ ಬದಲು 'ಗ್ರ್ಯಾಮರ್ ಸ್ಕೂಲ್' (Grammar School) ಎನ್ನುತ್ತಿದ್ದರು. ಲ್ಯಾಟಿನ್ ವ್ಯಾಕರಣವು ಆದರ್ಶವ್ಯಾಕರಣವಾದ್ದರಿಂದ ಅದರ ಎಲ್ಲ ವಿಭಕ್ತಿ ರೂಪಗಳನ್ನೂ ಇಂಗ್ಲಿಷಿನಲ್ಲಿ ಕಾಣಲು ಪ್ರಯತ್ನಪಟ್ಟರು. ಹೀಗೆ ಆಯಾ ಭಾಷೆಯ ವೈಶಿಷ್ಟ್ಯವನ್ನು ಮರೆತರು. ಇರುವ ವಾಸ್ತವ ಸಂಗತಿಗಳು ಲ್ಯಾಟಿನ್ ಭಾಷೆಗೆ ಹೊಂದಿಕೊಳ್ಳುವಂತೆ ಅವುಗಳನ್ನು ವಿರೂಪಗೊಳಿಸಿದರು.[1] ಲ್ಯಾಟಿನ್ ಭಾಷೆಯನ್ನು ಕಲಿಯುತ್ತಿದ್ದುದು ಏನೂ ಸಾರಿ ಜ್ಞಾನಕ್ಕಾಗಿ ಅಲ್ಲ. ವಿದ್ಯಾವಂತರ, ನಾಗರಿಕರ ಮಧ್ಯೆ ಪ್ರತಿಷ್ಠಿತ ಸ್ಥಾನವು ದೊರೆಯಬೇಕಾಗಿದ್ದರೆ ಲ್ಯಾಟಿನ್ ಜ್ಞಾನ ಅನಿವಾರ್ಯವಾಗಿತ್ತು. ವಿದ್ಯಾವಂತರು ಮಾತ್ರ ಶುದ್ಧ ಲ್ಯಾಟಿನ್ನನ್ನು ಬರೆಯುತ್ತಿದ್ದು ಅಷ್ಟು ವಿದ್ಯಾವಂತರಲ್ಲದವರು

---

[1] ಭಾರತದಲ್ಲಿ ಸಂಸ್ಕೃತವು ಲ್ಯಾಟಿನ್ನಿನ ಸ್ಥಾನದಲ್ಲಿ ನಿಲ್ಲುತ್ತದೆ. ದೇಶೀಯ ಭಾಷೆಗಳು ಯೂರೋಪಿನ ಇತರ ಭಾಷೆಗಳ ಸ್ಥಾನದಲ್ಲಿ ನಿಲ್ಲುತ್ತವೆ.

ತಪ್ಪುತಪ್ಪಾಗಿ ಲ್ಯಾಟಿನ್ನನ್ನು ಬರೆಯುತ್ತಿದ್ದುದನ್ನು ಗಮನಿಸಿ ವಿದ್ಯಾವಂತರು ಮ ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವರೆಂದೂ ಅವಿದ್ಯಾವಂತರು ಭ ಯನ್ನು ಕೆಡಿಸುವರೆಂದೂ ನಂಬಿಕೆ ಬೆಳೆಯಿತು. ಆಡುರೂಪಗಳಿಗಿಂತ ಬರಹದ ರ ಗಳಿಗೆ ಪ್ರಾಶಸ್ತ್ಯ ದೊರಕಿತು: ಎಂದರೆ 'Ear-philology'ಗಿಂತ 'Eye-phi logy'ಗೆ ಮಹತ್ವ ದೊರೆಯಿತು. ವ್ಯಾಕರಣವು ಭಾಷೆಯ ವಿವರಣೆ ಆಗಿರದೆ ಅದ ನಿಯಂತ್ರಿಸುವ ಶಕ್ತಿಯಾಯಿತು. ('Grammar was more prescriptive th descriptive.')

ಪುನರುಜ್ಜೀವನದ ಕಾಲದಲ್ಲಿ (Renaissance. 14-16ನೇ ಶತಕದಲ್ಲಿ) ಗ್ರ ಹೀಬ್ರೂ, ಅರೇಬಿಕ್ ಭಾಷೆಗಳ ಅಧ್ಯಯನವು ಆರಂಭವಾಯಿತು. ಪ್ರವಾಸಿಗರು ಬ ಬೇರೆ ದೇಶಗಳಿಂದ ಹೊಸ ಹೊಸ ಪದಗಳನ್ನು ತಂದರು. ಮತಪ್ರಚಾರಕರು ಬೇರೆಬ ದೇಶಗಳ ಭಾಷೆಗಳಿಗೆ ಬೈಬಲನ್ನು ಪರಿವರ್ತಿಸಿದರು; ಅವುಗಳಿಗೆ ವ್ಯಾಕರಣಗಳ ಬರೆದರು; ಲ್ಯಾಟಿನ್ ವ್ಯಾಕರಣದ ಚೌಕಟ್ಟಿಗೆ ಅವುಗಳನ್ನು ಅಳವಡಿಸಲು ಪ್ರಯ ದರು. ಪುನರುಜ್ಜೀವನದ ಫಲವೆಂದರೆ ಕೆಲವು ವಿದ್ವಾಂಸರು ತಮ್ಮ ಭಾಷೆಗಳ ಪ್ರಾಚ ಬರಹಗಳ ಕಡೆ ಗಮನವಿತ್ತದ್ದು. ಫ್ರಾನ್ಸಿಸ್ಕಸ್ ಜೂನಿಯಸ್ (1589-16 ಎಂಬಾತನು ಇಂಗ್ಲಿಷಿನ ಪ್ರಾಚೀನ ಬರಹಗಳನ್ನೂ ಅದಕ್ಕೆ ಸಂಬಂಧಿಸಿದ ಡ ಜರ್ಮನ್, ಸ್ಕ್ಯಾಂಡಿನೇವಿಯನ್ ಭಾಷೆಗಳ ಪ್ರಾಚೀನ ಬರಹಗಳನ್ನೂ ಅಭ್ಯಸಿ ಜಾರ್ಜ್ ಹಿಕ್ಸ್ (1642-1715) ಎಂಬಾತನು ಈ ಕೆಲಸವನ್ನು ಮುಂದುವ ಇಂಗ್ಲಿಷ್ ಭಾಷೆಯ ಪ್ರಾಚೀನ ಘಟ್ಟಗಳನ್ನು ಕುರಿತು ಅಮೂಲ್ಯ ವಿಷಯಗಳ ಸಂಗ್ರಹಿಸಿದ. ಅಚ್ಚಿನ ಸೌಲಭ್ಯ ದೊರೆತ ಆ ಕಾಲದಲ್ಲಿ ಇತರ ಎಲ್ಲಾ ಭಾಷಾ ಸಾಹಿ ಗಳ ವಿಷಯದಲ್ಲಿ ಆಸಕ್ತಿ ಮೂಡಿತು. ಹಳೆಯ ಒಡಂಬಡಿಕೆಯ ಭಾಷೆ ಹೀಬ ವಾಗಿದ್ದರಿಂದ ಅದು ಸ್ವರ್ಗದ ಭಾಷೆಯೆಂಬ ಭಾವನೆ ಬಲಿದು ಯೂರೋಪಿನ ಭಾಷೆಗಳ ಎಲ್ಲ ಪದಗಳನ್ನೂ ಹೀಬ್ರೂವಿನಿಂದ ನಿಷ್ಪನ್ನ ಮಾಡುವ ಪ್ರಯತ್ನಗಳು ದುವು. ಹಳೆಯ ಗೋಥೋನಿಕ್ (Germanic) ಭಾಷೆಯ ಪುಸ್ತಕಗಳು ಸಿಕ್ಕು ಹಳ ಇಂಗ್ಲಿಷ್, ಹಳೆಯ ಜರ್ಮನ್, ಹಳೆಯ ಐಸ್‌ಲ್ಯಾಂಡಿಕ್ ಭಾಷೆಗಳ ಜೊತೆಯ ಹೋಲಿಸಲಾಯಿತು. ಇದು ಐತಿಹಾಸಿಕ ಭಾಷಾವಿಜ್ಞಾನಕ್ಕೆ ದಾರಿಯಾಯಿತು. ಆದ ಲ್ಯಾಟಿನ್ ಭಾಷೆಯ ಪ್ರಭುತ್ವವು ಹದಿನೆಂಟನೇ ಶತಮಾನದವರೆಗೂ ಸಾಕಷ್ಟು ಪ್ರ ವಾಗಿಯೇ ಇತ್ತು.

. ಹದಿನೆಂಟನೇ ಶತಮಾನದಲ್ಲಿ ಭಾಷಾವಿಜ್ಞಾನಕ್ಕೆ ಸಂಬಂಧಿಸಿದಂತೆ ಬಹುಮ ಊಹಾಪೋಹವು ನಡೆಯಿತು. ಭಾಷೆಯ ಉಗಮವು ಪ್ರಾಕೃತಿಕವಾದುದೇ ಭಾಷ ಮಾನವ ನಿರ್ಮಿತವೇ ಎಂಬ ವಿಷಯದಲ್ಲಿ ಚರ್ಚೆ ನಡೆಯಿತು. ರೂಸೋ ಭಾಷೆಯನ್ನು ಒ ರೀತಿಯ ಸಾಮಾಜಿಕ ಒಪ್ಪಂದ (Contract Social) ಎಂದು ಕರೆದನು. ಭಾಷ ಗೊತ್ತಿರದ ಆದಿವಾಸವರ ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀ ತಮ್ಮ ಕೂಗುಗಳಿಂದ, ಭ

ವೇಶದ ಉದ್ಗಾರಗಳಿಂದ ಭಾಷೆಯಂತಹ ಒಂದು ವಸ್ತುವನ್ನು ಹೇಗೆ ನಿರ್ಮಿಸಿಕೊಳ್ಳುತ್ತಾರೆ ಎಂಬುದನ್ನು ಕುರಿತು ಕಾಂಡಿಲಾಕ್ ಎಂಬುವನು ವಿಚಾರಮಾಡಿದ. ಆ ಕಾಲದ ಅತ್ಯಂತ ಮೇಧಾವಿಗಳಲ್ಲೊಬ್ಬ ಹರ್ಡರ್. ಆತನು ತನ್ನ ಕಾಲದ ಸಾಂಪ್ರದಾಯಿಕ ಅಭಿಪ್ರಾಯಗಳನ್ನು ಪ್ರತಿಭಟಿಸಿ ಭಾಷೆಯು ದೈವದತ್ತವಾದುದಲ್ಲವೆಂದು ವಾದಿಸಿದನು. ಭಾಷೆಯು ದೈವನಿರ್ಮಿತವಾಗಿದ್ದರೆ ಅದು ಹೆಚ್ಚು ತರ್ಕಬದ್ಧವಾಗಿರುತ್ತಿತ್ತೆಂದು ಅವನ ಅಭಿಪ್ರಾಯ.

ಹತ್ತೊಂಬತ್ತನೇ ಶತಮಾನದಲ್ಲಿ ಭಾಷಾವಿಜ್ಞಾನವು ಹೊಸ ಹೊಸ ದಿಕ್ಕುಗಳಲ್ಲಿ ಬೆಳೆಯಿತು. ಭಾಷೆಯ ವಿಷಯದಲ್ಲಿ ಹಿಂದಿನ ಅನೇಕ ಶತಮಾನಗಳಲ್ಲಿ ಕಂಡುಬರದೆ ಇದ್ದ ಒಂದು ಆಳವಾದ ಅಂತರ್ದೃಷ್ಟಿ ಬೆಳೆಯಿತು, ಐತಿಹಾಸಿಕ ದೃಷ್ಟಿ ಬೆಳೆಯಿತು. ಒಂದು ಪದವು ಆ ರೂಪವನ್ನು ಏದು ಏಕೆ ಪಡೆಯಿತು ಎಂಬ ಜಿಜ್ಞಾಸೆಯು ಮೊಳೆಯಲಾರಂಭವಾಯಿತು. ಪಾಶ್ಚಾತ್ಯ ವಿದ್ವಾಂಸರಿಗೆ ಸಂಸ್ಕೃತದ ಪರಿಚಯವಾದದ್ದು ಭಾಷಾವಿಜ್ಞಾನದ ಇತಿಹಾಸದಲ್ಲಿ ಒಂದು ಅತ್ಯಂತ ಪ್ರಮುಖ ಘಟ್ಟವೆಂದು ಭಾವಿಸಲಾಗಿದೆ. ವಿದ್ವಾಂಸರ ದೃಷ್ಟಿಯಲ್ಲಿ ಒಂದು ಕ್ರಾಂತಿಕಾರಕ ಪರಿವರ್ತನೆಯನ್ನೇ ಉಂಟುಮಾಡಿತು ಆ ಪರಿಚಯ. ಕ್ರಿ.ಶ. 1767ರಲ್ಲಿ ಫ್ರೆಂಚ್ ಪಾದ್ರಿಯೊಬ್ಬ ಲ್ಯಾಟಿನ್ ಮತ್ತು ಸಂಸ್ಕೃತ ಪದಗಳನ್ನು ಹೋಲಿಸಿ ಒಂದು ವರದಿಯನ್ನು ಕಳುಹಿಸಿದ್ದ. ಹದಿನೆಂಟನೇ ಶತಮಾನದ ಉತ್ತರಾರ್ಧದಲ್ಲಿ ಸಂಸ್ಕೃತವನ್ನು ಅಧ್ಯಯನಮಾಡಿ ಅದಕ್ಕೂ ಉಳಿದ ಭಾಷೆಗಳಿಗೂ ಇರುವ ನಿಕಟ ಸಾಮ್ಯವನ್ನು ಗುರುತಿಸಿದ ಸರ್ ವಿಲಿಯಂ ಜೋನ್ಸನ ಕೆಳಗಿನ ಮಾತುಗಳು ಉಲ್ಲೇಖನೀಯವಾಗಿವೆ :

> The Sanscrit language, whatever be its antiquity, is of a wonderful structure, more perfect than the Greek, more copious than the Latin and more exquisitely refined than either; yet bearing to both of them a stronger affinity, both in the roots of verbs and in the forms of grammar, than could possibly have been produced by accident; so strong, indeed, that no philologer could examine them all three without believing them to have sprung from some common source, which, perhaps, no longer exists. There is a similar reason, though not quite so forcible, for supposing that both the Gothic and the Celtic...had the same origin with the Sanscrit; and the old Persian might be added to the same family.

ಸಂಸ್ಕೃತವೂ ಕೂಡಿ ಅನೇಕ ಯೂರೋಪಿನ ಭಾಷೆಗಳು ಮೂಲತಃ ಒಂದು ಭಾಷೆಯಿಂದ ಹೊರಟುವು ಎಂಬ ಮೇಲಿನ ಮಾತುಗಳನ್ನು ವಿಲಿಯಂ ಜೋನ್ಸ್ ಹೇಳಿದುದು 1786ರಲ್ಲಿ. ಅವನ ಮಾತುಗಳು ತೌಲನಿಕ ಭಾಷಾವಿಜ್ಞಾನದ (Comparative

Linguistics) ಹೊಸ ಹಾದಿಯನ್ನು ಹಾಕಿಕೊಟ್ಟವು. ಅವನನ್ನು ತೌಲನಿಕ ಭಾಷಾ ವಿಜ್ಞಾನದ ಪಿತಾಮಹನೆಂದೂ ಕರೆಯುತ್ತಾರೆ. ಪಾಣಿನಿಯ ವ್ಯಾಕರಣವು ಅನೇಕ ಪಾಶ್ಚಾತ್ಯ ವಿದ್ವಾಂಸರಿಗೆ ಅಚ್ಚರಿಯನ್ನುಂಟುಮಾಡಿತು. ಅದು ಭಾಷೆಯೊಂದರ ಸಮಗ್ರ, ನಿರ್ದುಷ್ಟ ವಿವರಣೆಯಾಗಿತ್ತು. ಈ ವಿವರಣೆಯು ಭಾಷೆಯ ಪ್ರತ್ಯಕ್ಷ ಪರಿಶೀಲನೆಯ ಮತ್ತು ವಿಶ್ಲೇಷಣೆಯ ಫಲವಾಗಿದ್ದುದನ್ನು ಗುರುತಿಸಿದರು. ಹಿಂದೂಗಳ ವ್ಯಾಕರಣವು ಭಾಷಾವಿಶ್ಲೇಷಣೆಯ ತತ್ತ್ವವನ್ನು ಕಲಿಸಿತು. ಯೂರೋಪಿಯನ್ ಭಾಷೆ ಗಳಿಗೂ ಸಂಸ್ಕೃತಕ್ಕೂ ಹೋಲಿಕೆ ನಡೆಯಿತು. ಇದರ ಫಲವೇ ತೌಲನಿಕ ಭಾಷಾ ವಿಜ್ಞಾನ. ಹತ್ತೊಂಬತ್ತನೇ ಶತಮಾನದ ಅತ್ಯಂತ ಯಶಸ್ವಿಯಾದ ಭಾಷಾವಿಜ್ಞಾನದ ಭಾಗವೆಂದರೆ ಈ ತೌಲನಿಕ ಭಾಷಾವಿಜ್ಞಾನವೇ. ಸಂಸ್ಕೃತವು ಯೂರೋಪಿನ ವಿದ್ವಾಂಸರ ಪಾಂಡಿತ್ಯದ ಅತ್ಯಗತ್ಯವಾದ ಅಂಗವಾಗಿ ಪರಿಣಮಿಸಿತು.

ಷ್ಲೆಗೆಲ್ 19ನೇ ಶತಮಾನದ ಆದಿಯಲ್ಲಿ ಪ್ರಭಾವಶಾಲಿ ಭಾಷಾವಿಜ್ಞಾನಿಯಾಗಿದ್ದ. ಸಂಸ್ಕೃತವನ್ನು ಇವನು ಚೆನ್ನಾಗಿ ಅಧ್ಯಯನವನ್ನು ಮಾಡಿದ್ದ. ಪ್ರಪಂಚದ ಭಾಷೆಗಳನ್ನು ಸಂಸ್ಕೃತ ಮತ್ತು ಅದರ ಸೋದರ ಭಾಷೆಗಳೆಂದೂ ಇತರ ಭಾಷೆಗಳೆಂದೂ ಎರಡು ಪಂಗಡಗಳಾಗಿ ವಿಭಾಗಿಸುತ್ತಾನೆ. ಈ ಶತಮಾನದ ಅತಿ ದೊಡ್ಡ ಹೆಸರುಗಳೆಂದರೆ ಬಾಪ್, ಗ್ರಿಮ್ ಮತ್ತು ರಾಸ್ಕ್—ಇವರದು.

ರಾಸ್ಕ್ (Rasmus Rask) 1787ರಲ್ಲಿ ಡೆನ್ಮಾರ್ಕಿನ ರೈತರ ಮನೆಯಲ್ಲಿ ಹುಟ್ಟಿದ. ಇವನು ಹುಟ್ಟು ವೈಯಾಕರಣಿಯಾಗಿದ್ದ. ಇವನಿಗೆ ಐಸ್‌ಲ್ಯಾಂಡಿನ ಭಾಷೆಯಲ್ಲಿ ತುಂಬು ಪರಿಶ್ರಮವಿದ್ದಿತು. ಅದರ ಮೇಲಿನ ವ್ಯಾಕರಣ ಅವನ ಶ್ರೇಷ್ಠ ಕೃತಿ. ಭಾಷೆಗೆ ಪದಗಳು ಸೇರಬಹುದು, ಇದ್ದ ಪದಗಳು ಹೊರಟುಹೋಗಬಹುದು : ಆದರೆ ಅದರ ವ್ಯಾಕರಣವು ಮಾತ್ರ ಏಟ್ಟಲವಾಗಿರುತ್ತದೆ ಎಂಬುದನ್ನು ಗುರುತಿಸಿದನು. ಎರಡು ಭಾಷೆ ಗಳಲ್ಲಿ ಸರ್ವನಾಮಗಳೂ ಸಂಖ್ಯಾವಾಚಕಗಳೂ ಒಂದೇ ಆಗಿದ್ದರೆ ಆ ಎರಡು ಭಾಷೆಗಳೂ ಒಂದೇ ಮೂಲದಿಂದ ಬಂದಿರುತ್ತವೆ ಎಂದು ಹೇಳಿದ್ದಾನೆ. ದ್ರಾವಿಡ ಭಾಷಾವರ್ಗವು ಒಂದು ಪ್ರತ್ಯೇಕ ಭಾಷಾವರ್ಗವೆಂಬುದನ್ನು ಕಂಡುಕೊಂಡ ಪ್ರಾಚೀನರಲ್ಲಿ ಇವನೂ ಒಬ್ಬ.

ಗ್ರಿಮ್ (Jacob Grimm) ಮೊದಮೊದಲು ಜಾನಪದ ವಿಷಯಗಳ ಅಧ್ಯಯನ ದಲ್ಲಿ ಆಸಕ್ತಿಯುಳ್ಳವನಾಗಿದ್ದು, ಷ್ಲೆಗೆಲ್, ರಾಸ್ಕರ ಕೃತಿಗಳಿಂದ ಉತ್ತೇಜಿತನಾಗಿ ಜರ್ಮನ್ ಮತ್ತು ಅದರ ಸೋದರ ಭಾಷೆಗಳ ಪೂರ್ವಾವಸ್ಥೆಗಳ ಅಧ್ಯಯನಕ್ಕೆ ಕೈಹಾಕಿದನು. ಇವನ ಪ್ರಕಾರ ಎಂತಹ ಕ್ಷುದ್ರಭಾಷೆಯೂ, ಪ್ರತಿ ಉಪಭಾಷೆಯೂ ಗೌರವಾರ್ಹ, ಅಧ್ಯಯನಯೋಗ್ಯ. ನಾಗರಿಕಭಾಷೆಗಳ ಅಧ್ಯಯನಕ್ಕಿಂತ ಇವುಗಳ ಅಧ್ಯಯನ ಎಷ್ಟೋ ವೇಳೆ ಹೆಚ್ಚು ಫಲಕಾರಿಯಾಗಿರುವುದೂ ಉಂಟು. ಭಾಷೆಗೆ ನಿಯಮಗಳನ್ನು ಹಾಕುತ್ತಿದ್ದ ವ್ಯಾಕರಣಗಳ ಪದ್ಧತಿಯನ್ನು ಖಂಡಿಸಿದ್ದಾನೆ. ಗ್ರೀಕ್, ಗಾಥಿಕ್, ಹೈ ಜರ್ಮನ್ ಭಾಷೆಗಳ ಧ್ವನಿಸಂವಾದಗಳನ್ನು (Phonetic correspondences) ತೋರಿಸುವ ಸೂತ್ರವನ್ನು ಕಂಡುಹಿಡಿದ. ಇದನ್ನು Grimm's Law

ಎನ್ನುತ್ತಾರೆ. ಈ ಸೂತ್ರವು ನಿಲ್ಲತಕ್ಕದ್ದಲ್ಲವಾದರೂ ತೌಲನಿಕ ಭಾಷಾವಿಜ್ಞಾನದಲ್ಲಿ ಆ ಕಾಲಕ್ಕೆ ಇದೊಂದು ಮುಂದೆ ಇಟ್ಟ ಹೆಜ್ಜೆ ಎನ್ನಬಹುದು. ಬಾಪ್ (Franz Bopp) ಕೆಲವರ ಪ್ರಕಾರ ಆಧುನಿಕ ಭಾಷಾವಿಜ್ಞಾನದ ಆದಿಪ್ರವರ್ತಕರಲ್ಲಿ ಅಗ್ರಗಣ್ಯ. ಇವನು ಪ್ಯಾರಿಸ್ಸಿನಲ್ಲಿ ಸಂಸ್ಕೃತವನ್ನು ಆಳವಾಗಿ ಅಭ್ಯಸಿಸಿದ. ಇವನ ಮೊದಲ ಪುಸ್ತಕ 1816ರಲ್ಲಿ ಪ್ರಕಟವಾಯಿತು. ಅಲ್ಲಿಂದ ತೌಲನಿಕ ಭಾಷಾವಿಜ್ಞಾನವು ಆರಂಭವಾಯಿ ತೆಂದು ಜರ್ಮನಿಯಲ್ಲಿ ಭಾವಿಸುತ್ತಾರೆ. ಗ್ರೀಕ್ ಮುಂತಾದ ಯೂರೋಪಿನ ಎಲ್ಲ ಭಾಷೆಗಳಿಗೂ ಸಂಸ್ಕೃತ ಮೂಲವೆಂಬ ಭಾವನೆ ಆ ಕಾಲದಲ್ಲಿ ಪ್ರಚಲಿತವಾಗಿತ್ತು. ಅದನ್ನು ಅವನು ಒಪ್ಪಲಿಲ್ಲ. ಸಂಸ್ಕೃತವು ಮೂಲಭಾಷೆಯ ಲಕ್ಷಣಗಳನ್ನು ತನ್ನ ಸೋದರ ಭಾಷೆಗಳಿಗಿಂತ ಹೆಚ್ಚು ಶುದ್ಧರೂಪದಲ್ಲಿ ಉಳಿಸಿಕೊಂಡಿರಬಹುದೇ ಹೊರತು ಅದೇ ಮೂಲವಲ್ಲ ಎಂದು ಸಾರಿದನು. ಈಚಿನ ಸಂಶೋಧನೆಗಳು ಇದನ್ನು ಪುಷ್ಟೀಕರಿ ಸಿವೆ. ಇವನಿಂದ ತೌಲನಿಕ ಭಾಷಾವಿಜ್ಞಾನವು ಬಹು ಜನಪ್ರಿಯವಾಯಿತು.

ಭಾಷೆಯ ವಿಷಯವಾಗಿ ಬಹು ಗಹನವಾಗಿ ಆಲೋಚಿಸಿದವರಲ್ಲಿ ಹಮ್‌ಬೋಲ್ಟ್ (Wilhelm Von Humboldt) ಅಗ್ರಗಣ್ಯನೆನ್ನುತ್ತಾರೆ. ಇವನ ಪ್ರಕಾರ ಭಾಷೆ ಯೆಂಬುದು ಸಿದ್ಧವಸ್ತುವಲ್ಲ, ನಿತ್ಯಪರಿವರ್ತನಶೀಲವಾದ ಒಂದು ಕ್ರಿಯೆ ; ಅದು ಧ್ವನಿ ಗಳ ಮೂಲಕ ಮನುಷ್ಯ ತನ್ನ ಅಂತರಂಗವನ್ನು ಹೊರತರಲು ಮಾಡಿದ ಪ್ರಯತ್ನಗಳ ಫಲ. ಅವನಿಗೆ ಒಂದೊಂದು ಭಾಷೆಯೂ—ಅದು ಎಷ್ಟೇ ಕ್ಷುದ್ರವಾಗಿರಲಿ—ಸ್ವಸಂ ಪೂರ್ಣವಾದುದು ; ಅದನ್ನು ಮಾತನಾಡುವ ಜನರ ವ್ಯಕ್ತಿತ್ವದ ಪ್ರತಿನಿಧಿ. ಇವನು ಸಾಮಾನ್ಯವ್ಯಾಕರಣಗಳ ಬದ್ಧದ್ವೇಷಿ. ಅವನ ಪ್ರಕಾರ ಭಾಷೆಯ ಮೊದಮೊದಲ ಅವಸ್ಥೆ ಯಲ್ಲಿ ಪದಗಳು ಕೇವಲ ವಸ್ತುಗಳನ್ನು ಸೂಚಿಸುತ್ತಿದ್ದು, ಪದಗಳ ಪರಸ್ಪರ ಸಂಬಂಧ ವನ್ನು ಕೇಳುವವರು ಊಹಿಸಬೇಕಾಗುತ್ತಿದ್ದಿತು. ಎರಡನೆಯ ಘಟ್ಟದಲ್ಲಿ ಪದಗಳ ಅನುಕ್ರಮಣಿಕೆ ಖಚಿತಗೊಳ್ಳುತ್ತದೆ. ಇಲ್ಲಿ ಕೆಲವು ಪದಗಳು ತಮ್ಮ ಸ್ವತಂತ್ರ ಅಸ್ತಿತ್ವ ವನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿರುತ್ತವೆ. ಇವೇ ಮುಂದೆ ಪ್ರತ್ಯಯಗಳಾಗುತ್ತವೆ. ಇದು ಮೂರನೆಯ ಘಟ್ಟ. ಆದರೂ ಇಲ್ಲಿ ಕೊಂಡಿಗಳು ಸ್ಪಷ್ಟವಾಗಿರುತ್ತವೆ. ನಾಲ್ಕನೆಯ ಘಟ್ಟದಲ್ಲಿ ಪದವು ಅಖಂಡವಾಗುತ್ತದೆ, ಎಂದರೆ 'ಪ್ರಕೃತಿ ಪ್ರತ್ಯಯ ಗಳನ್ನು ಬಿಡಿಸಿ ತೋರಿಸುವುದು ಅಸಾಧ್ಯವಾಗುತ್ತದೆ. ಇದೇ 'ಫ್ಲೆಕ್ಷನ್'.'

ಬಾಪ್ ಮತ್ತು ಗ್ರಿಮ್ ಇವರ ಬಳಿಕ ಭಾಷಾವಿಜ್ಞಾನದ ಸ್ವರೂಪವೇ ಬದಲಾವಣೆ ಗೊಂಡಿತು. ಹದಿನೆಂಟನೇ ಶತಮಾನದಲ್ಲಿ ಊಹೆಯ ಮೇಲೆ ಮೂಡಿದ್ದ ನಿಷ್ಪತ್ತಿಗಳು ನಗೆಗೀಡಾದುವು. ಇಂಡೋ-ಯೂರೋಪಿಯನ್ ಎಂಬ ಪ್ರತ್ಯೇಕ ಭಾಷಾವರ್ಗವನ್ನು ಗುರುತಿಸಿದಮೇಲೆ ಇನ್ನೊಂದು ಪ್ರತ್ಯೇಕ ಭಾಷಾವರ್ಗಕ್ಕೆ ಸೇರಿರುವ ಹೀಬ್ರೂ ಭಾಷೆಯ ಪದಗಳಿಗೂ ಲ್ಯಾಟಿನ್, ಗ್ರೀಕ್ ಪದಗಳಿಗೂ ಸಂಬಂಧ ಕಲ್ಪನೆ ಮಾಡುವುದು ನಿಂತು ಹೋಯಿತು. ರಾಸ್ಕ್ ಇಂಡೋ-ಯುರೋಪಿಯನ್ ಭಾಷಾವರ್ಗವನ್ನು 'European', 'Japhetic' ಮುಂತಾಗಿ ಕರೆದ : ಬಾಪ್ 'Indo-European' ಎಂದು ಕರೆದ. ಜರ್ಮನಿ

ಯನ್ನು ಬಿಟ್ಟರೆ ಉಳಿದ ಕಡೆಗಳಲ್ಲೆಲ್ಲಾ ಈ ಹೆಸರೇ ಪ್ರಚುರವಾಗಿದೆ. ಹಮ್‌ಬೋಲ್ಟ್ 'Indo-Germanic' ಎಂದು ಕರೆದ. ಜರ್ಮನಿಯಲ್ಲಿ ಮಾತ್ರ ಈ ಹೆಸರು ಪ್ರಚುರವಾಗಿದೆ.

ಹಿಂದೆ ಹೆಸರಿಸಿದ ಮಹನೀಯರಿಂದ ಭಾಷೆಯ ಅಧ್ಯಯನಕ್ಕೆ ಒಂದು ಸ್ವತಂತ್ರ ಸ್ಥಾನವು ಲಭಿಸಿತು. ಭಾಷಾವಿಜ್ಞಾನವು ಅಲ್ಲಿಯವರೆಗೆ 'Philology'ಯ ಶಾಖೆಯಾಗಿದ್ದಿತು. 'Philology' ಎಂಬುದು ವಿಶಾಲವಾದ ಅಧ್ಯಯನ ಕ್ಷೇತ್ರವನ್ನು ಸೂಚಿಸುತ್ತದೆ. ಒಂದು ದೇಶದ ಪ್ರಾಚೀನ ಬರಹಗಳನ್ನು ಸಂಸ್ಕೃತಿಯ ದೃಷ್ಟಿಯಿಂದ ಅಧ್ಯಯನ ಮಾಡುವುದು 'philology.' ಭಾಷೆಯು ಸಂಸ್ಕೃತಿಯ ಅಂಗವಾದ್ದರಿಂದ ಭಾಷಾಧ್ಯಯನವು'Philology'ಯ ಅಂಗವಾಗಿತ್ತು.'Philology'ಯನ್ನು ಅಧ್ಯಯನ ಮಾಡುವ ವ್ಯಕ್ತಿಗೆ ಸಾಹಿತ್ಯವಿಲ್ಲದ ಭಾಷೆ ವ್ಯರ್ಥ. ಆದರೆ ಭಾಷಾ ವಿದ್ಯಾರ್ಥಿಗೆ ಸಾಹಿತ್ಯವಿರಲಿ ಇಲ್ಲದಿರಲಿ ಭಾಷೆ ಮುಖ್ಯ. ಸಂಸ್ಕೃತದ ಸ್ಥಾನವು ಈ ಕಾಲದಲ್ಲಿ ವಿಶೇಷವಾಗಿ ಹೆಚ್ಚಿತು. ಭಾಷೆಗಳಿಗೆ ಇರುವ ಪರಸ್ಪರ ಸಾಮ್ಯದ ಕಡೆ ವಿಶೇಷ ಗಮನವಿತ್ತರು. 'ಮೃತಭಾಷೆ'ಗಳ ವಿಚಾರವಾಗಿ ಹೆಚ್ಚು ಆಸಕ್ತಿ ಬೆಳೆಯಿತು. ವ್ಯಾವಹಾರಿಕ ಭಾಷೆಗಳಲ್ಲೂ ಪ್ರಾಚೀನ ರೂಪಗಳ ಕಡೆಗೇ ಹೆಚ್ಚು ಗಮನವೀಯುತ್ತಿದ್ದರು. ಒಂದು ಭಾಷೆಯ ಈಗಿನ ಸ್ಥಿತಿಯ ವಿಷಯದಲ್ಲಿ ಅಂತಹ ಆಸಕ್ತಿಯನ್ನು ತೋರಿಸುತ್ತಿದ್ದಿಲ್ಲ. ಭಾಷಾ ವ್ಯತ್ಯಾಸಗಳಿಗೆ ಕಾರಣಗಳನ್ನು ಹುಡುಕುವ ಪ್ರಯತ್ನಗಳೂ ನಡೆದುವು. ಎಂದರೆ ಒಟ್ಟಿನಲ್ಲಿ ತೌಲನಿಕ ಮತ್ತು ಐತಿಹಾಸಿಕ ಅಧ್ಯಯನಗಳಿಗೆ ಹೆಚ್ಚು ಪ್ರಾಮುಖ್ಯವು ಸಂದಿತ್ತು.

ಹತ್ತೊಂಬತ್ತನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಭಾಷಾವಿಜ್ಞಾನಿಗಳು ಅನೇಕ ಸ್ವಾರಸ್ಯಕರವಾದ ವಿಷಯಗಳನ್ನು ಸಂಗ್ರಹಿಸಿದ್ದರು. ಅನೇಕ ವಾದಗಳನ್ನು ಮುಂದಿಟ್ಟಿದ್ದರು. ಆದರೆ ಅವುಗಳೆಲ್ಲವೂ ಭಾಷಾವಿಜ್ಞಾನದಲ್ಲಿ ತಕ್ಕಮಟ್ಟಿಗೆ ಪರಿಶ್ರಮವಿರುವವರಿಗೆ ಮಾತ್ರ ನಿಲುಕುವಂತಿದ್ದುವು. ಸಾಮಾನ್ಯ ವಿದ್ಯಾವಂತರಿಗೆ ಆ ಜ್ಞಾನ ಅಗ್ರಾಹ್ಯವಾಗಿದ್ದಿತು. ಕ್ರಿ.ಶ. 1861ರಲ್ಲಿ ಮ್ಯಾಕ್ಸ್‌ಮುಲ್ಲರ್ (Max Muller) ಭಾಷಾವಿಜ್ಞಾನದ ಮೇಲೆ ಉಪನ್ಯಾಸಗಳನ್ನು ಕೊಟ್ಟ. ಈ ಉಪನ್ಯಾಸಗಳು ಮುಂದೆ ('Lectures on the Science of Language') ಪ್ರಕಟವಾದುವು. ಭಾಷಾವಿಜ್ಞಾನವು ಜನಪ್ರಿಯವಾಗಲು ಎಂತಹ ವಿಷಯಗಳನ್ನು ಆರಿಸಿಕೊಳ್ಳಬೇಕು, ಹೇಗೆ ನಿರೂಪಿಸಬೇಕು ಎಂಬ ಕೌಶಲ ಅವನಿಗೆ ತಿಳಿದಿತ್ತು. ಆದರೆ ಅವನ ಹೇಳಿಕೆಗಳನ್ನು ಹೆಚ್ಚು ಪರೀಕ್ಷೆಗೆ ಗುರಿಮಾಡಬಾರದು. ಎಷ್ಟೋ ವೇಳೆ ತಾನು ಹೇಳಬೇಕೆಂದಿರುವ ವಿಷಯವನ್ನು ಮರೆತುಬಿಟ್ಟು, ಸ್ವಾರಸ್ಯವಾದ ಪದಗಳ ನಿಷ್ಪತ್ತಿಯ ಬೆನ್ನುಹತ್ತುತ್ತಾನೆ. ಮ್ಯಾಕ್ಸ್‌ಮುಲ್ಲರನ ಪ್ರತಿಸ್ಪರ್ಧಿಯಂತಿದ್ದ ವ್ಹಿಟ್ನಿಯ (W.B. Whitney) ಸ್ವಭಾವ ತೀರ ಭಿನ್ನವಾದದ್ದು. ಇವನ ಕೃತಿ 'Life and Growth of Language' (1875)[1]

[1] ಇದು ಮೊದಲು 1862ರಲ್ಲಿ *'Language and the Study of Language'* ಎಂಬ ಹೆಸರಿನಲ್ಲಿ ಪ್ರಕಟವಾಗಿದ್ದಿತು.

ಮುಲ್ಲರನ ಕೃತಿಯಷ್ಟು ಜನಪ್ರಿಯವಲ್ಲ. ಇವನ ಶೈಲಿ ಅವನ ಶೈಲಿಯಷ್ಟು ಉಜ್ವಲ ವಲ್ಲ. ಇವನು ಅಗ್ಗದ ಜನಪ್ರಿಯತೆಯನ್ನು ನಿಂದಿಸಿದ್ದಾನೆ. ಮ್ಯಾಕ್ಸ್‌ಮುಲ್ಲರನನ್ನು ಎಷ್ಟು ಖಂಡಿಸಿದರೂ ಇವನಿಗೆ ತೃಪ್ತಿಯಿಲ್ಲ. ಇವನ ಬರವಣಿಗೆಯಲ್ಲಿ ತೂಕವಿದೆ, ಕ್ರಮವಿದೆ, ಬೆಲೆಯಿದೆ. ಇಬ್ಬರೂ ಆ ಕಾಲದ ಭಾಷಾವಿಜ್ಞಾನವನ್ನು ತಮ್ಮದೇ ಆದ ರೀತಿಯಲ್ಲಿ ಅತ್ಯುತ್ತಮ ರೀತಿಯಲ್ಲಿ ಪ್ರತಿನಿಧಿಸುತ್ತಾರೆ. ಇವರಿಬ್ಬರೂ ಸಂಸ್ಕೃತದಲ್ಲಿ ಬಹು ವ್ಯವಸಾಯವನ್ನು ಮಾಡಿದರು. ಮ್ಯಾಕ್ಸ್‌ಮುಲ್ಲರ್ ಸಾಯಣಭಾಷ್ಯ ಸಮೇತ ಋಗ್ವೇದವನ್ನು ಪ್ರಕಟಿಸಿದ್ದಾನೆ. 'Sacred Books of the East' ಮಾಲೆಯಲ್ಲಿ ಐವತ್ತು ಗ್ರಂಥಗಳನ್ನು ಪ್ರಕಟಿಸಿದ್ದಾನೆ. ದ್ರಾವಿಡ, ಮುಂಡಾ ವರ್ಗಗಳು ಬೇರೆ ಪ್ರತ್ಯೇಕ ವರ್ಗಗಳೆಂದು 1854ರಲ್ಲಿ ಸ್ಥಾಪಿಸಿದನು. ವ್ಹಿಟ್ನಿಯು ರಾತ್ ಎಂಬ ವಿದ್ವಾಂಸನೊಡನೆ 1856ರಲ್ಲಿ ಅಥರ್ವಣ ವೇದವನ್ನು ಸಂಪಾದಿಸಿದನು. 'A Sanskrit Grammar' ಎಂಬುದು ಇವನ ಬಹು ಮುಖ್ಯ ಕೃತಿ. ಇವನು ಭಾರತೀಯರ ಖಗೋಳಶಾಸ್ತ್ರದ ಮೇಲೆಯೂ ಕೆಲಸ ಮಾಡಿದ್ದಾನೆ.

ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ 'ಯುವ ವೈಯಾಕರಣ'ರೆಂದು ಪ್ರಸಿದ್ಧರಾದ ಕೆಲವು ಭಾಷಾವಿಜ್ಞಾನಿಗಳ ವಿಷಯವನ್ನು ಕುರಿತು ಬೇರೊಂದು ಅಧ್ಯಾಯ ದಲ್ಲಿ ಚರ್ಚೆ ಮಾಡಲಾಗಿದೆ. ಗ್ರಿಮ್ ಗಾಥಿಕ್, ಗ್ರೀಕ್, ಹೈ-ಜರ್ಮನ್ ಭಾಷೆಗಳ ಧ್ವನಿಗಳಿಗಿರುವ ಸಂವಾದಗಳನ್ನು ತೋರಿಸಿದನು. ಇದು 'Grimm's Law' ಎಂದು ಮುಂದೆ ಪ್ರಸಿದ್ಧವಾಯಿತು. ಆದರೆ ಈ ನಿಯಮಕ್ಕೆ ಅನೇಕ ಅಪವಾದಗಳಿದ್ದುವು. ಆ ಅಪವಾದಗಳನ್ನು ಬೇರೊಂದು ರೀತಿಯಲ್ಲಿ ವಿವರಿಸಬಹುದೆಂಬುದನ್ನು ವರ್ನರ್ ತೋರಿಸಿ ಕೊಟ್ಟ. ಆದ್ದರಿಂದ ಭಾಷೆಗೆ ಸಂಬಂಧಿಸಿದ ನಿಯಮಗಳಿವೆ ಎಂಬುದನ್ನು ವಿದ್ವಾಂಸರು ಮನಗಾಣಲಾರಂಭಿಸಿದ್ದರು. ಬ್ರುಗ್‌ಮನ್, ಒಸ್ತೊಫ್, ಪೌಲ್ ಮುಂತಾದವರು— ಭಾಷಾನಿಯಮಗಳಿಗೆ ಅಪವಾದಗಳೇ ಇಲ್ಲ ಎಂದು ಸಾರಿದರು. ಇವರೇ 'Young Grammarians'. 19ನೇ ಶತಮಾನದ ಕೊನೆಯಲ್ಲಿ ಪ್ರಸಿದ್ಧರಾಗಿರುವ ಇತರ ಭಾಷಾವಿಜ್ಞಾನಿಗಳ ಪೈಕಿ ಇಂಗ್ಲೆಂಡಿನ ಹೆನ್ರಿ ಸ್ವೀಟ್, ನಾರ್ವೆಯ ಲುಂಡೆಲ್, ಡೆನ್ಮಾರ್ಕಿನ ಒಟ್ಟೊ ಯೆಸ್ಪರ್ಸನ್, ಜರ್ಮನಿಯ ವೆಂಕರ್, ಫ್ರಾನ್ಸಿನ ಗಿಲಿಯೆರೊನ್ ಮುಂತಾದವರು ಸ್ಮರಣೀಯರು. ಕೊನೆಯ ಇಬ್ಬರ ಹೆಸರುಗಳು ಉಪಭಾಷೆಗಳನ್ನು ಕುರಿತ ಅಧ್ಯಾಯದಲ್ಲಿ ಹಿಂದೆ ಬಂದಿವೆ. ಯೆಸ್ಪರ್ಸನ್ನನ '*Language-Its Nature, Development and Origin*' ಎಂಬ ಗ್ರಂಥವು ತುಂಬಾ ಪ್ರಸಿದ್ಧವಾಗಿದೆ. ಇದು ಮೊದಲು 1922ರಲ್ಲಿ ಪ್ರಕಟವಾಯಿತು. ಈ ಗ್ರಂಥದ ಮುಖ್ಯ ಲಕ್ಷಣವೆಂದರೆ ಮಗುವಿನ ಭಾಷೆಗೆ ಕೊಟ್ಟಿರುವ ಸ್ಥಾನ. ಮಕ್ಕಳ ಭಾಷೆಯನ್ನು ಸೂಕ್ಷ್ಮವಾಗಿ ಪರಿ ಶೀಲಿಸಿದರೆ ಭಾಷೆಯ ಅನೇಕ ಕ್ಲಿಷ್ಟ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಬಹುದು ಎಂದು ಯೆಸ್ಪರ್ಸನ್ನನು ನಂಬಿದ್ದನು. ಇವನ ಮೊದಲ ಲೇಖನ 1886ರಲ್ಲಿ ಪ್ರಕಟವಾಯಿತು. '*Progress in Language*' ಎಂಬ ಇವನ ಗ್ರಂಥ 1894ರಲ್ಲಿ ಪ್ರಕಟವಾಯಿತು.

ವ್ಯಾಕರಣದ ಸ್ವರೂಪ, ಇಂಗ್ಲಿಷ್ ವ್ಯಾಕರಣ ಇವುಗಳಿಗೆ ಸಂಬಂಧಿಸಿದ ಹಲವು ಅಮೂಲ್ಯ ಗ್ರಂಥಗಳನ್ನು ಇವನು ಬರೆದಿದ್ದಾನೆ.

ಇಪ್ಪತ್ತನೇ ಶತಮಾನದಲ್ಲಿ ಆಧುನಿಕ ಭಾಷಾವಿಜ್ಞಾನದ ಬೆಳವಣಿಗೆಗೆ ಕಾರಣಕರ್ತರಾದ ನಾಲ್ವರ ಹೆಸರುಗಳನ್ನು ಹೆಸರಿಸಬಹುದು—ಡಿ ಸಸ್ಸೂರ್, ಬೋಆಸ್, ಸಪೀರ್ ಮತ್ತು ಬ್ಲೂಮ್‌ಫೀಲ್ಡ್. ಭಾಷೆಗಳನ್ನು ಪರಸ್ಪರ ಹೋಲಿಸಬೇಕಾದರೆ ಮೊದಲು ಆ ಭಾಷೆಗಳ ವಿಸ್ತಾರವಾದ ವಿವರಣಾತ್ಮಕ ವ್ಯಾಕರಣಗಳು ಸಿದ್ಧವಾಗಬೇಕಾಗುತ್ತದೆ. ಪ್ರತಿ ಭಾಷೆಗೂ ವಿವರಣಾತ್ಮಕ ವ್ಯಾಕರಣ ಅತ್ಯಗತ್ಯ. ಭಾಷೆಯನ್ನು ವಿವರಿಸಬೇಕಾದರೆ ಒಂದು ವಿಶ್ಲೇಷಣ ತಂತ್ರವನ್ನು ಸಿದ್ಧಪಡಿಸಬೇಕಾಗುತ್ತದೆ. ಇಲ್ಲದಿದ್ದರೆ ಪ್ರತಿಯೊಬ್ಬ ಭಾಷಾವಿಜ್ಞಾನಿಯೂ ತನಗೆ ತೋಚಿದಂತೆ ಭಾಷೆಯನ್ನು ವಿವರಿಸಬಹುದು. ಹೀಗೆ ವಿಶ್ಲೇಷಣ ತಂತ್ರವು ಸಿದ್ಧವಾಗಿ ಭಾಷೆಯನ್ನು ಸೂಕ್ಷ್ಮವಾಗಿ ಸಮಗ್ರವಾಗಿ ವಿವರಿಸಲು ಸಾಧ್ಯವಾದದ್ದು 'ಧ್ವನಿಮಾ'ದ ಕಲ್ಪನೆಯಿಂದ. ('ಧ್ವನಿಮಾ'ದ ವಿವರಣೆ ಬೇರೊಂದು ಅಧ್ಯಾಯದಲ್ಲಿ ಬಂದಿದೆ.) ಈ ಕಲ್ಪನೆಗೆ (concept) ಮುಖ್ಯವಾಗಿ ಕಾರಣಕರ್ತರು ಇಬ್ಬರು ರಷಿಯನ್ ಭಾಷಾವಿಜ್ಞಾನಿಗಳು—Baudouin de Courtenay ಮತ್ತು ಅವನ ವಿದ್ಯಾರ್ಥಿ Kruszewski (1881). ಅದನ್ನು ಬೆಳಸಿದವರು ಪ್ರೇಗ್ ಶಾಖೆಯ ಭಾಷಾವಿಜ್ಞಾನಿಗಳೆಂದು "ಕರೆಯಿಸಿಕೊಳ್ಳುವ ಯಾಕೊಬ್ಸನ್ (Jakobson) ಮತ್ತು ಟ್ರುಬೆಟ್‌ಸ್ಕಾಯ್ (Trubetskoy). ವಿವರಣಾತ್ಮಕ ಭಾಷಾವಿಜ್ಞಾನದ ತಂತ್ರವನ್ನು (Methodology) ಅತ್ಯುತ್ತಮವಾಗಿ ಪ್ರತಿಪಾದಿಸಿದವರಲ್ಲಿ ಸಸ್ಸೂರ್ (Ferdinand de Saussure) ಅಗ್ರಗಣ್ಯ. ಭಾಷಾವಿಜ್ಞಾನದ ಇತಿಹಾಸದಲ್ಲಿ ಇವನಷ್ಟು ಗೌರವಾನ್ವಿತರು. ಬಹುಮುಖ ಪ್ರತಿಭಾಶಾಲಿಗಳು ಅತ್ಯಪೂರ್ವ. ತನ್ನ ಇಪ್ಪತ್ತನೇ ವಯಸ್ಸಿನಲ್ಲಿ ಮೂಲ ಇಂಡೋ-ಯುರೋಪಿಯನ್ನಿನ ಸ್ವರಗಳ ಮೇಲೆ ಉದ್ಗ್ರಂಥವೊಂದನ್ನು ಬರೆದನು. ಅದು ಈಗಲೂ ಮಾನ್ಯವಾಗಿರುವ ಗ್ರಂಥವಾಗಿದೆ. ಪ್ಯಾರಿಸ್ಸಿನಲ್ಲಿ ಹತ್ತು ವರ್ಷಕಾಲ (1881-1891) ಸಂಸ್ಕೃತವನ್ನು ಬೋಧಿಸಿದನು. ಪ್ಯಾರಿಸ್ಸಿನ ಭಾಷಾವಿಜ್ಞಾನ ಗೋಷ್ಠಿಯ ಕಾರ್ಯದರ್ಶಿಯಾಗಿದ್ದನು. ಅಂದಿನಿಂದ ಭಾಷಾವಿಜ್ಞಾನಿಗಳ ಮೇಲೆ ಇವನ ಪ್ರಭಾವ ಅಪರಿಮಿತ. ಯಾವ ತಾತ್ವಿಕ ಸಮಸ್ಯೆಯನ್ನು ತೆಗೆದುಕೊಂಡರೂ ವಿದ್ವಾಂಸರು ಮೊದಲು ಇವನ ಮತವನ್ನು ಪರಿಶೀಲನೆಗೆ ತೆಗೆದುಕೊಳ್ಳುತ್ತಾರೆ.

ಜಿನೀವ ವಿಶ್ವವಿದ್ಯಾನಿಲಯದಲ್ಲಿ ಇವನು 1906ರಿಂದ 1911ರ ವರೆಗೆ ಭಾಷಾವಿಜ್ಞಾನದ ಮೇಲೆ ಹಲವು ಉಪನ್ಯಾಸಗಳನ್ನು ಕೊಟ್ಟನು. ಅವನ ಉಪನ್ಯಾಸಗಳು ಪುಸ್ತಕರೂಪವಾಗಿ ಹೊರಬರಲಿಲ್ಲ. ಇದೊಂದು ದೊಡ್ಡ ನಷ್ಟ ಎಂದು ಹಲವರಿಗನ್ನಿಸಿತು. ಅವನ ನಿಧನಾನಂತರ ಅವನ ವೈಯಕ್ತಿಕ ಟಿಪ್ಪಣಿಗಳನ್ನೂ ಅವನ ವಿದ್ಯಾರ್ಥಿಗಳ ಟಿಪ್ಪಣಿಗಳನ್ನೂ ತಾಳೆನೋಡಿ ಅವನ ಅಭಿಪ್ರಾಯಗಳನ್ನು ಪುನಾರಚಿಸಲು ಹೋದಾಗ ಅವೆರಡಕ್ಕೆ ಪರಸ್ಪರ ಹೊಂದಾಣಿಕೆ ಬರಲಿಲ್ಲ. ಸಸ್ಸೂರ್ ತನ್ನ ಉಪನ್ಯಾಸ

ಗಳ ನಂತರ ಟಿಪ್ಪಣಿಗಳನ್ನೂ ಹಸ್ತಪ್ರತಿಗಳನ್ನೂ ನಾಶಪಡಿಸುತ್ತಿದ್ದ. ಹೀಗಾಗಿ ಅವನ ವಿದ್ಯಾರ್ಥಿಗಳ ಟಿಪ್ಪಣಿಗಳ ಸಹಾಯದಿಂದ ಆವನ ಅಭಿಪ್ರಾಯಗಳನ್ನು ಪುನಾರಚಿಸಿ *Cours de Linguistique Generale* ಎಂಬ ಹೆಸರಿನ ಕೃತಿಯ ರೂಪದಲ್ಲಿ 1916ರಲ್ಲಿ ಪ್ರಕಟಿಸಿದರು. (ಈ ಫ್ರೆಂಚ್ ಗ್ರಂಥದ ಇಂಗ್ಲಿಷ್ ಅನುವಾದ ಆಮೇಲೆ ಪ್ರಕಟವಾಗಿದೆ.)

ಸಸ್ಸೂರನವರೆಗೆ ಐತಿಹಾಸಿಕ ಭಾಷಾವಿಜ್ಞಾನಕ್ಕೆ ಹೆಚ್ಚು ಪ್ರಾಮುಖ್ಯವಿದ್ದಿತು. ಸಸ್ಸೂರನಿಂದ ಭಾಷಾವಿಜ್ಞಾನದ ವ್ಯಾಪ್ತಿಯು ವಿಸ್ತೃತವಾಗಿ ಅದು ವಿವರಣಾತ್ಮಕ ಭಾಷಾವಿಜ್ಞಾನವನ್ನೂ ಒಳಗೊಂಡಿತು. **Synchronic Linguistics** (=ವಿವರಣಾತ್ಮಕ ಭಾಷಾವಿಜ್ಞಾನ), **Diachronic Linguistics** (=ಐತಿಹಾಸಿಕ ಭಾಷಾವಿಜ್ಞಾನ) ಎಂಬೆರಡು ಉಕ್ತಿಗಳನ್ನು ಮೊದಲು ಬಳಸಿದವನೀತ. ವಿವರಣಾತ್ಮಕ ಭಾಷಾವಿಜ್ಞಾನವು ಆಧುನಿಕ ಯುಗದಲ್ಲಿ ಹೊರವಾಗಿ ಬೆಳೆಯುತ್ತಿದೆ. ಅದಕ್ಕೆ ಭದ್ರವಾದ ತಾತ್ವಿಕ ಬುನಾದಿಯನ್ನು ಹಾಕಿದವನು ಇವನೇ. ಮೇಲೆ ಹೇಳಿದ ಕೃತಿಯಲ್ಲಿ 'ಧ್ವನಿಮಾ'ದ ಚರ್ಚೆಯು ಬಂದಿದೆ.

ಆಧುನಿಕ ಅಮೆರಿಕನ್ ಭಾಷಾವಿಜ್ಞಾನವು ಆರಂಭವಾದದ್ದು ಬೋಅಸ್ ಎಂಬ ವಿದ್ವಾಂಸನಿಂದ (Franz Boas). ಇವನು ಕೊಲಂಬಿಯ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕನಾಗಿದ್ದ. 1897-1908ರ ವರೆಗೆ ಅಮೆರಿಕದ ಇಂಡಿಯನ್ ಭಾಷೆಗಳ ಮೇಲೆ ಕೆಲಸಮಾಡಿ *Handbook of American Indian Languages* ಎಂಬ ಕೃತಿಯನ್ನು ಪ್ರಕಟಿಸಿದ. ವಿವರಣಾತ್ಮಕ ಭಾಷಾವಿಜ್ಞಾನಕ್ಕೆ ಇದೊಂದು ಅತ್ಯುತ್ತಮ ಕಾಣಿಕೆ; ಅದರ ತತ್ವಗಳನ್ನು ತಿಳಿಯಬಯಸುವವರಿಗೆ ಇದು ಅತ್ಯುತ್ತಮ ಪ್ರವೇಶಿಕೆ. ಅವನಿಗಿಂತ ಮುಂಚೆ ಅಮೇರಿಕದ ಇಂಡಿಯನ್ ಭಾಷೆಗಳ ಅಧ್ಯಯನವು ನಡೆದಿದ್ದರೂ ಇಷ್ಟರಮಟ್ಟಿಗೆ ವೈಜ್ಞಾನಿಕವಾಗಿ ಯಾರೂ ಪರಿಶೋಧನೆ ನಡೆಸಿರಲಿಲ್ಲ. ಇವನಿಂದ ವಿವರಣಾತ್ಮಕ ಭಾಷಾವಿಜ್ಞಾನದ ತಂತ್ರವು ಬಹುವಾಗಿ ಬೆಳೆದು ನಿಂತಿತು. ಅವನು ವಿಲಿಯಂ ಜೋನ್ಸ್, ಎಡ್ವರ್ಡ್ ಸಪೀರ್ ಮುಂತಾದ ಪ್ರತಿಭಾಶಾಲಿಗಳಿಗೆ ಭಾಷಾವಿಜ್ಞಾನವನ್ನು ಬೋಧಿಸಿದನು.

ಬೋಅಸನ ನಂತರ ಅಮೆರಿಕದ ಭಾಷಾವಿಜ್ಞಾನದ ಇತಿಹಾಸವೆಂದರೆ ಸಪೀರ್ ಮತ್ತು ಬ್ಲೂಮ್‌ಫೀಲ್ಡರ ಇತಿಹಾಸವೇ ಆಗಿದೆ. ಸಪೀರ್ (Edward Sapir) 1884ರಲ್ಲಿ ಜರ್ಮನಿಯಲ್ಲಿ ಹುಟ್ಟಿದ. ಅವನ ನಾಲ್ಕನೇ ವರ್ಷದಲ್ಲಿ ಅವನ ತಂದೆ ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ ಹೋದರು. ಸಪೀರ್ ಅಲ್ಲಿ ಜರ್ಮಾನಿಕ್ ಭಾಷೆಗಳಲ್ಲಿ ಎಂ.ಎ. ಪದವಿಯನ್ನು ಗಳಿಸಿದ. ಬೋಅಸನ ಪರಿಚಯವಾದದ್ದು, ಅಮೆರಿಕನ್ ಭಾಷಾವಿಜ್ಞಾನಕ್ಕೆ ಆತನ ಮೂಲಕ ಪ್ರವೇಶವಾದದ್ದು ಅಲ್ಲಿಯೇ. ಇವನ ಮೇಲೆ ಬೋಅಸನ ಪ್ರಭಾವ ಹೇರಳವಾಗಿದೆ. ಜೀವಂತ ಭಾಷೆಗಳನ್ನು ಧ್ವನಿಲಿಪಿಯಲ್ಲಿ (Phonetic alphabet. ಇದರ ವಿವರಣೆಗೆ 'ಧ್ವನಿವಿಜ್ಞಾನ' ಅಧ್ಯಾಯವನ್ನು ನೋಡಿ)

ಹಿಡಿದಿಟ್ಟು ಅಭ್ಯಸಿಸುವ ಅಗತ್ಯವನ್ನು ಇವನು ಮನಗಂಡನು. ಅಮೆರಿಕದ ಇಂಡಿಯನ ಭಾಷೆಗಳ ಮೇಲೆ ಕೆಲಸ ಮಾಡಿದನು. ಅಸಾಧಾರಣ ಪ್ರತಿಭಾಶಾಲಿಯಾಗಿದ್ದ ಇವನ ಸಿಕ್ಕಿದ್ದನ್ನೆಲ್ಲ ಓದುವ ಹವ್ಯಾಸವನ್ನು ಬೆಳಸಿಕೊಂಡಿದ್ದ. ಮಾನವಶಾಸ್ತ್ರ (Anthropology), ಮನಶ್ಶಾಸ್ತ್ರಗಳೆರಡನ್ನೂ ಭಾಷಾವಿಜ್ಞಾನಕ್ಕೆ ಹೊಂದಿಸಿಕೊಂಡಿದ್ದ ಭಾಷೆಯಿಂದ ಹಿಡಿದು ಸಂಗೀತದವರೆಗೆ—ಅನೇಕ ವಿಷಯಗಳ ಮೇಲೆ ಲೇಖನಗಳನ್ ಬರೆದಿದ್ದಾನೆ. ಅವನ ಲೇಖನಗಳ ಪಟ್ಟಿಯು ಅವನ ವಿದ್ವತ್ತಿಗೆ ಸಾಕ್ಷಿಯಾಗಿದ *Language—An Introduction to the Study of Speech* (1921) ಎಂ ಪುಟ್ಟ ಪುಸ್ತಕವೊಂದೇ ಇವನು ಬರೆದ ಪುಸ್ತಕ. ಅವನ ಆ ಕೃತಿಯ ಪ್ರಭಾವ ಇನ್ನೂ ಬಲವಾಗಿಯೇ ಇದೆ. ಸಪೀರನ ಪ್ರಭಾವ ಮುಖ್ಯವಾಗಿ ಪಾಠ ಪ್ರವಚನಗಳ ಮೂಲಕ ಈಗ ಹೆಚ್ಚು ಕಡಮೆ ಎಲ್ಲ ಅಮೆರಿಕದ ವಿಶ್ವವಿದ್ಯಾನಿಲಯಗಳಲ್ಲೂ ಅವನ ವಿದ್ಯಾರ್ಥಿಗಳು ಪ್ರಾಧ್ಯಾಪಕರಾಗಿದ್ದಾರೆ. ವಿವರಣಾತ್ಮಕ ಭಾಷಾವಿಜ್ಞಾನವು ಗಮನಾರ್ಹವಾ ರೀತಿಯಲ್ಲಿ ವೈಜ್ಞಾನಿಕವಾಗಲು ಇವನ ಶ್ರಮವೂ ಕಾರಣ. ಯಹೂದ್ಯನಾಗಿದ್ದ ಇವನ ದೊಡ್ಡ ಮಾನವವಾದಿಯಾಗಿದ್ದ ; ಪಂಗಡಗಳ ಪರಸ್ಪರ ದ್ವೇಷವನ್ನು ತೀವ್ರವಾ ವಿರೋಧಿಸಿದ್ದ. ತನ್ನ 56ನೆಯ ವಯಸ್ಸಿನಲ್ಲಿ 1939ರಲ್ಲಿ ನಿಧನಹೊಂದಿದನು.

ಬ್ಲೂಮ್‌ಫೀಲ್ಡ್ (Leonard Bloomfield) ಇಪ್ಪತ್ತನೇ ಶತಮಾನದ ಆಧುನಿ ಭಾಷಾವಿಜ್ಞಾನದ ಮೇಲೆ ಮಹತ್ತರ ಪ್ರಭಾವವನ್ನು ಬೀರಿದ ಮತ್ತೊಬ್ಬ ವ್ಯಕ್ತಿ 1887ರಲ್ಲಿ ಈತನು ಜನಿಸಿದ. ಅವನ ಚಿಕ್ಕಪ್ಪ ಮೌರಿಸ್ ಬ್ಲೂಮ್‌ಫೀಲ್ಡನ (Maurice Bloomfield) ಸಂಸ್ಕೃತ ಪ್ರಾಧ್ಯಾಪಕನಾಗಿದ್ದ. 1906ರಲ್ಲಿ ಬ್ಲೂಮ ಫೀಲ್ಡ್ ಭಾಷಾವಿಜ್ಞಾನದಲ್ಲಿ ಕೆಲಸ ಮಾಡಬೇಕೆಂದು ತೀರ್ಮಾನಿಸಿ 1909ರಲ್ ಚಿಕಾಗೋ ವಿಶ್ವವಿದ್ಯಾನಿಲಯದಿಂದ ಡಾಕ್ಟೊರೇಟ್ ಪದವಿಯನ್ನು ಪಡೆದನು ಅಮೆರಿಕದ 'ಲಿಂಗ್ವಿಸ್ಟಿಕ್ ಸೊಸೈಟಿ' ಪ್ರತಿಷ್ಠಾಪನೆಗೆ ಶ್ರಮಿಸಿದವರಲ್ಲಿ ಈತನೂ ಒಬ್ಬ ಅದರ ಪತ್ರಿಕೆ *Language*ನಲ್ಲಿ ಪ್ರಕಟವಾದ ಲೇಖನಗಳಲ್ಲಿ ಈತನದೇ ಮೊದಲನಯದು. 1914ರಲ್ಲಿ *An Introduction to the Study of Language* ಎಂಬ ಪುಸ್ತಕವನ್ನು ಬರೆದ. ಅವನ ಆಚಾರ್ಯಕೃತಿ "*Language*" 1933ರಲ್ಲಿ ಪ್ರಕಟವಾಯಿತು. ಭಾಷಾವಿಜ್ಞಾನದ ತತ್ತ್ವಗಳನ್ನು ವಿಶ್ಲೇಷಿಸಿ ವಿವರಿಸಿರುವ ಅದಕ್ಕೆ ಸರಿಸಮನಾದ ಕೃತಿ ಇನ್ನೂ ಬಂದಿಲ್ಲ. ಇವನ ಪುಸ್ತಕವು ಅನೇಕರನ್ನು ದಿಗ್ಭ್ರಮೆಗೊಳಿಸಿತು ಅವನ ಕಾಲಕ್ಕಿಂತ ಅವನ ಕೃತಿ ಎಷ್ಟು ಮುಂದಿತ್ತೆಂದರೆ ಸಂಪ್ರದಾಯವಾದಿಗಳ ಅವನ ಕೃತಿಯ ವಿರುದ್ಧ ರೊಚ್ಚಿಗೆದ್ದರು. ಈಗ ಅದು 'Shocking book' ಅಲ್ಲ 'Standard text book'. ಅದರಲ್ಲಿ ಪ್ರತಿಪಾದಿತವಾದ ಹೊಸ ಅಂಶಗಳು ಈಗ ಎಲ್ಲ ಭಾಷಾವಿಜ್ಞಾನಿಗಳಿಗೆ ಸುಪರಿಚಿತವಾಗಿವೆ. ಅಲ್ಲಿಯವರೆಗೆ ಭಾಷಾವಿಜ್ಞಾನವು ಬೆಳೆದು ಬಂದ ರೀತಿಯನ್ನು ತೋರಿಸಿ ಮುಂದಿನ ದಾರಿಯನ್ನು ಆ ಕೃತಿ ನಿರ್ದೇಶಿಸಿತು. ಅವನ ಅಭಿಪ್ರಾಯಗಳಲ್ಲಿ ಕೆಲವನ್ನು ಈಚಿನವರು ಮಾರ್ಪಡಿಸಿದ್ದರೆ, ಹೊಸ ಅಂಶಗಳನ್ನು

ಸೇರಿಸಿದ್ದರೆ ಅದಕ್ಕೆ ಕಾರಣ ಅವನ ಹೆಗಲ ಮೇಲೆ ಅವರಿದ್ದದ್ದು. ಅವರು ತನ್ನ ಪುಸ್ತಕವನ್ನು ಸಾಮಾನ್ಯ ಓದುಗನಿಗಾಗಿ, ಭಾಷಾವಿಜ್ಞಾನವನ್ನು ಪ್ರವೇಶಿಸುವ ವಿದ್ಯಾರ್ಥಿಗಾಗಿ ಬರೆದನಂತೆ. ಅವನಿಗೆ ಅದು 'High-school text'; ಆದರೆ ಆ ಕೃತಿಯನ್ನು ಪರಿಣತರೂ ಕೂಡ ನಿಧಾನವಾಗಿ ಓದಿ ಜೀರ್ಣಿಸಿಕೊಳ್ಳಬೇಕು. ಅದರಲ್ಲಿ ಅಸ್ಪಷ್ಟತೆ ಇದೆ ಎಂದಲ್ಲ. ಅದು ಅಷ್ಟು ಎಚ್ಚರಿಕೆಯಿಂದ ಬರೆದ ಪುಸ್ತಕ. ಕೆಲವರಿಗೆ ಅದೊಂದು ಕಠಿನ ಗ್ರಂಥ ಎಂದೂ ಅನ್ನಿಸಿದೆ!

ಬ್ಲೂಮ್‌ಫೀಲ್ಡನ ಪ್ರಭಾವ ಮುಖ್ಯವಾಗಿ ಬರಹಗಳ ಮೂಲಕ. ಭಾಷಾವಿಜ್ಞಾನವನ್ನು ಯಾರಾದರೂ ಅಧ್ಯಯನ ಮಾಡಲು ಬಂದರೆ ಮುಂದೆ ಅವರಿಗೆ ಕೆಲಸ ಸಿಗುವುದಿಲ್ಲವೆಂದು ಹಿಂದಕ್ಕೆ ಕಳುಹಿಸಿಬಿಡುತ್ತಿದ್ದ. ಹೀಗಾಗಿ ಅವನಿಗೆ ವಿದ್ಯಾರ್ಥಿಗಳೇ ಇದ್ದಿಲ್ಲ. ಆದರೆ ಈ ದಿನ ಎಲ್ಲ ಭಾಷಾವಿಜ್ಞಾನಿಗಳೂ ಅವನನ್ನು ತಮ್ಮ ಗುರುವೆಂದು ಭಾವಿಸುತ್ತಾರೆ. ಅವನಿಗೆ ಪ್ರಚಾರ, ಕೀರ್ತಿ ಎರಡೂ ಬೇಕಿರಲಿಲ್ಲ. ಈಗ ಅವೆರಡೂ ಅವನಿಗೆ ದೊರೆಕಿವೆ.

ಅವನ ಜ್ಞಾಪಕಶಕ್ತಿ ಅದ್ಭುತ. ಅನೇಕ ಶಾಖೆಗಳಲ್ಲಿ ಅವನಿಗೆ ಪರಿಣತ ಪಾಂಡಿತ್ಯವಿತ್ತು. ಐತಿಹಾಸಿಕ ಮತ್ತು ತೌಲನಿಕ ಭಾಷಾವಿಜ್ಞಾನಗಳ ಜೊತೆಗೆ ವಿವರಣಾತ್ಮಕ ಭಾಷಾವಿಜ್ಞಾನದಲ್ಲೂ ಅಪಾರವಾದ ಆಸಕ್ತಿಯಿದ್ದಿತು. ಇಂಡೋ-ಯುರೋಪಿಯನ್ ಭಾಷೆಗಳ ಮೇಲೆ ಮಾತ್ರವಲ್ಲದೆ ಮಲಯೊ-ಪಾಲಿನೇಷಿಯನ್ ಭಾಷಾವರ್ಗದ ಮೇಲೂ ಕೆಲಸ ಮಾಡಿದ್ದಾನೆ. ಭಾಷಾವಿಜ್ಞಾನಕ್ಕೆ ಒಂದು ವ್ಯಾವಹಾರಿಕವಾದ ಪ್ರಯೋಜನವೂ ಉಂಟೆಂದು ನಂಬಿದ್ದ. ಪರಭಾಷೆಗಳನ್ನು ಸ್ವಲ್ಪ ಕಾಲದಲ್ಲಿ ಚೆನ್ನಾಗಿ ಕಲಿಸಲು ಭಾಷಾವಿಜ್ಞಾನವು ಸಹಾಯ ಮಾಡುತ್ತದೆ ಎಂದು ಭಾವಿಸಿದ್ದ. 1942ರಲ್ಲಿ *Outline Guide for the Practical Study of Foreign Languages* ಎಂಬ ಅವನ ಪುಸ್ತಕವು ಪ್ರಕಟವಾಯಿತು. ಡಚ್, ರಷಿಯನ್ ಭಾಷೆಗಳ ಕೈಪಿಡಿಗಳನ್ನೂ ಅವನು ಬರೆದಿದ್ದಾನೆ.

ಬ್ಲೂಮ್‌ಫೀಲ್ಡನಿಂದ ಭಾಷಾಧ್ಯಯನವು ವಿಜ್ಞಾನದ ಮಟ್ಟಕ್ಕೇರಿತು. ಅವನದು ವೈಜ್ಞಾನಿಕ ರೀತಿ—ಬರಹದಲ್ಲೂ ಅಷ್ಟೇ, ಆಲೋಚನೆಯಲ್ಲೂ ಅಷ್ಟೇ. ಆಧುನಿಕ ಭಾಷಾವಿಜ್ಞಾನವು ಅವನು ತೋರಿದ ಹಾದಿಯಲ್ಲೇ ಮುಂದುವರಿಯುತ್ತಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಪೈಕ್, ಹ್ಯಾರಿಸ್, ಹಾಕೆಟ್ ಮುಂತಾದವರೆಲ್ಲರೂ ಇವನಿಗೆ ಸಪೀರನಿಗೆ ಬೇರೆ ಬೇರೆ ವಿಧಗಳಲ್ಲಿ ಋಣಿಯಾಗಿದ್ದಾರೆ. 1946ರಲ್ಲಿ ಆತನು ನಿಧನಹೊಂದಿದನು.

ಸಪೀರ್, ಬ್ಲೂಮ್‌ಫೀಲ್ಡರಾದ ಮೇಲೆ ಅಮೆರಿಕನ್ ಭಾಷಾವಿಜ್ಞಾನವು ತ್ವರಿತಗತಿಯಲ್ಲಿ ಮುಂದುವರಿದಿದೆ; ಹೆಚ್ಚು ಕೆಲಸ ನಡೆದಿದೆ, ಹೆಚ್ಚು ಜನರು ಭಾಷಾವಿಜ್ಞಾನ ಕ್ಷೇತ್ರವನ್ನು ಪ್ರವೇಶಿಸಿದ್ದಾರೆ. ಹ್ಯಾರಿಸ್ಸನಂತಹ ಪ್ರತಿಭಾಶಾಲಿಗಳನ್ನು ಇಲ್ಲಿ ಹೆಸರಿಸಬಹುದು. ಭಾಷಾವಿಶ್ಲೇಷಣೆಯ ತಂತ್ರಗಳು ಈಗ ನಿಷ್ಕೃಷ್ಟವಾಗಿವೆ. ಅಮೆರಿಕದ ಭಾಷಾವಿಜ್ಞಾನಿಯೊಬ್ಬ ಒಂದು ಭಾಷೆಯನ್ನು ವಿಶ್ಲೇಷಿಸಿದರೆ ಮೊದಲು ಆ ಭಾಷೆಯ

ಧ್ವನಿಮಾಗಳನ್ನೂ ಉಪಧ್ವನಿಗಳನ್ನೂ ಸಂಧಿಕಾರ್ಯಗಳನ್ನೂ ಚರ್ಚಿಸುತ್ತಾನೆ. ಬಳಿಕ ಅ
ಭಾಷೆಯ ಪದಗಳ ರಚನೆ, ವಾಕ್ಯರಚನೆ (Morphology and Syntax)ಯು ಚರ್ಚೆ
ಬರುತ್ತದೆ. ಭಾಷೆಯ ಮೂಲಭೂತ ಘಟಕಗಳು, ಅವುಗಳು ಪರಸ್ಪರ ಸೇರಿ ಭಾಷೆಯ
ಕಟ್ಟಡವು ನಿರ್ಮಾಣಗೊಂಡಿರುವ ರೀತಿ—ಇವುಗಳನ್ನು ಬಿಚ್ಚಿ ತೋರುವುದು ಆಧುನಿ
ವಿವರಣಾತ್ಮಕ ಭಾಷಾವಿಜ್ಞಾನದ ಮುಖ್ಯೋದ್ದೇಶವಾಗಿದೆ.

# 13 ಭಾಷೆ ಮತ್ತು ಬರಹ

ಪ್ರಪಂಚದಲ್ಲಿ ಭಾಷೆ ಗೊತ್ತಿರದ ಜನಾಂಗಗಳು ಯಾವುವೂ ಇಲ್ಲ. ಆದರೆ ಬರಹದ[1] (Writing) ಉಪಯೋಗವನ್ನು ತಿಳಿಯದ ಹಲವು ಜನಾಂಗಗಳಿವೆ. ಒಬ್ಬ ವ್ಯಕ್ತಿ ನಾಗರಿಕನೆನ್ನಿಸಿಕೊಳ್ಳಬೇಕಾದರೆ ಓದು, ಬರಹಗಳನ್ನು ಅವನು ತಿಳಿದಿರಲೇಬೇಕಾಗಿದೆ. ಬರಹದ ಉಪಯೋಗವನ್ನು ತಿಳಿಯದೆ ಇರುವ ಜನಾಂಗಗಳು ಹಿಂದುಳಿದಿವೆ. ಹಾಗೆಯೇ ಓದು, ಬರಹಗಳನ್ನು ತಿಳಿಯದಿರುವ ವ್ಯಕ್ತಿ ಹಿಂದುಳಿದಿರಬೇಕಾಗುತ್ತದೆ; ಅವನಿಗೆ ಅಷ್ಟು ಪ್ರಮುಖವಾದ ಸ್ಥಾನವು ಸಮಾಜದಲ್ಲಿ ದೊರೆಯುವುದೂ ಇಲ್ಲ. ಓದು, ಬರಹಗಳು ನಮ್ಮ ವಿದ್ಯಾಭ್ಯಾಸ ಪದ್ಧತಿಯ ಮೂಲಭೂತ ಅಂಗಗಳಾಗಿವೆ. ಮಗು ಮಾತನಾಡುವುದನ್ನು ಚನ್ನಾಗಿ ಕಲಿಯುತ್ತಿದ್ದಂತೆಯೇ ಅದಕ್ಕೆ ಓದು, ಬರಹಗಳನ್ನು ಕಲಿಸಲು ತೊಡಗುತ್ತಾರೆ. ಮನುಷ್ಯನ ನಾಗರಿಕತೆಯ ಇತಿಹಾಸದಲ್ಲಿ ಬರಹಕ್ಕೆ ಬಹು ಪ್ರಮುಖವಾದ ಸ್ಥಾನವಿದೆ.

ವಾಸ್ತವವಾಗಿ ಬರಹವು ಬಹು ಈಚಿನದು. ಮನುಷ್ಯನು ಭಾಷೆಯ ಉಪಯೋಗವನ್ನು ಕಂಡುಕೊಂಡಾದಮೇಲೆ ಎಷ್ಟೋ ಸಹಸ್ರ ವರ್ಷಗಳ ಬಳಿಕ ಬರಹದ (Writing) ಉಪಯೋಗವನ್ನು ಕಂಡುಕೊಂಡ. ಹೀಗೆ ಭಾಷೆ ಮೊದಲು, ಬರಹ ಆಮೇಲೆ. ಬರಹವು ಭಾಷೆಯಂತೆ ಮನುಷ್ಯನಿಗೆ ಮೂಲಭೂತ ಆವಶ್ಯಕತೆ ಅಲ್ಲದಿದ್ದರೂ ಅವನ ಸಂಸ್ಕೃತಿ, ನಾಗರಿಕತೆಗಳು ವೃದ್ಧಿಗೊಳ್ಳಲು ಬಹು ಸಹಾಯವನ್ನು ಮಾಡಿದೆ.

[1] ಭಾಷೆಯ ಅಧ್ಯಯನವನ್ನು 'ಭಾಷಾವಿಜ್ಞಾನ' (Linguistics) ಎಂದು ಕರೆಯುವಂತೆ ಬರಹದ ಅಥವಾ ಲೇಖನದ ಅಧ್ಯಯನವನ್ನು ಲೇಖನಶಾಸ್ತ್ರ ಅಥವಾ ಲೇಖನವಿಜ್ಞಾನವೆಂದು (Palaeography) ಕರೆಯಬಹುದು. (Epigraphy) ಅಥವಾ ಶಾಸನಶಾಸ್ತ್ರವು ಪ್ರಾಚೀನವಾದ ಶಾಸನಗಳ ಅಧ್ಯಯನಕ್ಕೆ ಸಂಬಂಧಿಸಿದ್ದು. ಶಾಸನಗಳ ಲಿಪಿ, ಅವುಗಳನ್ನು ಓದುವ ಕ್ರಮ, ಶಾಸನಗಳ ವ್ಯಾಖ್ಯಾನ ಇವು ಶಾಸನಶಾಸ್ತ್ರಕ್ಕೆ ಸಂಬಂಧಪಟ್ಟಿವೆ. ಲೇಖನಶಾಸ್ತ್ರವು ಶಾಸನಶಾಸ್ತ್ರದ ಒಂದು ಪ್ರಮುಖ ಭಾಗವೆಂದು ಭಾವಿಸಿದರೂ ತಪ್ಪಿಲ್ಲ. ಭಾಷಾವಿಜ್ಞಾನ ಎಂಬರ್ಥದಲ್ಲಿ ಹಿಂದೆ ಕೆಲವರು 'Philology' ಎಂಬ ಮಾತನ್ನೂ ಬಳಸುತ್ತಿದ್ದರು. ಆದರೆ ವಾಸ್ತವವಾಗಿ 'Philology' ಎಂಬುದು ವಿಶಾಲವಾದ ಅರ್ಥವುಳ್ಳದು. ಅದು ಒಂದು ದೇಶದ ಸಂಸ್ಕೃತಿಯ ಅಧ್ಯಯನಕ್ಕೆ ಸಂಬಂಧಿಸಿದ್ದು; ಭಾಷಾವಿಜ್ಞಾನ, ಶಾಸನಶಾಸ್ತ್ರ ಇತ್ಯಾದಿಗಳು ಅದರ ಅಂಗಗಳು.

ಸ್ಥೂಲವಾಗಿ ಹೀಗೆ ಹೇಳಬಹುದು—ಭಾಷೆಯ ಉಪಯೋಗವನ್ನು ಕಂಡುಕೊಂಡು ಮನುಷ್ಯ ಮನುಷ್ಯನಾದನು; ಲೇಖನದ ಉಪಯೋಗವನ್ನು ಕಂಡುಕೊಂಡು ಮನುಷ್ಯ ನಾಗರಿಕನಾದನು.[1]

ಭಾಷೆ ಮತ್ತು ಬರಹಗಳಿಗಿರುವ ಸಂಬಂಧವು ಬಹು ನಿಕಟವಾದುದು. ಆದರೂ ಇವೆರಡನ್ನೂ ನಾವು ಪ್ರತ್ಯೇಕಿಸಬೇಕಾಗುತ್ತದೆ. ಭಾಷೆ ಎಂದರೆ ಆಡುವವನ ಬಾಯಿಂದ ಹೊರಟು ಕೇಳುವವನ ಶ್ರವಣೇಂದ್ರಿಯಗಳನ್ನು ಮುಟ್ಟಿ ಇವನ ಅಭಿಪ್ರಾಯಗಳನ್ನು ಅವನಿಗೆ ತಿಳಿಸತಕ್ಕ ವಸ್ತು. ಭಾಷಾವಿಜ್ಞಾನಿ ನಿಜವಾಗಿ ಆಸಕ್ತಿಯನ್ನು ತೋರಿಸುವುದು ಇದರಲ್ಲಿ. ಬರಹವು ಭಾಷೆಯ ಛಾಯಾನುವರ್ತಿ; ಭಾಷೆಯನ್ನು ಹಿಡಿದಿಡುವ ಸಾಧನಗಳಲ್ಲಿ ಒಂದು ಮತ್ತು ಅವುಗಳಲ್ಲಿ ಅತ್ಯಂತ ಪ್ರಮುಖವಾದುದು. ಆದರೆ ಬರಹವು ಭಾಷೆಯನ್ನು ಯಥಾವತ್ತಾಗಿ, ಕ್ರಮವರಿತಂತೆ ಅದು ಇರುವಂತೆಯೇ ಹಿಡಿದಿಡುತ್ತದೆ ಎಂದು ಭಾವಿಸಿದರೆ ತಪ್ಪಾಗುತ್ತದೆ. ನಾವು ಮಾತನಾಡುವಂತೆಯೇ ಯಾವ ಲಿಪಿಯಲ್ಲಿ ತಾನೇ ಬರೆಯಲು ಸಾಧ್ಯ? ಎಷ್ಟೇ ನಿಷ್ಕೃಷ್ಟವಾದ ಲಿಪಿಯನ್ನು ಬಳಸಿದರೂ ಮಾತಿಗೂ ಬರಹಕ್ಕೂ ಅಂತರವು ಉಳಿದೇ ಉಳಿಯುತ್ತದೆ. ಅಲ್ಲದೆ ಎಷ್ಟೋ ಕಡೆಗಳಲ್ಲಿ ಮಾತಿನಲ್ಲಿ ತೋರಿಸಲಾಗದ ಅರ್ಥಭೇದವನ್ನು ಬರಹದಲ್ಲಿ ತೋರಿಸಲು ಸಾಧ್ಯವಾಗುತ್ತದೆ. ಉದಾ : [see] ಮತ್ತು [sea]; [wood] ಮತ್ತು [would]—ಇಲ್ಲಿ ಭಾಷೆ ಮಾಡದ ಕೆಲಸವನ್ನು ಬರಹವು ಮಾಡಿದೆ. ಬರಹದ ಎಷ್ಟೋ ಚಿಹ್ನೆಗಳಿಗೆ ಭಾಷೆಯಲ್ಲಿ ಸಂವಾದಿಯಾದ ಪದಗಳಿರುವುದಿಲ್ಲ. ಕೆಲವು ಕಡೆಗಳಲ್ಲಿ ಬರಹಕ್ಕೂ ಉಚ್ಚಾರಕ್ಕೂ ಸರಿಯಾದ ತಾಳೆ ಇರದಿರಬಹುದು. ಭಾಷೆಗಳು ವ್ಯತ್ಯಾಸಗೊಳ್ಳುತ್ತವೆ ಎಂಬುದನ್ನು ಹಿಂದೆ ಆಗಲೇ ನೋಡಿದ್ದೇವೆ. ಭಾಷೆ ವ್ಯತ್ಯಾಸಗೊಂಡರೂ ಬರಹವು ಮಾತ್ರ ವ್ಯತ್ಯಾಸಗೊಳ್ಳದೇ ಉಳಿಯಬಹುದು. ಬರಹದಲ್ಲಿ ಸಂಪ್ರದಾಯಪ್ರಿಯತೆ ಹೆಚ್ಚು. ಒಂದು ಪದದ ಉಚ್ಚಾರಣೆ ಸಂಪೂರ್ಣವಾಗಿ ವ್ಯತ್ಯಾಸವಾಗಿರಬಹುದು; ಆದರೆ ಅದನ್ನು ಹಿಂದಿನ ರೀತಿಯಲ್ಲೇ ಬರೆದು ಈಗಿನ ಹೊಸ ರೀತಿಯಲ್ಲಿ ಉಚ್ಚರಿಸಬಹುದು. ಇಂಗ್ಲಿಷ್ ಭಾಷೆಯ ಎಷ್ಟೋ ಪದಗಳಲ್ಲಿ ಉಚ್ಚಾರಣೆಗೂ ಬರಹಕ್ಕೂ ಇರುವ ಅಂತರಕ್ಕೆ ಕಾರಣ ಇದೇ. ಕನ್ನಡದ ಇತಿಹಾಸದಲ್ಲಿ ಒಂದು ಕಾಲಕ್ಕೆ [ಱ] ದ ಉಚ್ಚಾರಣೆಯು ನಿಂತು ಹೋದ ಮೇಲೂ ಅದನ್ನು ಎಷ್ಟೋ ಕಾಲ ಬರವಣಿಗೆಯಲ್ಲಿ ಬಳಸುತ್ತಿದ್ದರು. ಆದ್ದರಿಂದ ಭಾಷೆಯಿದ್ದಂತೆಯೇ ಬರಹವಿರುತ್ತದೆ, ಭಾಷೆಯನ್ನು ಬರಹವು ಸೇವಕನಂತೆ ಅನುಸರಿಸುತ್ತದೆ ಎಂಬ ಮಾತನ್ನು ಎಚ್ಚರಿಕೆಯಿಂದ ತೆಗೆದುಕೊಳ್ಳಬೇಕಾಗುತ್ತದೆ. (ಆದರೆ ಬರಹದ ಇತಿಹಾಸದ ಆರಂಭದ ದೆಸೆಯಲ್ಲಿ ಬರಹಕ್ಕೂ ಭಾಷೆಗೂ ಸಂಬಂಧವೇ ಇದ್ದಿಲ್ಲವೆಂದೂ ಆ ಸಂಬಂಧವು ಪ್ರಾಪ್ತವಾದುದು ಈಚೆಗೆ ಎಂಬುದನ್ನೂ ನಾವು ನೆನಪಿಡಬೇಕು. ಮುಂದೆ ನೋಡಿ).

[1] "As language distinguishes man from animal, so writing distinguishes civilized man from barbarian."—GELB

ಬರಹವು ಅಭಿಪ್ರಾಯಗಳನ್ನು ಇತರರಿಗೆ ತಿಳಿಸುವ ಸಾಧನಗಳಲ್ಲಿ ಒಂದು. ಸಿಳ್ಳು, ಚಪ್ಪಾಳೆ, ಭಾಷೆ ಮುಂತಾದುವು ಕಿವಿಗೆ ಸಂಬಂಧಿಸಿದುವು. ಸಂಜ್ಞೆ, ಕಣ್ಣಿನ ಸನ್ನೆಗಳು, ವಸ್ತುಗಳು, ವಸ್ತುಗಳ ಮೇಲಿನ ಗುರುತುಗಳು, ಚಿತ್ರಗಳು, ಬರಹ ಇವು ಕಣ್ಣಿಗೆ ಸಂಬಂಧಿಸಿದುವು. ವಸ್ತುಗಳ ಮೂಲಕ, ಚಿತ್ರಗಳ ಮೂಲಕ, ಅಭಿಪ್ರಾಯಗಳನ್ನು ಇತರರಿಗೆ ತಿಳಿಸುವ ಕೆಲವು ವಿಧಾನಗಳು ಬಹು ಸ್ವಾರಸ್ಯವಾಗಿವೆ. ಬರಹವನ್ನರಿಯದಿದ್ದ ಒಬ್ಬ ಹುಡುಗಿ ತಾನು ಪ್ರೀತಿಸಿದ ಒಬ್ಬ ಹುಡುಗನಿಗೆ ಒಂದು 'ಪ್ರೇಮಪತ್ರ'ವನ್ನು ಕಳುಹಿಸಿದಳು. ಆ ಪ್ರೇಮಪತ್ರವೆಂದರೆ ಒಂದು ಪುಟ್ಟ ಚೀಲ. ಅದರಲ್ಲಿ ಟೀಸೊಪ್ಪು, ಒಂದು ಹುಲ್ಲುಕಡ್ಡಿ, ಒಂದು ಕೆಂಪನೆಯ ಹಣ್ಣು, ಒಂದು ಇದ್ದಿಲಿನ ತುಂಡು, ಒಂದು ಹೂವು, ಒಂದು ಸಕ್ಕರೆ ಅಚ್ಚು, ಒಂದು ಹದ್ದಿನ ಗರಿ, ಒಂದು ಹಣ್ಣಿನ ಬೀಜ—ಇಷ್ಟು ವಸ್ತುಗಳಿದ್ದುವು. ಇವು ಅವಳ ಸಂದೇಶವನ್ನು ಆ ಹುಡುಗನಿಗೆ ತಲಪಿಸಿದುವು.

ಟೀಸೊಪ್ಪು—'ನೀನಿಲ್ಲದೆ ನನಗೆ ಟೀ ಸೇರುತ್ತಿಲ್ಲ.'

ಹುಲ್ಲುಕಡ್ಡಿ—'ನೀನಿಲ್ಲದೆ ತೆಳ್ಳಗೆ ಕಡ್ಡಿಯಾಗಿದ್ದೇನೆ.'

ಕೆಂಪು ಹಣ್ಣು—'ನಿನ್ನನ್ನು ನೆನೆದಾಗ ಕೆಂಪೇರುತ್ತೇನೆ.'

ಒಣಗಿದ ಹಣ್ಣು—'ನಾನು ಒಣಗಿ ಹೋಗಿದ್ದೇನೆ.'

ಇದ್ದಿಲ ತುಂಡು—'ಪ್ರೇಮದಿಂದ ನನ್ನ ಹೃದಯ ಉರಿಯುತ್ತಿದೆ.'

ಹೂ—'ನೀನು ಚೆಲುವ.'

ಸಕ್ಕರೆ ಅಚ್ಚು—'ನೀನು ಅಷ್ಟು ಸವಿ.'

ಕಲ್ಲು—'ನಿನ್ನ ಹೃದಯವನ್ನು ಕಲ್ಲಿನಿಂದ ಮಾಡಿದೆಯೇ ?'

ಹದ್ದಿನ ಗರಿ—'ನನಗೆ ರೆಕ್ಕೆಯಿದ್ದಿದ್ದರೆ !'

ಹಣ್ಣಿನ ಬೀಜ—'ನನ್ನನ್ನು ನಿನಗೆ ಅರ್ಪಿಸಿಕೊಂಡಿದ್ದೇನೆ.'

ಎಂತಹ ಧ್ವನಿಪೂರ್ಣವಾದ ಪ್ರೇಮ ಪತ್ರ !

ಅಮೆರಿಕದ ರೆಡ್ ಇಂಡಿಯನ್ ವರ್ಗಕ್ಕೆ ಸೇರಿದ ಕೆಲವು ಗುಂಪುಗಳು ಒಟ್ಟಾಗಿ ಸೇರಿ ಅಮೆರಿಕದ ಅಧ್ಯಕ್ಷರಿಗೆ ಒಂದು ಪತ್ರವನ್ನು ಕಳುಹಿಸಿದರು. ಆ ಪತ್ರದಲ್ಲಿದ್ದುದು ಬರಿಯ ಚಿತ್ರ. ಚಿತ್ರದ ಎಡಭಾಗದಲ್ಲಿ ಐದು ಹಕ್ಕಿಗಳಿವೆ, ಒಂದು ಮೀನಿನ ಚಿತ್ರವಿದೆ, ಒಬ್ಬ ಮನುಷ್ಯನ ಚಿತ್ರವಿದೆ. ಇವು ಬೇರೆ ಬೇರೆ ಗುಂಪುಗಳ ಲಾಂಛನಗಳು. ಇವುಗಳಲ್ಲಿ ಮುಂದೆ ಇರುವ ಹಕ್ಕಿಯ ತಲೆಯ ಮೇಲೆ ಎರಡು ಗೆರೆಗಳಿವೆ; ಇದು ಆ ಗುಂಪುಗಳಲ್ಲಿ ಪ್ರಮುಖವಾದ ಗುಂಪನ್ನು ಸೂಚಿಸುತ್ತದೆ. ಇವುಗಳ ಕಣ್ಣುಗಳನ್ನು ಒಂದು ಗೆರೆಯು ಒಟ್ಟಿಗೆ ಸೇರಿಸಿದೆ; ಮತ್ತು ಆ ಗೆರೆಯು ಮುಂದುವರಿದು ಬಲಗಡೆ ಇರುವ ಬಿಳಿಯ ಮನೆಯಲ್ಲಿರುವ ಬಿಳಿಯ ಮನುಷ್ಯನ ಕಣ್ಣನ್ನು ಮುಟ್ಟಿದೆ. ಇದರ ಅರ್ಥ ಬೇರೆ ಬೇರೆ ಗುಂಪಿನ ನಾವುಗಳು ಏಕಾಭಿಪ್ರಾಯವುಳ್ಳವರಾಗಿ ಅಮೆರಿಕದ ಅಧ್ಯಕ್ಷರ ಸ್ನೇಹವನ್ನು ಬಯಸುತ್ತಿದ್ದೇವೆ ಎಂದು. ಇಂತಹ ಇನ್ನು ಹಲವು ನಿದರ್ಶನಗಳನ್ನು ಕೊಡಬಹುದು. ಈ ವಿಧಾನಗಳ ಇತಿಮಿತಿಗಳನ್ನು ಕುರಿತು ಹೆಚ್ಚಿಗೆ ಪ್ರಸ್ತಾಪಿಸಬೇಕಾಗಿಲ್ಲ. ಇವುಗಳಿಗೂ

ಭಾಷೆಯು ಪದಗಳಿಗೂ ನೇರ ಸಂಬಂಧವಿಲ್ಲ. ಬರಹವಾದರೋ ಭಾಷೆಯ ಪದಗಳೊಡ ತೀರಾ ನಿಕಟವಾದ ಸಂಪರ್ಕವನ್ನು ಹೊಂದಿರುವ ವ್ಯವಸ್ಥೆ; ಹೆಚ್ಚು ಖಚಿತವಾ ನಿರ್ದಿಷ್ಟವಾಗಿ ಅಭಿಪ್ರಾಯಗಳನ್ನು ತಿಳಿಸುವ, ಬೇರೆಡೆಗೆ ಕಳುಹಿಸುವ ಶ್ರೇಷ್ಠ ವ್ಯವಸ್ಥೆ

## ಲಿಪಿಯ ಉಗಮ ಮತ್ತು ವಿಕಾಸ

'ವರ್ಣಮಾಲೆ' (Alphabet) ಎಂಬ ಮಾತನ್ನು ವಿಶಿಷ್ಟವಾದ ಅರ್ಥದ ಬಳಸುತ್ತಾರೆ. ಒಂದು ಧ್ವನಿಗೆ ಪ್ರತ್ಯೇಕವಾದ ಒಂದು ಚಿಹ್ನೆಯಂತೆ ಸುಮಾರ ಮೂವತ್ತರಿಂದ ಐವತ್ತು ಚಿಹ್ನೆಗಳ ಸಹಾಯದಿಂದ ಒಂದು ಭಾಷೆಯ ಸಾವಿರಾರು ಪ ಗಳನ್ನು ಬರೆಯಬಹುದು. ಈ ಚಿಹ್ನೆಗಳನ್ನೇ 'ವರ್ಣಮಾಲೆ' ಎಂದು ಕರೆಯುವುದ ಕನ್ನಡದ ವರ್ಣಮಾಲೆಯಲ್ಲಿರುವ ಐವತ್ತು ಅಕ್ಷರಗಳ ಸಹಾಯದಿಂದ ಕನ್ನಡ ಭಾಷೆಯ ಅನೇಕ ಸಾವಿರ ಪದಗಳನ್ನು ಬರೆಯಲು ಸಾಧ್ಯವಾಗಿದೆ. ಈ ವರ್ಣಮಾಲೆಯ ಸಾಧನ ಇಷ್ಟು ಸೌಲಭ್ಯವುಳ್ಳದ್ದು. ಮಗು ಈ ಅಕ್ಷರಗಳನ್ನೂ ಇನ್ನು ಕೆಲವು ಚಿಹ್ನೆಗಳನ ಕಲಿತುಕೊಂಡರೆ ಸಾಕು.

ಆದರೆ ಲಿಪಿಯು ಆರಂಭದಿಂದಲೂ ಹೀಗೇ ಇರಲಿಲ್ಲ. ಅದು ಅನೇಕ ಮಾರ್ಪಾಟ ಗಳ, ವಿಕಾಸಗಳ ಫಲವಾಗಿದೆ. ಕಣ್ಣಿಗೆ ಕಾಣುವ, ಸಂಪ್ರದಾಯ ಒಪ್ಪಿಕೊಂಡಿರು ಕೆಲವು ಚಿಹ್ನೆಗಳ ಮೂಲಕ ಭಾಷೆಯ ಅಂಶಗಳನ್ನು ನಿರೂಪಿಸುವ ಸಾಧನವೇ ಬರ ಎಂದು ನಾವಿಟ್ಟುಕೊಂಡರೆ ಅದು ಐದು ಸಾವಿರ ವರ್ಷದಷ್ಟು ಹಳೆಯದಲ್ಲ. ಆದ ಅದರ ಇತಿಹಾಸ ಇನ್ನೂ ಹಿಂದಕ್ಕೆ ಹೋಗುತ್ತದೆ.

ನೂರಾರು ಸಾವಿರಾರು ವರ್ಷಗಳ ಹಿಂದೆ ಪ್ರಾಚೀನ ಮಾನವ ಬರೆದ, ಕೊರೆ ಚಿತ್ರಗಳು ಗುಹೆಗಳ ಗೋಡೆಗಳ ಮೇಲೆ, ಬಂಡೆಗಳ ಮೇಲೆ ನಮಗೆ ದೊರಕಿವೆ. ಇ ಬಹುಮಟ್ಟಿಗೆ ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳು. ಇಂತಹ ಚಿತ್ರಗಳು ಉತ್ತ ಅಮೆರಿಕದ ಬೆಟ್ಟಗುಡ್ಡಗಳಲ್ಲಿ, ದಕ್ಷಿಣ ಆಫ್ರಿಕದಲ್ಲಿ, ಯೂರೋಪಿನಲ್ಲಿ, ಪ್ರಪಂಚ ಇತರ ಅನೇಕ ಭಾಗಗಳಲ್ಲಿ ಸಿಕ್ಕಿವೆ. ಈ ಚಿತ್ರಗಳಲ್ಲಿ ಹಲವನ್ನು ಕೇವಲ ಚಿತ್ರಗಳನ ಬರೆಯಬೇಕೆಂಬ ಕಲಾಭಿರುಚಿಯಿಂದ ಪ್ರಚೋದಿತವಾಗಿ ಬರೆದಿರಬಹುದು. ಇನ್ನು ಕೆ ವನ್ನು ಅಭಿಪ್ರಾಯಗಳನ್ನು ತಿಳಿಸಲೋ ಅಥವಾ ನಡೆದ ಘಟನೆಯೊಂದನ್ನು ಬಹುಕಾ ವಿರುವಂತೆ ಹಿಡಿದಿಟ್ಟಿರಲೋ ಬರೆದಿರಬಹುದು. ಹೀಗೆ ಕೇವಲ ಚಿತ್ರಗಳ ಮೂಲ ಅಭಿಪ್ರಾಯಗಳನ್ನು ನಿರೂಪಿಸುವ ಘಟ್ಟವೇ ಬರಹದ ಇತಿಹಾಸದಲ್ಲಿ ಮೊದಲನೆಯ ಘಟ್ಟ. ಇದನ್ನು **ಚಿತ್ರಲೇಖನ** (Pictography or Picture-writing) ಎಂದ ಕರೆಯಬಹುದು. ಒಂದು ವೃತ್ತವು ಸೂರ್ಯನನ್ನು ಸೂಚಿಸಬಹುದು; ಮನುಷ್ಯ ಚಿತ್ರವು ಮನುಷ್ಯನನ್ನು, ಮರದ ಚಿತ್ರವು ಮರವನ್ನು ಸೂಚಿಸಬಹುದು. ಇಂತ ಹಲವು ಚಿತ್ರಗಳನ್ನು ಒಂದು ಕ್ರಮದಲ್ಲಿ ಬರೆದು ಅಭಿಪ್ರಾಯಗಳನ್ನು ಸೂಚಿ ಬಹುದು. ಇಲ್ಲಿ ಚಿತ್ರಕ್ಕೂ ವಸ್ತುವಿಗೂ ನೇರವಾದ ಸಂಬಂಧವಿದೆ. ಭಾಷೆಗ

ಚಿತ್ರಕ್ಕೂ ಸಂಬಂಧವೇ ಇಲ್ಲ. ಇಂತಹ ಚಿತ್ರಲೇಖನಗಳು ಅತ್ಯಂತ ಪ್ರಾಚೀನಕಾಲದ ಈಜಿಪ್ಟ್, ಮೆಸೊಪೊಟೇಮಿಯ, ಸ್ಪೈಯಿನ್, ದಕ್ಷಿಣ ಫ್ರಾನ್ಸ್ ಇತ್ಯಾದಿ ದೇಶಗಳಲ್ಲಿ ಸಿಕ್ಕಿವೆ ; ಆಧುನಿಕ ಕಾಲದಲ್ಲಿ ದಕ್ಷಿಣ ಆಫ್ರಿಕದ, ಉತ್ತರ ಅಮೆರಿಕದ, ಆಸ್ಟ್ರೇಲಿಯದ ಕೆಲವು ಜನಾಂಗಗಳೂ ಚಿತ್ರಲೇಖನಗಳನ್ನು ಬರೆದಿದ್ದಾರೆ. ಚಿತ್ರಲೇಖನವು ಕೇವಲ ಚಿತ್ರವಲ್ಲ. ಇಲ್ಲಿ ಚಿತ್ರಕ್ಕಿಂತ ಹೆಚ್ಚಾಗಿ ಅಭಿಪ್ರಾಯಗಳ ನಿವೇದನೆ ಮುಖ್ಯವಾದುದು.

ಇತಿಹಾಸಪೂರ್ವ ಕಾಲದ ಈಜಿಪ್ಟ್ ಮತ್ತು ಪ್ರಾಚೀನ ಗ್ರೀಸ್ ದೇಶಗಳಲ್ಲಿ ಬರಹ (Writing) ಮತ್ತು ಚಿತ್ರಣಗಳೆರಡೂ (Drawing) ಒಂದೇ ಆಗಿದ್ದುವು. ಈಜಿಪ್ಷಿಯನ್ ಭಾಷೆಯ s-sh ಮತ್ತು ಗ್ರೀಕಿನ graphein ಎಂಬ ಪದಗಳಿಗೆ ಎರಡು ಅರ್ಥಗಳೂ ಇವೆ. ಸಂಸ್ಕೃತದಲ್ಲೂ 'ಲಿಖ್' ಎಂದರೆ ಕೊರೆ, ಚಿತ್ರವನ್ನು ಬರೆ, ಬರೆ ಎಂಬ ಅರ್ಥಗಳಿವೆ. ದ್ರಾವಿಡಭಾಷೆಗಳಲ್ಲೂ 'ವರೈ' (ಬರೆ) ಧಾತುವಿಗೆ ಇದೇ ಅರ್ಥಗಳಿವೆ.

ಚಿತ್ರಲೇಖನದ ಮುಂದಿನ ವಿಕಾಸ **ಭಾವಲೇಖನ** (Ideographic writing.) ಇಲ್ಲಿ ಚಿತ್ರಗಳು ವಸ್ತುಗಳನ್ನು ಸೂಚಿಸುವುದಕ್ಕಿಂತ ಹೆಚ್ಚಾಗಿ ಆ ವಸ್ತುಗಳಿಗೆ ಸಂಬಂಧಿಸಿದ ಅಥವಾ ಆ ವಸ್ತುಗಳಿಂದ ಸೂಚಿತವಾಗುವ ಭಾವಗಳನ್ನು ಸೂಚಿಸುತ್ತವೆ. ಉದಾಹರಣೆಗೆ ಒಂದು ವೃತ್ತವು ಸೂರ್ಯನನ್ನು ಮಾತ್ರವೇ ಅಲ್ಲದೆ ಬೆಳಕು, ಸೂರ್ಯದೇವತೆ ಅಥವಾ ದಿನವನ್ನು ಸೂಚಿಸಬಹುದು. 'ಹೋಗು' ಎಂಬ ಭಾವವನ್ನು ಕಾಲುಗಳನ್ನು ಸೂಚಿಸುವ ಎರಡು ರೇಖೆಗಳಿಂದ ಸೂಚಿಸಬಹುದು. ಪಶ್ಚಿಮ ಆಫ್ರಿಕದ ಜನರ ಚಿತ್ರಗಳಲ್ಲಿ ಒಂದು ಸೂಜಿ, ಒಂದು ಬಟ್ಟೆಯ ತುಂಡುಗಳ ಚಿತ್ರವು "ಸೂಜಿಯು ಬಟ್ಟೆಯನ್ನು ಹೊಲಿಯುತ್ತದೆ" ಎಂಬುದನ್ನು ಸೂಚಿಸುವುದು ಮಾತ್ರವಲ್ಲದೆ "ಸಣ್ಣ ವಸ್ತುಗಳಿಂದ ದೊಡ್ಡ ಕಾರ್ಯಗಳಾಗುತ್ತವೆ" ಎಂಬ ಗಾದೆಯನ್ನೂ ಸೂಚಿಸಬಹುದು. ಕ್ಯಾಲಿಫೋರ್ನಿಯದ ಬಂಡೆಯ ಚಿತ್ರಗಳಲ್ಲಿ ಕಣ್ಣಿಂದ ತೊಟ್ಟಿಕ್ಕುತ್ತಿರುವ ನೀರಿನ ಚಿತ್ರವು ದುಃಖದ ಸಂಕೇತವಾಗಿ ಬಂದಿರುವುದನ್ನು ನೋಡಬಹುದು. ಚೀನಾದ ಬರಹಗಳಲ್ಲೂ ಭಾವಲಿಪಿಗಳನ್ನು ಗುರುತಿಸಬಹುದು. ಹಿಂದೆ ವಿವರಿಸಿದ ಒಂದು ಚಿತ್ರವು (ಅಮೆರಿಕದ ಅಧ್ಯಕ್ಷರಿಗೆ ಬರೆದ ಚಿತ್ರರೂಪವಾದ ಪತ್ರ) ಭಾವಲೇಖನಕ್ಕೆ ಉತ್ತಮ ಉದಾಹರಣೆ.

ಭಾವಲೇಖನವು ಚಿತ್ರಲೇಖನದ ಮುಂದಿನ ಹೆಜ್ಜೆಯಾದರೂ ಇಲ್ಲಿಯೂ ಕೂಡ ಚಿತ್ರಗಳಿಗೂ ಅವು ಸೂಚಿಸುವ ವಸ್ತುಗಳಿಗೂ ಅಥವಾ ಭಾವಗಳಿಗೂ ಆ ಭಾಷೆಯಲ್ಲಿ ಇರುವ ಪದಗಳಿಗೂ ಸಂಬಂಧವು ಕಲ್ಪನೆಯಾಗಿಲ್ಲ. ಈ ಚಿತ್ರಗಳನ್ನು ಯಾರು ಬೇಕಾದರೂ ಗುರುತಿಸಬಹುದು.

ಚಿತ್ರಗಳು ಕ್ರಮೇಣ ಸಂಪ್ರದಾಯಬದ್ಧವಾದುವು, ಅನೇಕ ಮಾರ್ಪಾಟುಗಳನ್ನು ಪಡೆದುವು. ಇದೂ ಸಹಜವೇ.

ಲಿಪಿಯ ಇತಿಹಾಸದಲ್ಲಿ ಮುಂದಿನದು ಅತ್ಯಂತ ಪ್ರಮುಖವಾದ ಹೆಜ್ಜೆ. ಇಲ್ಲಿ ಚಿಹ್ನೆಗಳಿಗೂ ವಸ್ತುಗಳಿಗೂ ಇದ್ದ ನೇರ ಸಂಪರ್ಕವು ಕಡಿದುಹೋಗಿ ಚಿಹ್ನೆಗಳಿಗೂ ವಸ್ತುಗಳಿಗೆ ಭಾಷೆಯಲ್ಲಿದ್ದ ಹೆಸರುಗಳಿಗೂ ಅಥವಾ 'ಪದ'ಗಳಿಗೂ ನೇರ ಸಂಬಂಧವು

ಸ್ಥಾಪಿತವಾಯಿತು. ಇದನ್ನು **ಧ್ವನಿಲೇಖನ** (Phonetic writing) ಎಂದು ಕರೆಯಬಹುದು. ಮುಖದ ಚಿತ್ರವು ನೇರವಾಗಿ ಮುಖವನ್ನು ಸೂಚಿಸುವುದರ ಬದಲು ಮುಖಕ್ಕೆ ಭಾಷೆಯಲ್ಲಿದ್ದ ಪದದ ಸಂಕೇತವಾಗಿ ಪರಿಣಮಿಸಿತು. ಇಲ್ಲಿ 'Rebus writing' ಎಂಬ ಒಗಟಿನ ರೂಪದ ಬರಹವನ್ನು ನೆನೆಯಬಹುದು. ಇದರಲ್ಲಿ ಒಂದು ಚಿತ್ರವು ಆ ವಸ್ತುವನ್ನು ಸೂಚಿಸುವುದಿಲ್ಲ, ಆ ವಸ್ತುವಿಗೆ ಭಾಷೆಯಲ್ಲಿರುವ ಪದವನ್ನು ಸೂಚಿಸುತ್ತದೆ. ಉದಾಹರಣೆಗೆ 'I saw' ಎಂಬುದನ್ನು ಕಣ್ಣಿನ ಚಿತ್ರ + ಗರಗಸದ ಚಿತ್ರದ ಮೂಲಕ ಬರೆಯಬಹುದು. 'mandate' ಎಂಬುದನ್ನು ಮನುಷ್ಯನ ಚಿತ್ರ + ಡೇಟ್ ಅಥವಾ ಖರ್ಜೂರದ ಮರದ ಚಿತ್ರದ ಮೂಲಕ ಬರೆಯಬಹುದು. ಈ ಚಮತ್ಕಾರದ ಬರವಣಿಗೆಯಲ್ಲಿ ಚಿತ್ರಕ್ಕೂ ವಸ್ತುವಿಗೂ ಸಂಬಂಧವೇ ಇಲ್ಲ; ಚಿತ್ರಕ್ಕೂ ವಸ್ತುವಿಗೆ ಇರುವ ಹೆಸರಿಗೂ ಸಂಬಂಧವುಂಟು. ಇಂತಹ ಒಂದು ಕಾರ್ಯವು ಬರಹದ ಇತಿಹಾಸದಲ್ಲಿ ನಡೆಯಿತು. ಚಿತ್ರಗಳು ಧ್ವನಿಗಳನ್ನು ಸೂಚಿಸಲಾರಂಭವಾದುವು. ಒಂದೊಂದು ಚಿತ್ರವೂ ವಸ್ತುವಿನ ಪದಕ್ಕೆ ಸಂಕೇತವಾಗಿ ಪರಿಣಮಿಸಿತು. ಈಗಿನ ಚೈನೀಸ್ ಲೇಖನದಲ್ಲಿ ಈ ಘಟ್ಟದ ಕುರುಹುಗಳನ್ನು ನೋಡಬಹುದು. ನಮ್ಮಲ್ಲಿರುವಂತೆ ಇಲ್ಲಿ ಒಂದೊಂದು ಧ್ವನಿಗೂ ಒಂದೊಂದು ಚಿಹ್ನೆಯಿಲ್ಲ. ಒಂದೊಂದು ಪದಕ್ಕೂ (ನ್ಯಾಯವಾಗಿ ಒಂದೊಂದು ಆಕೃತಿಮಕ್ಕೂ) ಒಂದೊಂದು ಪ್ರತ್ಯೇಕ ಚಿಹ್ನೆಯುಂಟು. ಚೈನೀಸ್ ಭಾಷೆಯನ್ನು ತಕ್ಕ ಮಟ್ಟಿಗೆ ಕಲಿಯಬೇಕಾದರೆ ಸುಮಾರು ಒಂಬತ್ತು ಸಾವಿರ ಚಿಹ್ನೆಗಳನ್ನಾದರೂ ಕಲಿಯಬೇಕು; ವಿದ್ವಾಂಸನೆನ್ನಿಸಿಕೊಳ್ಳಬೇಕಾದರೆ ಇಪ್ಪತ್ತು ಸಾವಿರದ ಮೇಲೆ ಚಿಹ್ನೆಗಳನ್ನು ಕಲಿಯಬೇಕು. 'ಮರ' ಎಂಬ ಅರ್ಥದ ಪದಕ್ಕೆ ಒಂದು ಚಿಹ್ನೆ; ಆ ಚಿಹ್ನೆಯನ್ನು ಎರಡು ಸಾರಿ ಬರೆದರೆ ಕಾಡು ಎಂದಾಗುತ್ತದೆ. ಸ್ತ್ರೀ ಎಂಬರ್ಥದ ಪದಕ್ಕೆ ಒಂದು ಚಿಹ್ನೆ; ಅದನ್ನೇ ಎರಡು ಸಾರಿ ಬರೆದರೆ ಜಗಳ ("wān") ಎಂದಾಗುತ್ತದೆ. ಬಾಯಿ ಮತ್ತು ಹಕ್ಕಿ ಎಂಬ ಪದಗಳಿಗಿರುವ ಚಿಹ್ನೆಗಳನ್ನು ಬರೆದರೆ 'ಹಾಡು' ಎಂದಾಗುತ್ತದೆ. ಒಂದೊಂದು ಪದಕ್ಕೂ ಒಂದೊಂದು ಚಿಹ್ನೆಯಿರುವ ಬರವಣಿಗೆಯನ್ನು **ಪದಲೇಖನ** (Logography or Word-writing) ಎನ್ನಬಹುದು. ಚೈನೀಸ್ ಬರಹದ ಚಿಹ್ನೆಗಳಲ್ಲಿ ಕೆಲವು ಚಿತ್ರಗಳನ್ನು ಸುಲಭವಾಗಿ ಗುರುತಿಸಬಹುದು.



ಈ ಚಿಹ್ನೆಯು ಮರ ಎಂಬರ್ಥದ ಪದವನ್ನು ("mu") ಸೂಚಿಸುತ್ತದೆ. ಕುದುರೆ ಎಂಬರ್ಥದ [ma] ಎಂಬ ಪದದ ಚಿಹ್ನೆಯು ಕುದುರೆಯನ್ನು ಹೋಲುತ್ತದೆ.

ಪದಲೇಖನ ವಿಧಾನವು, ಮೇಲೆ ಸೂಚಿಸಿದಂತೆ, ಬಹು ಶ್ರಮದಾಯಕವಾದುದು. ಅದು ಇನ್ನೂ ಸರಳಗೊಂಡು ಲಿಪಿಗೆ ದಾರಿಯನ್ನು ಮಾಡಿಕೊಟ್ಟಿತು. ಪದಲೇಖನದ ಮುಂದಿನ ಹೆಜ್ಜೆಯನ್ನು **ಅಕ್ಷರ ಲೇಖನ**ವೆಂದು (Syllabary or Syllabic writing) ಕರೆಯಬಹುದು. [ಅಕ್ಷರವೆಂದರೆ ಒಂದು ಸ್ವರ, ಅಥವಾ ವ್ಯಂಜನ(ಗಳ) ಸಮೇತವಾದ ಒಂದು ಸ್ವರ.] ಈ ಘಟ್ಟದಲ್ಲಿ ಒಂದು ಚಿಹ್ನೆಯು ಒಂದು ಸ್ವರಕ್ಕೆ

ಅಥವಾ ವ್ಯಂಜನ(ಗಳ) ಸಮೇತವಾದ ಒಂದು ಸ್ವರಕ್ಕೆ ಸಂಕೇತವಾಗಿ ಪರಿಣಮಿಸಿತು. ಇದನ್ನು ಒಂದು ಕಾಲ್ಪನಿಕ ನಿದರ್ಶನದಿಂದ ಸ್ಪಷ್ಟಗೊಳಿಸಬಹುದು. ಇಂಗ್ಲಿಷಿನಲ್ಲಿ [bee] ಎಂಬ ಅರ್ಥದಲ್ಲಿ ಒಂದು ದುಂಬಿಯ ಚಿತ್ರವನ್ನು ಬರೆಯುತ್ತೇವೆಂದು ಭಾವಿಸೋಣ. ಆ ಚಿತ್ರವು ಮೊದಲು [bee] ಎಂಬ ಪದವನ್ನು ಸೂಚಿಸುತ್ತಿದ್ದು, ಕ್ರಮೇಣ [bi] ಎಂಬ ಅಕ್ಷರಕ್ಕೆ ಸಂಕೇತವಾಗಿ ಪರಿಣಮಿಸಿದಾಗ, ಅದೇ ಚಿತ್ರವನ್ನು [be] ಎಂಬ ಪದಕ್ಕೂ ಸಂಕೇತವಾಗಿ ಬಳಸಬಹುದಲ್ಲವೇ ? [bi] ಎಂಬ ಅಕ್ಷರ ಎಲ್ಲೆಲ್ಲಿ ಇಂಗ್ಲಿಷಿನಲ್ಲಿ ಬರುವುದೋ ಅಲ್ಲೆಲ್ಲ ಬರೆಯಲು ಸಾಧ್ಯವಿದೆಯಲ್ಲವೇ ? ವಾಸ್ತವವಾಗಿ ಈಜಿಪ್ಷಿಯನ್ ಭಾಷೆಯಲ್ಲಿ ಬಾಯಿಯ ಚಿತ್ರವು [re ?] [=mouth] ಎಂಬ ಪದಕ್ಕೆ ಸಂಕೇತವಾಗಿದ್ದು, ಕ್ರಮೇಣ ಸ್ವರಸಮೇತವಾದ—ಅದು ಯಾವ ಸ್ವರ ಬೇಕಾದರೂ ಆಗಿರಬಹುದು—[r] ಎಂಬ ವ್ಯಂಜನಕ್ಕೆ ಸಂಕೇತವಾಗಿ ಪರಿಣಮಿಸಿತು. ಈಜಿಪ್ಷಿಯನ್ ಭಾಷೆಯ ಎಲ್ಲ ಇಪ್ಪತ್ತನಾಲ್ಕು ವ್ಯಂಜನಗಳಿಗೂ ಅಂತಹ ಒಂದೊಂದು ಚಿಹ್ನೆಯು ಇದ್ದಿತು. ಅಷ್ಟು ಸಂಖ್ಯೆಯ ವ್ಯಂಜನಗಳಿಂದ ಆ ಭಾಷೆಯನ್ನು ಬರೆಯಲು ಸಾಧ್ಯವಿದ್ದಿತು. ಸ್ವರಗಳನ್ನು ಬರೆಯದೆ ಬಿಟ್ಟುಬಿಡುತ್ತಿದ್ದರು. ಆದರೂ ಈಜಿಪ್ಷಿಯನ್ ಬರಹದಲ್ಲಿ ಚಿಹ್ನೆಗಳು ಸ್ವರಸಮೇತವಾದ ವ್ಯಂಜನಗಳನ್ನು ಸೂಚಿಸುತ್ತಿದ್ದುವು.

ಅಕ್ಷರ ಲೇಖನದಿಂದ ಮುಂದೆ ವರ್ಣಮಾಲೆಯತ್ತ ನಡೆದ ವಿಕಾಸದಲ್ಲಿ ಎರಡು ಘಟ್ಟಗಳನ್ನು ಗುರುತಿಸಬಹುದು. ಒಂದು ಪಶ್ಚಿಮ ಸೆಮಿಟಿಕ್ ಬರಹಗಳದ್ದು; ಮತ್ತೊಂದು ಗ್ರೀಕ್ ಬರಹಗಳದ್ದು. ಈಜಿಪ್ಷಿಯನ್ ಚಿಹ್ನೆಗಳನ್ನು ತೆಗೆದುಕೊಂಡ ಫೊನಿಷಿಯನ್ನರು ಅಲ್ಲಿಯ ಒಂದೊಂದು ಚಿಹ್ನೆಯೂ ಒಂದೊಂದು ವ್ಯಂಜನಕ್ಕೆ ಮಾತ್ರ ಸಂಕೇತವಾಗುವಂತೆ ಕಲ್ಪಿಸಿಕೊಂಡು ಹೆಚ್ಚಿನ ಚಿಹ್ನೆಗಳನ್ನು ತಿರಸ್ಕರಿಸಿದರು. ಪಶ್ಚಿಮ ಸೆಮಿಟಿಕ್ ಬರಹದಲ್ಲಿ ಸ್ವರಗಳಿಗೆ ಚಿಹ್ನೆಗಳನ್ನು ಕಲ್ಪಿಸುವ ಆವಶ್ಯಕತೆ ಅವರಿಗೆ ಕಂಡುಬರಲಿಲ್ಲ. ಸ್ವರಗಳನ್ನು ಬರೆಯದೆ ಹಾಗೆಯೇ ಬಿಟ್ಟುಬಿಡುತ್ತಿದ್ದರು. ಈ ಫೊನಿಷಿಯನ್ ಬರಹವನ್ನು ಗ್ರೀಕರು ತಮ್ಮ ಭಾಷೆಯನ್ನು ಬರೆಯಲು ಬಳಸಿಕೊಂಡರು. ಫೊನಿಷಿಯನ್ ಬರಹದ ಕೆಲವು ಚಿಹ್ನೆಗಳು ಗ್ರೀಕ್ ಭಾಷೆಯಲ್ಲಿಲ್ಲದ ವ್ಯಂಜನಗಳಿಗೆ ಸಂಕೇತಗಳಾಗಿದ್ದುವು. ಈ ಹೆಚ್ಚಿಗೆ ಉಳಿದ ಚಿಹ್ನೆಗಳನ್ನು ಗ್ರೀಕರು ಸ್ವರಗಳನ್ನು ಬರೆಯಲು ಬಳಸಿಕೊಂಡರು. ಎಂದರೆ ಗ್ರೀಕ್ ಬರಹದಲ್ಲಿ ಒಂದೊಂದು ವ್ಯಂಜನಕ್ಕೂ ಒಂದೊಂದು ಸ್ವರಕ್ಕೂ, ಒಟ್ಟಿನಲ್ಲಿ ಎಲ್ಲ ಧ್ವನಿಗಳಿಗೂ, ಪ್ರತ್ಯೇಕವಾದ ಚಿಹ್ನೆಗಳು ಕಲ್ಪಿತವಾದುವು. ಇದು ನಿಜವಾದ **'ವರ್ಣಮಾಲಾತ್ಮಕ ಲೇಖನ'** (Alphabetic writing). ಹೀಗೆ ಲಿಪಿಯು ಚಿತ್ರಗಳಿಂದ ಆರಂಭವಾಗಿ ಬೇರೆ ಬೇರೆ ಘಟ್ಟಗಳಲ್ಲಿ ವಿಕಾಸಹೊಂದಿ ಈಗಿನ ರೂಪವನ್ನು ಮುಟ್ಟಿದೆ. ನಮ್ಮ ಈಗಿನ ಅಕ್ಷರಗಳಲ್ಲಿ ಚಿತ್ರಗಳನ್ನು ಗುರುತಿಸಲು ಸಾಧ್ಯವಿಲ್ಲ. ಆದರೂ F ಎಂಬ ಚಿಹ್ನೆಯಲ್ಲಿ ಬಸವನ ಹುಳುವಿನ ಎರಡು ಕೊಂಬುಗಳನ್ನು ಗುರುತಿಸಬಹುದು. ಆ ಚಿಹ್ನೆಯ ಪ್ರಾಚೀನ ರೂಪವು ಈಜಿಪ್ಷಿಯನ್ ಬರಹದಲ್ಲಿ ಒಂದು ಬಸವನ ಹುಳುವಿನ ಚಿತ್ರವೇ ಆಗಿದ್ದಿತು.

ಕನ್ನಡ ಲಿಪಿಯು ಬ್ರಾಹ್ಮೀಲಿಪಿಯಿಂದ ನಿಷ್ಪನ್ನವಾಗಿದೆ. ಬ್ರಾಹ್ಮೀಯಲ್ಲಿ ಒಂದೊಂ ಧ್ವನಿಗೂ ಒಂದೊಂದು ಚಿಹ್ನೆಯುಂಟು. ಈ ಬ್ರಾಹ್ಮೀಲಿಪಿಯು ಸೈಂಧವ ಲಿಪಿಯಿಂ (Indus Script) ಬಂದಿದೆಯೆಂದು ಕೆಲವರ ವಾದ. (ಈ ವಿಷಯದಲ್ಲಿ ಭಿನ್ನಾ ಪ್ರಾಯಗಳಿವೆ.) ಸೈಂಧವ ಲಿಪಿಯನ್ನು ಓದಲು ಇನ್ನೂ ಸಾಧ್ಯವಾಗಿಲ್ಲ. ಅದನ ಓದಲು ಮಾಡಿರುವ ಪ್ರಯತ್ನಗಳು ಇನ್ನೂ ಸಫಲವಾಗಿಲ್ಲ. ಆ ಬರಹದ ಕೆಲವು ಚಿ ಗಳಲ್ಲಿ ಚಿತ್ರಲೇಖನವನ್ನು ಗುರುತಿಸಬಹುದು. ವಿಾನು, ಮನುಷ್ಯ, ಬೆಟ್ಟ, ಮ ಪಾತ್ರೆ ಮುಂತಾದುವುಗಳ ಚಿತ್ರಗಳು ಸ್ಪಷ್ಟವಾಗಿವೆ. ಆದರೆ ಸೈಂಧವ ಲೇಖನದ ಚಿತ್ರಗಳಿದ್ದರೂ, ಅದು ಬಹುವಾಗಿ ಮುಂದುವರಿದ ಘಟ್ಟವನ್ನು ಮುಟ್ಟಿರುವಂ ಕಾಣುತ್ತದೆ. ಅಲ್ಲಿ ಸುಮಾರು ಮುನ್ನೂರು ಚಿಹ್ನೆಗಳಿರುವುದರಿಂದ ಅದು ಪದಲೇಖನ ಘಟ್ಟಕ್ಕಿಂತ ಈಚಿನ ಘಟ್ಟದಲ್ಲಿದೆಯೆಂದೂ, ಬಹುಶಃ ಅಕ್ಷರ ಲೇಖನದ ಘಟ್ಟಕ್ಕೆ ಸೇ ದ್ದೆಂದೂ ಊಹಿಸುತ್ತಾರೆ. ಸೈಂಧವ ಲೇಖನವು ಮೂಲತಃ ಚಿತ್ರಗಳಿಂದ ಆರಂ ವಾಗಿದ್ದು ಹಲವು ಘಟ್ಟಗಳನ್ನು ದಾಟಿ ಮುಂದುವರಿದಿರುವಂತೆ ಕಾಣುತ್ತದೆ. ಅಲ್ಲಿಂ ಚಿಹ್ನೆಗಳನ್ನು ಓದಲು ಸಾಧ್ಯವಾಗಿರುವುದಿಲ್ಲವಾದ್ದರಿಂದ ಸದ್ಯದಲ್ಲಿ ಖಚಿತವಾಗಿ ಏನನ್ ಹೇಳುವಂತಿಲ್ಲ.

### ಕನ್ನಡ ಭಾಷೆ ಮತ್ತು ಕನ್ನಡ ಲಿಪಿ

ಸಾಮಾನ್ಯವಾಗಿ ಒಂದು ಭಾಷೆಗೆ ಒಂದು ಲಿಪಿಯಿರುತ್ತದೆ. ಆದಕ್ಕೆ ಸರಿಯಾ ನಾವು ಕನ್ನಡ ಲಿಪಿ, ತಮಿಳು ಲಿಪಿ, ದೇವನಾಗರಿ ಲಿಪಿ ಎಂದು ಲಿಪಿಗಳನ್ನು ಹೆಸರಿಟ ಕರೆಯುತ್ತೇವೆ. ಆದರೆ ಮೂಲತಃ ಭಾಷೆ ಮತ್ತು ಲಿಪಿಗಳೆರಡೂ ಪರಸ್ಪರ ಸಂಬಂಧಿಸಿ ಬೇಕಿಲ್ಲ. ಟರ್ಕಿಷ್ ಭಾಷೆಯನ್ನು ಬರೆಯಲು ಲ್ಯಾಟಿನ್ ಲಿಪಿಯನ್ನು ಬಳಸಿಕೊಂ ಪ್ಪಾರೆ. ಕನ್ನಡ ಭಾಷೆ ಮತ್ತು ಕನ್ನಡ ಲಿಪಿಗಳಿಗೆ ಮೂಲತಃ ಯಾವ ಸಂಬಂಧವ ಇಲ್ಲ, ಕನ್ನಡ ಭಾಷೆ ದ್ರಾವಿಡ ಭಾಷಾವರ್ಗಕ್ಕೆ ಸೇರಿದುದು. ದ್ರಾವಿಡ ಭಾಷಾವರ್ಗ ಇಂಡೋ-ಆರ್ಯನ್ ಭಾಷಾವರ್ಗದಿಂದ ಬೇರೆಯಾದುದು. ಅದೇ ಒಂದು ಪ್ರತ್ಯೇ ಭಾಷಾವರ್ಗ. ಕನ್ನಡ, ತೆಲುಗು, ತಮಿಳು ಇತ್ಯಾದಿಗಳು ದ್ರಾವಿಡ ಭಾಷಾವರ್ಗ ಸೇರಿದುವು. ಮರಾಠಿ, ಬಂಗಾಳಿ, ಸಂಸ್ಕೃತ ಇತ್ಯಾದಿಗಳು ಇಂಡೋ-ಆರ್ಯನ್ ವರ್ಗ ಸೇರಿದುವು. ಆದರೆ ಈ ಭಾಷೆಗಳನ್ನು ಬರೆಯಲು ಬಳಸುತ್ತಿರುವ ಎಲ್ಲ ಲಿಪಿಗಳ ಮಾತ್ರ ಮೂಲತಃ ಬ್ರಾಹ್ಮಿಯಿಂದ ಜನಿಸಿ ಬಂದಿವೆ.

ಭರತಖಂಡದಲ್ಲಿ ಲೇಖನಕಲೆಯು ಪ್ರಾಚೀನತೆ ಕ್ರಿ.ಪೂ. 3000ದಷ್ಟು ಹಳೆಯದು ಹರಪ್ಪ ಮೊಹೆಂಜೊದಾರೋಗಳಲ್ಲಿ ದೊರಕಿರುವ ಸುಮಾರು ಮೂರು ಸಾವಿರ ಮುದ್ರ ಗಳ ಮೇಲೆ ಇರುವ ಚಿಹ್ನೆಗಳನ್ನು ಓದಲು ಸಾಧ್ಯವಾಗಿಲ್ಲ. ಸೈಂಧವಲೇಖನವನ ಬಿಟ್ಟರೆ ನಮಗೆ ದೊರಕುವ ಲೇಖನಗಳೆಂದರೆ ಕ್ರಿ.ಪೂ. ಮೂರನೇ ಶತಮಾನ ಅಶೋಕನ ಶಾಸನಗಳು. ಅಶೋಕನಿಗಿಂತ ಹಿಂದೆ ಭಾರತದಲ್ಲಿ ಹಲವು ಲಿಪಿಗಳ

ಪ್ರಚಾರದಲ್ಲಿದ್ದುವು. ಅವುಗಳಲ್ಲಿ ಎಡದಿಂದ ಬಲಕ್ಕೆ ಬರೆಯುವ 'ಬಂಭೀ'(=ಬ್ರಾಹ್ಮೀ), ಬಲದಿಂದ ಎಡಕ್ಕೆ ಬರೆಯುವ 'ಖರೋಟ್ಠೀ' (=ಖರೋಷ್ಠೀ)ಗಳು ಮುಖ್ಯವಾದುವು. ಈ ಲಿಪಿಗಳನ್ನೂ ಇತರ ಅರವತ್ತೆಂಟು ಲಿಪಿಗಳನ್ನೂ ಲಲಿತ ವಿಸ್ತರದಲ್ಲಿ ಹೇಳಲಾಗಿದೆ. ಅಶೋಕನು ತನ್ನ ಶಾಸನಗಳನ್ನು ಅಥವಾ 'ಧಮ್ಮಲಿಪಿ'ಗಳನ್ನು ಎರಡು ಲಿಪಿಗಳಲ್ಲಿಯೂ ಬರೆಯಿಸಿದನು. ಒಂದು—ಭರತಖಂಡದ ವಾಯುವ್ಯದಲ್ಲಿ ಪ್ರಚಾರದಲ್ಲಿದ್ದ ಲಿಪಿಯಲ್ಲಿ : ಇದನ್ನು ಬಲದಿಂದ ಎಡಕ್ಕೆ ಬರೆಯಲಾಗಿರುವುದರಿಂದ ಇದಕ್ಕೆ 'ಖರೋಷ್ಠೀ ಲಿಪಿ' ಎಂದು ವಿದ್ವಾಂಸರು ಹೆಸರು ಕೊಟ್ಟಿದ್ದಾರೆ. ಇನ್ನೊಂದು—ಭರತಖಂಡದ ಉಳಿದ ಭಾಗಗಳಲ್ಲಿ ಪ್ರಚಲಿತವಾಗಿದ್ದ ಲಿಪಿ. ಇದನ್ನು ಎಡದಿಂದ ಬಲಕ್ಕೆ ಬರೆಯಲಾಗಿದೆ. ಇದನ್ನು ವಿದ್ವಾಂಸರು ಬ್ರಾಹ್ಮೀ ಎಂದು ಕರೆದಿದ್ದಾರೆ.[1] (ಬ್ರಹ್ಮಗಿರಿಯಲ್ಲಿ ದೊರೆತಿರುವ ಅಶೋಕನ ಶಾಸನವನ್ನು ಬ್ರಾಹ್ಮೀಲಿಪಿಯಲ್ಲಿ ಕೊರೆದ ಲಿಪಿಕಾರ ಚಪಡನು ಕೊನೆಯಲ್ಲಿ ತನ್ನ ಹೆಸರನ್ನು ಮಾತ್ರ ಖರೋಷ್ಠಿಯಲ್ಲಿ ಕೊರೆದಿದ್ದಾನೆ.) ಬೂಲರ್ ಹೇಳುವಂತೆ ಬ್ರಾಹ್ಮಿಯು ಭಾರತೀಯರ ರಾಷ್ಟ್ರೀಯ ಲಿಪಿಯಾಗಿದ್ದಿತು.

ಖರೋಷ್ಠಿಯು ಅರಮೇಯಿಕ್ ಲಿಪಿಯಿಂದ ಬಂದುದೆಂದು ಬಹುತೇಕ ಎಲ್ಲರೂ ಒಪ್ಪಿದ್ದಾರೆ. ಆದರೆ ಬ್ರಾಹ್ಮೀಲಿಪಿಯ ಮೂಲದ ವಿಷಯದಲ್ಲಿ ತೀವ್ರ ಭಿನ್ನಾಭಿಪ್ರಾಯಗಳಿವೆ. ಇದು ದೇಶೀಯವಾದುದೆಂದೂ, ಸೈಂಧವ ಲೇಖನದಿಂದ ನಿಷ್ಪನ್ನವಾದುದೆಂದೂ ಕೆಲವರು ವಾದಿಸಿದರೆ ಇನ್ನು ಕೆಲವರು ಸೆಮಿಟಿಕ್ ಬರಹಗಳಿಂದ ಬಂದಿರಬಹುದೆಂದು ವಾದಿಸಿದ್ದಾರೆ. ಪ್ರಿನ್ಸೆಪ್ ಎಂಬ ವಿದ್ವಾಂಸನು 1837ರಲ್ಲಿ ಬ್ರಾಹ್ಮೀಲಿಪಿಯನ್ನು ಸಮರ್ಪಕವಾಗಿ ಓದಿದನು. ಅವನಿಗೆ ಇದರಲ್ಲಿ ಸಹಾಯ ಮಾಡಿದ್ದು ಇಂಡೋ-ಗ್ರೀಕ್ ದೊರೆಗಳ ದ್ವಿಭಾಷಾ ನಾಣ್ಯಗಳ ಮೇಲಿನ ಬರಹಗಳು. ಬ್ರಾಹ್ಮಿಯಲ್ಲಿ ಬಳಸುವ ಎಲ್ಲ ಧ್ವನಿಗಳಿಗೂ ಪ್ರತ್ಯೇಕ ಚಿಹ್ನೆಗಳಿವೆ. ಉಚ್ಚಾರಕ್ಕೂ ಬರಹಕ್ಕೂ ಸಾಮರಸ್ಯವಿದೆ. ಹ್ರಸ್ವ ದೀರ್ಘಗಳಿಗೆ ಅನುಸ್ವಾರ ವಿಸರ್ಗಗಳಿಗೆ ಪ್ರತ್ಯೇಕ ಚಿಹ್ನೆಗಳಿವೆ.

ಅಶೋಕನ ಶಾಸನಗಳಲ್ಲಿ ಬಳಕೆಯಾಗಿರುವ ಬ್ರಾಹ್ಮೀಲಿಪಿಯಲ್ಲಿ ಅನೇಕ ಪ್ರಾಂತಭೇದಗಳಿದ್ದುವು. ಅವುಗಳಲ್ಲಿ ಮುಖ್ಯವಾದುವು ಔತ್ತರೇಯ ಪ್ರಭೇದ ಮತ್ತು ದಾಕ್ಷಿಣಾತ್ಯ ಪ್ರಭೇದಗಳು. ದಾಕ್ಷಿಣಾತ್ಯ ಪ್ರಭೇದದಿಂದ ದಕ್ಷಿಣ ಭಾರತದ ಲಿಪಿಗಳು ಉಗಮಗೊಂಡುವು. ಕನ್ನಡ ಮತ್ತು ತೆಲುಗು ಲಿಪಿಗಳು ಹದಿನೈದು ಹದಿನಾರನೇ

[1] ಎರ್ರಗುಡಿಯಲ್ಲಿ ದೊರಕಿರುವ ಅಶೋಕನ ಬ್ರಾಹ್ಮೀಲಿಪಿಯ ಶಾಸನವನ್ನು ಬಲದಿಂದ ಎಡಕ್ಕೆ 'boustrophedon' ಶೈಲಿಯಲ್ಲಿ ಬರೆಯಲಾಗಿದೆ. 'boustrophedon' ಎಂದರೆ ಒಂದೊಂದು ಸಾಲನ್ನೂ ಬೇರೆ ಬೇರೆ ಗತಿಗಳಲ್ಲಿ ಬರೆಯುವುದೆಂದರ್ಥ. ಬಲದಿಂದ ಎಡಕ್ಕೆ ಒಂದು ಸಾಲನ್ನು, ಅದರ ಮುಂದಿನ ಸಾಲನ್ನು ಎಡದಿಂದ ಬಲಕ್ಕೆ, ಅದರ ಮುಂದಿನ ಸಾಲನ್ನು ಬಲದಿಂದ ಎಡಕ್ಕೆ ಇತ್ಯಾದಿ. ಸೈಂಧವ ಲೇಖನಗಳೂ 'boustrophedon' ಶೈಲಿಯಲ್ಲಿವೆ ಎಂದು ಊಹಿಸಿದ್ದಾರೆ. ಎರ್ರಗುಡಿಯ ಬ್ರಾಹ್ಮೀ ಶಾಸನವನ್ನು ಲಿಪಿಕಾರ ಅರಿಯದೆ ಬಲದಿಂದ ಎಡಕ್ಕೆ ಬರೆದು ತಪ್ಪು ಮಾಡಿದ್ದಾನೆ. ಅದು ಬ್ರಾಹ್ಮೀಲಿಪಿಯನ್ನು ಬರೆಯುವ ವಿಧಾನವನ್ನು ಸೂಚಿಸುವುದಿಲ್ಲ.

ಶತಮಾನಗಳವರೆಗೆ ಒಂದೇ ಆಗಿದ್ದುವು. (ಈಗಲೂ ಅವೆರಡಕ್ಕೆ ಅಂತಹ ಪ್ರವ
ವ್ಯತ್ಯಾಸಗಳಿಲ್ಲ). ಆದ್ದರಿಂದ ಈ ಲಿಪಿಯನ್ನು ಕನ್ನಡ-ತೆಲುಗು ಲಿಪಿ ಎಂದು ಕರ
ಬಹುದು. ಅಶೋಕನ ಬ್ರಾಹ್ಮಿಯಿಂದ ಕನ್ನಡ—ತೆಲುಗು ಲಿಪಿ ಬೆಳೆದು ಬಂದ ಘ
ಗಳನ್ನು ಹೀಗೆ ಗುರುತಿಸಬಹುದು. ಮೊದಲನೆಯದು ಅಶೋಕನ ಬ್ರಾಹ್ಮಿ. ಅಲ್ಲಿ
ಕೆಲವು ಅಕ್ಷರಗಳು 'ಹೆಚ್ಚು ಕಡಮೆ' ಹೀಗಿವೆ ⁖ = ಇ ; † = ಕ ; ( = ಟ ; ⊙ =
D = ದ. ಮುಂದಿನ ಘಟ್ಟವನ್ನು ಗವಿಯ ಬ್ರಾಹ್ಮಿ ಎಂದು ಕರೆಯಬಹುದು. ಈ
ಯನ್ನು ಪಶ್ಚಿಮ ಕ್ಷತ್ರಪ ದೊರೆ ರುದ್ರದಾಮನ ಶಾಸನದಲ್ಲಿ (ಸು. ಕ್ರಿ.ಶ. 15
ಆಂಧ್ರ ದೊರೆ ಪುಳುಮಾಯಿಯ (ಸು. ಕ್ರಿ.ಶ. 150) ಶಾಸನದಲ್ಲಿ ನೋಡಬಹು
ಮುಂದಿನ ಘಟ್ಟವನ್ನು ಬನವಾಸಿಯ ಕದಂಬರ ಶಾಸನಗಳಲ್ಲಿ (ಕ್ರಿ.ಶ. 4–5ನೆ
ಬಾದಾಮಿಯ ಚಾಲುಕ್ಯರ ಕೀರ್ತಿವರ್ಮ I, ಮಂಗಲೇಶ ಪುಲಿಕೇಶಿಯರ ಶಾಸನಗ
(ಕ್ರಿ.ಶ. 6–7ನೆ ಶ.). ಪೂರ್ವಚಾಲುಕ್ಯ ದೊರೆಗಳಾದ ವಿಷ್ಣುವರ್ಧನ I ಮ
ಜಯಸಿಂಹ Iರ ಶಾಸನಗಳಲ್ಲಿ ನೋಡಬಹುದು. ಮುಂದಿನ ಘಟ್ಟವನ್ನು ಕ್ರಿ.ಶ. ಏ
ಶತಮಾನದಿಂದ ಒಂಬತ್ತನೇ ಶತಮಾನದವರೆಗಿನ ಬಾದಾಮಿ ಚಾಳುಕ್ಯರ, ರಾಷ್ಟ್ರಕೂ
ಶಾಸನಗಳಲ್ಲಿ, ಪೂರ್ವದಲ್ಲಿ ವೆಂಗಿ ಚಾಳುಕ್ಯರ ಶಾಸನಗಳಲ್ಲಿ ಕಾಣಬಹುದು. ಕೊನ
ಘಟ್ಟ ಹನ್ನೊಂದನೇ ಶತಮಾನದಿಂದ ಈಚಿನ ಶಾಸನಗಳಲ್ಲಿ ಕಾಣಿಸುತ್ತದೆ. ಈ ಘಟ
ಲಿಪಿಯಲ್ಲಿ ಹೊಸಗನ್ನಡ ಲಿಪಿಯ ಅನೇಕ ಚಿಹ್ನೆಗಳನ್ನು ಸುಲಭವಾಗಿ ಗುರು
ಬಹುದು. ಈ ಕೊನೆಯ ಮೂರು ಘಟ್ಟಗಳನ್ನು ಬೂಲರ್ ಅವರು 'The Arch
variety.' 'The Middle variety', 'The Old—Kanarese alphab
ಎಂದು ಕರೆದಿದ್ದಾರೆ. ಹದಿನಾಲ್ಕು ಹದಿನೈದನೇ ಶತಮಾನಗಳವರೆಗೆ ಕನ್ನಡ ಮ
ತೆಲುಗು ಲಿಪಿಗಳು ಒಂದೇ ಆಗಿದ್ದುವು.

ಅಶೋಕನ ಬ್ರಾಹ್ಮೀಲಿಪಿಯ ಒಂದೊಂದು ಚಿಹ್ನೆಯೂ ಬೇರೆ ಬೇರೆ ಶತಮಾ
ಗಳಲ್ಲಿ ಹೇಗೆ ಬೇರೆ ಬೇರೆ ವಿನ್ಯಾಸ, ಆಕಾರಗಳನ್ನು ತಾಳಿ, ಈಗಿನ ಹೊಸಗನ್ನಡ
ಯಾಗಿ ಪರಿಣಮಿಸಿದೆ ಎಂಬುದನ್ನು ಕ್ರಮಬದ್ಧವಾಗಿ ತೋರಿಸಲು ಸಾಧ್ಯವಾಗಿ
ಶ್ರೀ ಎಂ. ಎಚ್. ಕೃಷ್ಣ ಅವರು ಅಂತಹ ಪಟವೊಂದನ್ನು ತಯಾರಿಸಿದ್ದರು.

ಹಿಂದೆ ತಿಳಿಸಿದಂತೆ ವರ್ಣಮಾಲೆ ಎಂದರೆ ಒಂದೊಂದು ಸ್ವರಕ್ಕೂ ಒಂದೊಂ
ವ್ಯಂಜನಕ್ಕೂ ಪ್ರತ್ಯೇಕ ಚಿಹ್ನೆ ಇರುವುದು. ಈ ದೃಷ್ಟಿಯಿಂದ ಕನ್ನಡ ವರ್ಣಮಾ
ಬಹುಮಟ್ಟಿಗೆ ಸಮರ್ಪಕವಾದುದು. ಇದು ಕನ್ನಡ ಭಾಷೆಯ ಆವಶ್ಯಕತೆಗಳ
ಪೂರೈಸಬಲ್ಲುದು. ಪ್ರಪಂಚದಲ್ಲಿ ಮೂರು ರೀತಿಯ ವರ್ಣಮಾಲೆಗಳನ್ನು ಗುರು
ಬಹುದು (ಇವು ಆದರ್ಶ ವರ್ಣಮಾಲೆಗಳು). ಒಂದು—ಸ್ವರಸಮೇತವಾದ ವ್ಯಂ
ವನ್ನು ಬರೆಯುವಾಗ ಎರಡನ್ನೂ ಅಕ್ಕಪಕ್ಕದಲ್ಲಿ ಸರಿಸಮನಾಗಿ ಬರೆಯುವು
ಉದಾ: ಗ್ರೀಕ್ ಲಿಪಿ. ಎರಡು—ಇಲ್ಲಿ ಸ್ವರಗಳ ಚಿಹ್ನೆಗಳಿಗೆ ಪ್ರಾಮುಖ್ಯ ಇ
ವ್ಯಂಜನದ ಚಿಹ್ನೆಯ ಮೇಲೆಯೋ ಕೆಳಗೋ ಚುಕ್ಕಿ ಅಥವಾ ಅಡ್ಡಗೀಟು ಇತ

ಹ್ನೆಗಳ ಮೂಲಕ ಸ್ವರಗಳನ್ನು ಸೂಚಿಸುವುದು. ಉದಾ : ಅರೇಬಿಕ್ ಲಿಪಿ. ಮೂರು ಇಲ್ಲಿ ವ್ಯಂಜನದ ಚಿಹ್ನೆಯು ಅಕಾರಸಹಿತವಾದುದು. ಇತರ ಸ್ವರಗಳನ್ನು ರೆಯುವಾಗ ವ್ಯಂಜನದ ಚಿಹ್ನೆಯನ್ನು ಅಡ್ಡಗೀಟು, ಕೊಂಬು ಇತ್ಯಾದಿ ಗುರುತು ಳಿಂದ ಮಾರ್ಪಡಿಸುವುದು. ಕನ್ನಡ ಲಿಪಿಯು ಕೊನೆಯ ವರ್ಗಕ್ಕೆ ನಿದರ್ಶನವಾಗಿದೆ.

## ಷ್ಟಭಾಷೆ ಮತ್ತು ಬರಹ

ಪ್ರತಿಯೊಂದು ಭಾಷೆಯಲ್ಲೂ ಬರಹಕ್ಕಿಳಿಯದೆ ಜನರ ಬಾಯಲ್ಲಿ ಮಾತ್ರ ಬದುಕಿ ುವ ಜಾನಪದ ಗೀತಗಳ ಸಂಖ್ಯೆ ಸಾಕಷ್ಟು ದೊಡ್ಡದಾಗಿಯೇ ಇರುತ್ತದೆ. ಅವುಗಳಲ್ಲಿ ಸಕ್ತರಾಗಿರುವವರು ಅವುಗಳನ್ನು ಬರಹಕ್ಕೆ ಇಳಿಸುತ್ತಾರೆ. ಅವುಗಳನ್ನು ಯಾವಾಗ ಚಿಸಿದರೋ ತಿಳಿಯದು; ಅವುಗಳು ರಚಿತವಾದಾಗ ಅವುಗಳ ಭಾಷಾರೂಪಗಳು ೀಗಿದ್ದುವೋ ತಿಳಿಯದು; ಆದರೆ ಭಾಷೆ ವ್ಯತ್ಯಾಸಗೊಂಡಂತೆ ಅವುಗಳ ಭಾಷೆಯೂ ಅದಕ್ಕನುಗುಣವಾಗಿ ವ್ಯತ್ಯಾಸಗೊಂಡಿತು. ನಾವು ಈಗ ಕೇಳುತ್ತಿರುವ ಹಲವು ಜಾನಪದ ್ರಿಪದಿಗಳು ಮೂಲತಃ ಪಂಪನ ಕಾಲದಲ್ಲಿ ಹಳಗನ್ನಡದಲ್ಲಿ ರಚಿತವಾಗಿದ್ದರೆ ಆಶ್ಚರ್ಯ ಿಲ್ಲ. ಆದರೆ ಅವುಗಳ ಭಾಷೆ ವ್ಯತ್ಯಾಸಗೊಂಡಿದೆ. ಒಂದು ಕೃತಿ ಒಮ್ಮೆ ಬರಹಕ್ಕಿಳಿಯಿ ುದರೆ ಅದರ ಭಾಷೆ ನಿರ್ದಿಷ್ಟವಾದಂತೆಯೇ. ಭಾಷೆ ವ್ಯತ್ಯಾಸಗೊಂಡಾಗ ಆ ಕೃತಿಯ ಭಾಷೆ ಹಾಗೇ ಉಳಿದುಬಿಟ್ಟು ಹಿಂದುಳಿಯುತ್ತದೆ. ಕೆಲವು ಶತಮಾನಗಳಾದಮೇಲೆ ಅದು ಪ್ರಾಚೀನ ಸಾಹಿತ್ಯದಲ್ಲಿ ಆಸಕ್ತರಾಗಿರುವವರಿಗೆ ಮಾತ್ರ ಅರ್ಥವಾಗುತ್ತದೆ. ಆದರೆ ಇದರಿಂದ ಆಗುವ ಅನುಕೂಲಗಳೆಷ್ಟು! ಕೇವಲ ಬಾಯಲ್ಲಿ ಮಾತ್ರ ಉಳಿದಿರುವ ಒಂದು ಕಥೆ ಅಥವಾ ಹಾಡು ಅದನ್ನು ಕಲಿತು ಇನ್ನೊಬ್ಬರಿಗೆ ಹೇಳುವವರು ಯಾರೂ ಇಲ್ಲದೆ ಹೋದರೆ ನಾಶವಾಗಿ ಹೋಗಿಬಿಡುತ್ತದೆ. ಅಥವಾ ಅದನ್ನು ಕಲಿತು ಹೇಳು ವವರು ತಮಗೆ ತೋಚಿದ ಮಾರ್ಪಾಟುಗಳನ್ನು ಮಾಡಿಬಿಟ್ಟು ಮೂಲಕೃತಿಯ ಸ್ವರೂಪವೇ ವ್ಯತ್ಯಾಸವಾಗುವಂತೆ ಮಾಡಿಬಿಡಬಹುದು. ಆದರೆ ಈ ತೊಂದರೆ ಬರಹ ್ಕಿಳಿದ ಕೃತಿಗಿರುವುದಿಲ್ಲ.

ಭಾಷೆಯ 'ಶೈಲಿ'ಯನ್ನು ಉತ್ತಮಗೊಳಿಸಲು ಬರಹವು ಸಹಾಯ ಮಾಡುತ್ತದೆ. ಿಲ್ಪಿಯು ತನ್ನ ಶಿಲ್ಪವನ್ನು ತನ್ನ ಮುಂದಿಟ್ಟುಕೊಂಡು ತಿದ್ದಿ ಉತ್ತಮಪಡಿಸುವಂತೆ, ್ರುತಿಕಾರ ಬರಹದ ಸಹಾಯದಿಂದ ವಾಕ್ಯಗಳನ್ನು ತನ್ನಿಂದ ಬೇರ್ಪಡಿಸಿ, ಅವುಗಳನ್ನು ತನ್ನ ಮುಂದಿಟ್ಟುಕೊಂಡು ಅವುಗಳನ್ನು ತಿದ್ದಬಹುದು. ಅನೇಕ ರೀತಿಯ ರಚನೆಗಳನ್ನು ಕಟ್ಟಿ ನೋಡಬಹುದು. ಆದರೆ ಈ ಸೌಲಭ್ಯ ಬಾಯಲ್ಲಿ ಮಾತ್ರ ಉಳಿದಿರುವ ಕೃತಿಗಳಿ ಗಿರುವುದಿಲ್ಲ.

ಒಂದು ಭಾಷೆಯಲ್ಲಿ ಶಿಷ್ಟಭಾಷೆಯು (Standard language) ನಿರ್ಮಾಣ ವಾಗಲು ಬಹುಮಟ್ಟಿಗೆ ಬರಹದ ಭಾಷೆಯು ಕಾರಣವಾಗುತ್ತದೆ. ಎಲ್ಲ ಭಾಷೆಗಳಲ್ಲೂ ಬರಹದ ಭಾಷೆಗೂ ಆಡುವ ಭಾಷೆಗೂ ಅಂತರವಿದ್ದೇ ಇರುತ್ತದೆ. ನಾವು ಮಾತನಾಡು

ವಂತೆಯೇ ಬರೆಯುವುದಿಲ್ಲ; ಬರೆಯುವಂತೆಯೇ ಮಾತನಾಡುವುದಿಲ್ಲ. ಕಾದಂ
ಸಣ್ಣ ಕತೆಗಳಲ್ಲಿ ವಾಸ್ತವ ಚಿತ್ರಣವನ್ನು ಕೊಡುವಾಗ, ಸಂಭಾಷಣೆಗಳಲ್ಲಿ
ಮಾತನಾಡುತ್ತಿರುವಂತೆಯೇ ಬರೆದರೆ ಸರಿಹೋದೀತು. ಆದರೆ ಎಲ್ಲಾ ಕಡೆಗಳಲ್ಲಿ
ಹಾಗೆಯೇ ಬರೆದರೆ ಅಸಹ್ಯವಾಗಿರುತ್ತದೆ. ಬರೆದಂತೆಯೇ ಮಾತನಾಡಿದರೆ ಅದು
ಕೃತಕವಾಗಿರುತ್ತದೆ. ಅದೂ ಅಸಹ್ಯವಾಗಿ ಪರಿಣಮಿಸುತ್ತದೆ. ಆದರೆ ಬರಹದ ಭಾ
ಪ್ರಭಾವವು ಆಡುವ ಮಾತಿನ ಮೇಲೆ, ಅದರಲ್ಲೂ ವಿದ್ಯಾವಂತರ ಭಾಷೆಯ
ಬಹಳ ಪ್ರಭಾವವನ್ನು ಬೀರುತ್ತಿರುತ್ತದೆ. ಅವರ ಭಾಷೆ ಬರಹದ ಭಾಷೆಯ ಆಧ
ಮೇಲೆ ರೂಪಿತವಾಗಿರುತ್ತದೆ. ಹಳ್ಳಿಗಳ ಉಪಭಾಷೆಗಳಲ್ಲಿ ಅಲ್ಪಪ್ರಾಣ ಮಹಾಪ
ಗಳಿಗೆ, [ಅ], [ಹ]ಗಳಿಗೆ, [ಶ], [ಷ], [ಸ]ಗಳಿಗೆ, ಅಷ್ಟು ಭೇದವನ್ನು ಮಾಡುವು
ಬರಹದಲ್ಲಿ ಇವುಗಳಿಗೆ ಆದ್ಯಗಮನವನ್ನು ಕೊಡಬೇಕಾಗುತ್ತದೆ. ಅವುಗಳಿಗೆ ವ್ಯ
ವನ್ನು ಅರಿಯದೆ ಬರೆದರೆ ಅದನ್ನು ತಿರಸ್ಕಾರದಿಂದ ಜನರು ನೋಡುತ್ತಾರೆ.
ಮಾತಿಗಿಂತ ಬರಹದ ಭಾಷೆಯಲ್ಲಿ ಸರಿ, ತಪ್ಪುಗಳ ಪ್ರಶ್ನೆ ಏಳುತ್ತದೆ. ವಿದ್ಯಾವ
ಭಾಷೆ ಬರಹದ ಭಾಷೆಯೇ ಆಗಿರದಿದ್ದರೂ ಅದಕ್ಕೆ ತಕ್ಕಮಟ್ಟಿಗೆ ಸಮಾಪ
ರುತ್ತದೆ. ಇವರ ಭಾಷೆ 'ಶಿಷ್ಟಭಾಷೆ'ಯಾಗುತ್ತದೆ. ಅದನ್ನು ಇತರರು ಅನುಕರಿ
ಪ್ರಯತ್ನಿಸುತ್ತಾರೆ. ಒಂದು ಭಾಷೆಯಿಂದ ಲುಪ್ತವಾಗಿ ಹೋದನಂತರ ಪದಗ
ಲೇಖಕರು ತಮ್ಮ ಕೃತಿಗಳಲ್ಲಿ ಬಳಸಿ ಅವುಗಳನ್ನು ಮತ್ತೆ ಚಲಾವಣೆಗೆ ತರುವುದು
ಬರಹದಲ್ಲಿ ಕೆಲವು ಉಪಭಾಷೆಯ ಪದಗಳನ್ನು ಬಳಸದೆ ಹೋಗಿ, ಅವುಗಳಿಗೆ
ಭಾಷೆಯಲ್ಲಿ ಸ್ಥಾನ ದೊರಕದೆ ಅಂಥವು ಕ್ರಮೇಣ ಆ ಭಾಷೆಯಿಂದ ಲೋಪ
ಬಿಡಬಹುದು.

ಒಂದು ಭಾಷೆಯ ಉಪಭಾಷೆಗಳಿಗೆ ಇರುವ ವ್ಯತ್ಯಾಸಗಳ ಅಂತರವು ಕಡಮೆಯ
ವಂತೆ ಕೆಲಸಮಾಡುವ ಶಕ್ತಿಗಳಲ್ಲಿ ಬರಹದ ಭಾಷೆಯೂ ಒಂದು. ಎರಡು ಉಪ
ಗಳನ್ನಾಡುವ ಇಬ್ಬರು ಹಳ್ಳಿಗರ ಮಾತುಗಳಲ್ಲಿ ಅಂತರವು ಹೆಚ್ಚಾಗಿರುತ್ತದೆ:
ಆದೇ ಇಬ್ಬರು ವಿದ್ಯಾವಂತರ ಮಾತುಗಳಿಗೆ ಅಂತರವು ಇನ್ನೂ ಕಡಿಮೆಯಾಗಿರುತ್ತ
ಆ ಇಬ್ಬರು ವಿದ್ಯಾವಂತರು ಬರೆಯುವ ಬರಹಗಳಲ್ಲಿ ಆ ಅಂತರವು ಬಹುಮ
ಕಡಮೆಯಾಗಿಹೋಗಿರುತ್ತದೆ.

ಕನ್ನಡದಲ್ಲಿ ಬರಹದ ಭಾಷೆಗೂ ಆಡುಮಾತಿಗೂ ಒಂದು ಸಮಸ್ಯೆಯಾಗುವ
ಅಂತರವೇನೂ ಇಲ್ಲ. ಎರಡೂ ಒಂದನ್ನೊಂದು ಅನುಸರಿಸಿಕೊಂಡು, ಹೊಂದಿಕೊ
ಹೋಗುತ್ತಿವೆ. ಆದರೆ ತೆಲುಗಿನಲ್ಲಿ ಇದೊಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದ್ದ
ಆ ಸಮಸ್ಯೆ ಇಂದಿಗೂ ಪರಿಹಾರವಾದಂತೆ ಕಾಣಿಸಲಿಲ್ಲ. ಅಲ್ಲಿ 'ಗ್ರಾಂಥಿಕ ತೆಲುಗಿ
'ಗ್ರಾಮ್ಯ ತೆಲುಗಿ'ಗೂ ಅಂತರವು ಹೆಚ್ಚಾಗಿ ಅನೇಕ ಸಮಸ್ಯೆಗಳನ್ನು ಎಳಿ
'ಗ್ರಾಂಥಿಕ ತೆಲುಗು' ಪ್ರಾಚೀನ ಲೇಖಕರ ಭಾಷೆಯನ್ನೇ ಬಹುಮಟ್ಟಿಗೆ ಅ
ಕೊಂಡಿತು; ಆದರೆ ಆಡುಮಾತು ಮಾತ್ರ—ಶಿಷ್ಟಭಾಷೆಯೂ ಕೂಡ—ಬಹು

ವ್ಯತ್ಯಾಸಗೊಂಡಿತು. ಹೀಗಾಗಿ ಅವೆರಡಕ್ಕಿದ್ದ ಸಮತೋಲನ ತಪ್ಪಿತು. ಬರಹದ ತೆಲುಗು ಪ್ರಾಚೀನವೆಂದೂ ಕೃತಕವೆಂದೂ ಇತರರಿಗೆ ಅರ್ಥವಾಗುವುದಿಲ್ಲವೆಂದೂ, ಆದ್ದರಿಂದ ಬರಹದ ಭಾಷೆಯು ವಿದ್ಯಾವಂತರ ಆಡುಮಾತಿಗೆ ಹತ್ತಿರವಾಗಿರಬೇಕೆಂದೂ ಕೆಲವರು ವಾದವನ್ನು ಹೂಡಿದರು. ಇದನ್ನು ಒಪ್ಪದೆ, ಗ್ರಾಂಥಿಕ ಶೈಲಿಯನ್ನು ಉಳಿಸಿಕೊಳ್ಳ ಬೇಕೆಂದೂ, ಅದೇ ಪ್ರತ್ಯೇಕವಾಗಿರಬೇಕೆಂದೂ ಇನ್ನು ಕೆಲವರು ಪ್ರತಿವಾದವನ್ನು ಹೂಡಿದರು. ಈ ವಿಷಯದಲ್ಲಿ ಪಕ್ಷ ಪ್ರತಿಪಕ್ಷಗಳಾಗಿ ಬೇಕಾದಷ್ಟು ವಾದವಿವಾದ ನಡೆಯಿತು. ಲ್ಯಾಟಿನ್ನಿನ ಇತಿಹಾಸದಲ್ಲೂ ಬರಹದ ಭಾಷೆಗೂ ಆಡುಭಾಷೆಗೂ ಸಮ ತೋಲನ ತಪ್ಪಿದ್ದುಂಟು. ಕ್ರಿ.ಪೂ. ಒಂದನೇ ಶತಮಾನದ ಮೇಲುವರ್ಗದ ಜನರ, ಸೀಸರ್ ಮತ್ತು ಸಿಸಿರೋ ಅವರು ಬಳಸಿದ ಲ್ಯಾಟಿನ್ ಭಾಷೆಯು ಬರಹದ ಮತ್ತು ವಿದ್ವದ್ಗೋಷ್ಠಿಗಳ ಭಾಷೆಯಾಗಿ ಪರಿಣಮಿಸಿತು. ಕೆಲವು ಶತಮಾನಗಳ ಬಳಿಕ ಆಡುಮಾತು ಬಹುವಾಗಿ ವ್ಯತ್ಯಾಸಗೊಂಡಿತು. ಆದರೆ ಬರಹದ ಭಾಷೆ ಹಾಗೆಯೇ ಉಳಿಯಿತು. ಇದರಿಂದ, ಓದು ಬರಹಗಳನ್ನು ಕಲಿಯುವವರು ಬಹು ಶ್ರಮಪಟ್ಟು ಬರಹದ ಲ್ಯಾಟಿನ್ನನ್ನು ಕಲಿಯಬೇಕಾಯಿತು. ಆದರೆ ಕನ್ನಡ ಭಾಷೆಯ ಇತಿಹಾಸದಲ್ಲಿ ಆಗಾಗ್ಗೆ ಆಡುಮಾತಿಗೂ ಬರಹದ ಭಾಷೆಗೂ ಒಂದು ರೀತಿಯ ಸಾಮರಸ್ಯವನ್ನು ಕಲ್ಪಿಸಲು ಪ್ರಯತ್ನಗಳು ನಡೆದಿವೆ. ಹಳಗನ್ನಡವು ನಡುಗನ್ನಡವಾದಾಗ, ಆ ನಡು ಗನ್ನಡದ ಭಾಷೆಯಲ್ಲಿ ವಚನಕಾರರು ವಚನಗಳನ್ನು ಬರೆದರು ; ತಮ್ಮ ಭಾಷೆ ಆಡು ನುಡಿಗೆ ಹತ್ತಿರವಾಗುವಂತೆ ನೋಡಿಕೊಂಡರು. ಈ ಕೆಲಸವನ್ನು ಮುಂದೆ ಹರಿದಾಸರೂ ಮಾಡಿದರು. ಏನೇ ಆದರೂ ಬರಹದ ಭಾಷೆ ಆಡುವ ಭಾಷೆಗಿಂತ ಭಿನ್ನವಾಗಿರುತ್ತದೆ ಮತ್ತು ವ್ಯತ್ಯಾಸವಾಗದೆ ಹಿಂದೆ ಉಳಿದೇ ಉಳಿಯುತ್ತದೆ. ಆದರೆ ಅದು ಕಾಲದಿಂದ ಕಾಲಕ್ಕೆ ಆಡುನುಡಿಯನ್ನು ನಿಯಂತ್ರಿಸುತ್ತ, ಅದರ ಹಿಂದೆಯೇ ಉಳಿಯುತ್ತ, ಅನುಸರಿ ಸುತ್ತ, ಅದೂ ನಿಧಾನವಾಗಿ ವ್ಯತ್ಯಾಸಗೊಳ್ಳಬೇಕಾಗುತ್ತದೆ. ಹೊಸ ಪರಿಸ್ಥಿತಿಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ. ಕನ್ನಡದಲ್ಲಿ ಈ ಕಾರ್ಯ ಮೊದಲಿನಿಂದಲೂ ನಡೆದಿರುವುದ ರಿಂದ ಅಂತಹ ಸಮಸ್ಯೆಗಳು ನಮ್ಮಲ್ಲಿ ಉದ್ಭವವಾಗಿಲ್ಲ.

## ಬರಹ ಮತ್ತು ನಾಗರಿಕತೆ

ಭಾಷೆ ಎನ್ನುವುದು ಒಂದು ಕ್ಷಣದಲ್ಲಿ ಇಬ್ಬರ ಅಥವಾ ಕೆಲವರ ಮಧ್ಯೆ ನಡೆಯುವ ಕಾರ್ಯ. ಆಗಲೇ ಸೃಷ್ಟಿಯಾಗಿ ಅಲ್ಲಿಗೇ ಅದು ಮುಕ್ತಾಯವಾಗುತ್ತದೆ. ಅದು ಕಾಲ ಮತ್ತು ದೇಶಗಳಿಗೆ ಬದ್ಧವಾಗಿರುತ್ತದೆ. ನಾವು ಇನ್ನೊಬ್ಬನಿಗೆ ಏನೋ ಹೇಳುತ್ತೇವೆ, ಅದು ಅವನಿಗೆ ಅರ್ಥವಾಗುತ್ತದೆ. ಅಲ್ಲಿಗೆ ಭಾಷೆಯ ಕೆಲಸ ಮುಗಿಯಿತು. ನಮ್ಮಿಂದ ಭೌಗೋಳಿಕವಾಗಿ ದೂರದಲ್ಲಿರುವವರಿಗೆ ನಮ್ಮ ಅಭಿಪ್ರಾಯಗಳನ್ನು ಮುಟ್ಟಿಸಬೇಕಾದರೆ ಎಷ್ಟು ಕಷ್ಟಗಳಿವೆ! ಇನ್ನೊಬ್ಬರ ಮೂಲಕ ನಾವು ಹೇಳಿಕಳುಹಿಸಬೇಕು ; ಅವರು ನಾವು ಹೇಳಿದ್ದನ್ನು ಸರಿಯಾಗಿ ಗ್ರಹಿಸಿ, ಮುಟ್ಟಿಸುತ್ತಾರೆ ಎಂಬ ನಂಬಿಕೆ ತಾನೇ ಎಲ್ಲಿಯದು ?

ಬರಹದ ಸಹಾಯದಿಂದ ಭಾಷೆಯು ಕಾಲ, ದೇಶಗಳನ್ನು ಮೀರಿ ನಿಲ್ಲಲು ಸಾಧ್ಯವಾಗಿದೆ. ನಾವು ನಮ್ಮ ಅಭಿಪ್ರಾಯಗಳನ್ನು ಭೌಗೋಳಿಕವಾಗಿ ಮಾತ್ರವಲ್ಲದೆ ಕಾಲದ ದೃಷ್ಟಿಯಿಂದಲೂ ದೂರವಲ್ಲಿರುವವರಿಗೆ ಖಚಿತವಾಗಿ ತಿಳಿಸಲು ಸಾಧ್ಯವಾಗಿದೆ. ಬರಹವಿಲ್ಲದೆ ಇದ್ದಿದ್ದರೆ ನಮ್ಮ ಪ್ರಾಚೀನ ಕವಿಗಳ, ವಿದ್ವಾಂಸರ, ಧಾರ್ಮಿಕ ಪುರುಷರ ವಾಣಿಯಾದರೂ ನಮಗೆ ಹೇಗೆ ದೊರಕುತ್ತಿದ್ದಿತು ? ಬರಹವಿಲ್ಲದೆ ಇದ್ದಿದ್ದರೆ ನಮ್ಮ ಸ್ಥಿತಿ ಏನಾಗಿರುತ್ತಿದ್ದಿತು ಎಂಬುದನ್ನು ಒಂದು ಕ್ಷಣ ಕಲ್ಪಿಸಿಕೊಂಡರೆ ಸಾಕು, ಮನುಷ್ಯನ ಇತಿಹಾಸದಲ್ಲಿ ಬರಹವು ವಹಿಸಿರುವ ಪಾತ್ರವು ವೇದ್ಯವಾಗುತ್ತದೆ. ಗೆಲ್ಬ್ ಎಂಬ ವಿದ್ವಾಂಸ ಹೇಳುವಂತೆ ನಮ್ಮ ನಾಗರಿಕತೆ ಹಣವಿಲ್ಲದೆ ಲೋಹಗಳಿಲ್ಲದೆ ರೇಡಿಯೋ ಮತ್ತು ವಿದ್ಯುತ್ತುಗಳಿಲ್ಲದೆ ಇರಬಲ್ಲುದು ; ಆದರೆ ಬರಹವಿಲ್ಲದೆ ಅದು ಬದುಕಲಾರದು.[1] ಡಿರಿಂಜರ್ ಕೂಡ ಹೀಗೆಯೇ ಅಭಿಪ್ರಾಯಪಡುತ್ತಾನೆ.[2]

ಪ್ರಾಚೀನಕಾಲದಲ್ಲಿ ಗ್ರಂಥಗಳನ್ನು ಬರೆದಿಡದೆ ಅವುಗಳನ್ನು ನೆನಪಿನಲ್ಲಿಟ್ಟುಕೊಂಡು ಮುಂದಿನವರಿಗೆ ಹೇಳಿಕೊಡುವ ಒಂದು ಸಂಪ್ರದಾಯವಿದ್ದಿತು. ವೇದಗಳು ಅನೇಕ ಶತಮಾನಗಳವರೆಗೆ ಬರವಣಿಗೆಗೆ ಇಳಿಯದೆ ಬಾಯಿಂದ ಬಾಯಿಗೆ ಹರಿದುಕೊಂಡು ಬಂದವು. ವೇದಗಳನ್ನು ಬರೆದಿಡುವುದು ಪಾಪವೆಂಬ ಭಾವನೆ ಪ್ರಾಚೀನ ಭಾರತದಲ್ಲಿ ಪ್ರಚಲಿತವಾಗಿದ್ದಿತು. ಇಲಿಯಡ್, ಒಡಿಸ್ಸಿಗಳೂ ಬಹುಕಾಲ ಜನರ ನಾಲಗೆಯ ಮೇಲೆ ಬದುಕಿದ್ದವು. ಆದರೆ ಎಷ್ಟೇ ಆಗಲಿ ಮನುಷ್ಯನ ಸ್ಮರಣಶಕ್ತಿಗೆ ಒಂದು ಮಿತಿಯುಂಟು. ಬರವಣಿಗೆ, ಹಾಕೆಟ್ ಎಂಬ ವಿದ್ವಾಂಸನ ಮಾತಿನಲ್ಲಿ ಹೇಳುವುದಾದರೆ, ಒಂದು ರೀತಿಯಲ್ಲಿ 'ಬಾಹ್ಯ ಸ್ಮರಣೆ' ('External memory') ಇದ್ದಂತೆ. ಒಂದು ಸಣ್ಣ ನಿದರ್ಶನವನ್ನೇ ತೆಗೆದುಕೊಳ್ಳಬಹುದು. ನಾಲ್ಕು ನಾಲ್ಕು ಅಂಕೆಗಳಿರುವ ಎರಡು ಸಂಖ್ಯೆಗಳನ್ನು ಗುಣಿಸಬೇಕಾದರೆ ಕಾಗದ, ಪೆನ್ನುಗಳನ್ನು ತೆಗೆದುಕೊಳ್ಳುತ್ತೇವೆ. ಇಲ್ಲದಿದ್ದರೆ ಒಂದೊಂದು ಅಂಕೆಯಿಂದ ಗುಣಿಸಿದ ಮೊತ್ತವನ್ನೂ ನೆನಪಿಟ್ಟುಕೊಂಡು ಕೊನೆಗೆ ಕೂಡಬೇಕಾಗುತ್ತದೆ. ಇದು ಅಸಾಧ್ಯ. ಆದರೆ ಬರಹದ ಮೂಲಕ ಈ ಕೆಲಸ ಸುಲಭಸಾಧ್ಯವಾಗುತ್ತದೆ. ಬರಹವಿಲ್ಲದೇ ಇದ್ದಿದ್ದರೆ ನಮ್ಮ ಅನೇಕ ಶಾಸ್ತ್ರಗಳು, ವಿಜ್ಞಾನ, ತಾಂತ್ರಿಕ ವಿಜ್ಞಾನಗಳು ಇಷ್ಟು ಮುಂದುವರಿಯಲು ಸಾಧ್ಯವೇ ಇರುತ್ತಿರಲಿಲ್ಲ. ನದಿಯ ಮೂಲಕ ಸಾಗರವನ್ನು ಪ್ರವೇಶಿಸಲು ಸಾಧ್ಯವಾಗುವಂತೆ ಲಿಪಿಯ ಮೂಲಕ ವಾಙ್ಮಯವನ್ನು ಪ್ರವೇಶಿಸಲು ಸಾಧ್ಯ ಎಂದು ಕಾಳಿದಾಸನು ಹೇಳುತ್ತಾನೆ. ಲಿಪಿ ಜ್ಞಾನಮಂದಿರಕ್ಕೆ ಕೀಲಿಕೈ ಇದ್ದಂತೆ.

---

1 "Writing is so important in our daily life that I should be willing to say that our civilisation could exist more easily without money, metals, radios, steam engines or electricity than without writing."—GELB

2 'In the growth of the spiritual human advance, that is of civilization, the origin and the development of writing hold a place of supreme importance, second only to that of the beginnings of speech, as an essential means of communication within human society."—DIRINGER

ಲಿಪಿಯನ್ನು ಭಗವಂತನೇ ಸೃಷ್ಟಿಸಿದನೆಂಬ ನಂಬಿಕೆ ಅನೇಕ ದೇಶಗಳಲ್ಲಿ ಪ್ರಚಲಿತವಾಗಿದ್ದಿತು. ಬ್ಯಾಬಿಲೋನಿಯನ್ನರು ನಬೂ ಎಂಬ ದೇವತೆ ಲಿಪಿಯನ್ನು ಕಂಡುಹಿಡಿದನೆಂದು ನಂಬಿದ್ದರು. ಈ ದೇವತೆ ಉಳಿದ ದೇವತೆಗಳ ಲಿಪಿಕಾರ ; ಮತ್ತು ಎಲ್ಲ ಶಾಸ್ತ್ರಗಳಿಗೆ ಅಧಿದೈವ. ಈಜಿಪ್ಷಿಯನ್ನರು ಥಾತ್ ಎಂಬ ದೇವತೆ ಲಿಪಿಯ ಸೃಷ್ಟಿಕರ್ತನೆಂದೂ, ಮುಸ್ಲಿಮರು ಭಗವಂತನೇ ಲಿಪಿಯನ್ನು ಸೃಷ್ಟಿಸಿದನೆಂದೂ ನಂಬಿದ್ದರು. ಭಾರತೀಯರು ಬ್ರಹ್ಮನೇ ಲಿಪಿಯನ್ನು ಸೃಷ್ಟಿಸಿದನೆಂದು ನಂಬಿದ್ದರು. (ಬಾದಾಮಿಯಲ್ಲಿ ಇರುವ ಬ್ರಹ್ಮನ ವಿಗ್ರಹದ ಕೈಯಲ್ಲಿ ಓಲೆಗಳಿವೆ). ಜೈನ ಸಂಪ್ರದಾಯದ ಪ್ರಕಾರ ಆದಿವೃಷಭ ತೀರ್ಥಂಕರನೇ ಬ್ರಾಹ್ಮೀ ಲಿಪಿಯನ್ನು ಸೃಷ್ಟಿಸಿದವನು: ಅವನು ತನ್ನ ಮಗಳಾದ ಬ್ರಹ್ಮಿಗೆ ಬಲಗೈಯಲ್ಲಿ ಲಿಪಿಗಳನ್ನೂ, ಇನ್ನೊಬ್ಬ ಮಗಳಾದ ಸೌಂದರಿಗೆ ಎಡಗೈಯಲ್ಲಿ ಗಣಿತವನ್ನೂ ಬೋಧಿಸಿದನೆಂದು ಜೈನಗ್ರಂಥಗಳು ಹೇಳುತ್ತವೆ.

ಇದಕ್ಕೆ ಕಾರಣ ಬಹುಶಃ ಬರಹಕ್ಕೆ ಮಾಂತ್ರಿಕ ಶಕ್ತಿ ಇದೆಯೆಂಬ ನಂಬಿಕೆ. ಬರಹವು ಪವಿತ್ರವಾದುದೆಂದೂ ಅದು ಸಮಾಜದ ಪುರೋಹಿತ ವರ್ಗದವರಿಗೆ ಮಾತ್ರ ಮೀಸಲು ಎಂಬ ನಂಬಿಕೆಯೂ ಕೆಲವು ಜನಾಂಗಗಳಲ್ಲಿದೆ. ಓದು, ಬರಹಗಳನ್ನು ಕಲಿತವರು ಒಂದು ಹೊಸ ಬಾಳನ್ನು ಪ್ರವೇಶಿಸಿದಂತೆ, ಅಪೂರ್ವ ಶಕ್ತಿಗಳನ್ನು ಪಡೆದಂತೆ ಪ್ರಾಚೀನರು ನಂಬಿದ್ದರು. ಅನೇಕ ಕಾಡುಜನರು ಬರಹವನ್ನು ಕಂಡರೆ ಹೆದರುತ್ತಾರೆ. ಒಬ್ಬ ಹಿಂದುಳಿದ ಜನಾಂಗದವನು ಕಾಗದವನ್ನು ಕೊಂಡೊಯ್ಯಲು ನಿರಾಕರಿಸಿದನಂತೆ. ಕಾರಣ, ಅದು ದಾರಿಯಲ್ಲಿ ತನ್ನೊಡನೆ ಮಾತನಾಡೀತು ಎಂಬ ಭಯ. ಈಗಲೂ ಅಕ್ಷರಗಳನ್ನು ಬರೆದ ತಾಮ್ರದ ಸುರುಳಿಗಳನ್ನು ಯಂತ್ರಗಳಾಗಿ ಮಾಡಿಕೊಂಡು ಕಟ್ಟಿಕೊಳ್ಳುತ್ತಾರೆ. ಇದರಿಂದ ಅನಿಷ್ಟ ನಿವಾರಣೆಯಾಗುತ್ತದೆಯೆಂಬ ನಂಬಿಕೆಯಿದೆ. ಕ್ರಿಶ್ಚಿಯನ್ನರಿಗೆ ಕಾಯಿಲೆಯಾದರೆ ಬೈಬಲ್ಲಿನ ಹಾಳೆಗಳಿಂದ ಗಾಳಿ ಬೀಸುವುದು, ಅಥವಾ ಪ್ರಾರ್ಥನೆಯನ್ನು ಬರೆದ ಒಂದು ಹಾಳೆಯ ತುಂಡನ್ನು ನುಂಗಿಸುವುದು—ಈ ಪದ್ಧತಿಗಳಿವೆ. ಶಾಸನಗಳಿಗೆ ಮಾಂತ್ರಿಕ ಶಕ್ತಿಯಿದೆಯೆಂಬ ನಂಬಿಕೆ ಕರ್ನಾಟಕದಲ್ಲಿ ವಿಶೇಷವಾಗಿದೆ. ಅವುಗಳ ಲಿಪಿಯನ್ನು ಸಾಮಾನ್ಯ ಮನುಷ್ಯರು ಓದಲಾರರೆಂದೂ, ದೈವಕೃಪೆಗೆ ಪಾತ್ರರಾದವರ ಕೈಯಿಂದ ಮಾತ್ರ ಸಾಧ್ಯವೆಂದೂ ಹಳ್ಳಿಯವರು ಭಾವಿಸುತ್ತಾರೆ. ಓಲೆಯ ಪುಸ್ತಕಗಳನ್ನು ಓದಲು ಸಾಧ್ಯವಾಗದಿದ್ದರೂ, ಅವುಗಳು ಪವಿತ್ರವೆಂದು ಜನರು ಭಾವಿಸಿ ಪೂಜಿಸುತ್ತಾರೆ. ಹೀಗೆ ಬರಹಕ್ಕೆ ಮೊದಲಿನಿಂದಲೂ ಪೂಜ್ಯತೆಯು ಸಲ್ಲುತ್ತಾ ಬಂದಿದೆ.



# THE INTERNATIONAL PHONETIC ALPHABET.

(Revised to 1945.)

**CONSONANTS**

| | Bi-labial | Labio-dental | Dental and Alveolar | Retroflex | Palato-alveolar | Alveolo-palatal | Palatal | Velar | Uvular | Pharyngal | Glottal |
|---|---|---|---|---|---|---|---|---|---|---|---|
| *Plosive* | p b | | t d | ʈ ɖ | | | c ɟ | k g | q ɢ | | ʔ |
| *Nasal* | m | ɱ | n | ɳ | | | ɲ | ŋ | ɴ | | |
| *Lateral Fricative* | | | ɬ ɮ | | | | | | | | |
| *Lateral Non-fricative* | | | l | ɭ | | | ʎ | | | | |
| *Rolled* | | | r | | | | | | ʀ | | |
| *Flapped* | | | ɾ | ɽ | | | | | ʀ | | |
| *Fricative* | ɸ β | f v | θ ð \| s z \| ɹ | ʂ ʐ | ʃ ʒ | ɕ ʑ | ç ʝ | x ɣ | χ ʁ | ħ ʕ | h ɦ |
| *Frictionless Continuants and Semi-vowels* | w ɥ | ʋ | ɹ | | | | j (ɥ) | (w) | ʁ | | |

**VOWELS**

| | Bi-labial | Front | Central | Back |
|---|---|---|---|---|
| *Close* | y ʉ u | i y | ɨ ʉ | ɯ u |
| *Half-close* | (ø o) | e ø | ə | ɤ o |
| *Half-open* | (œ ɔ) | ɛ œ | æ ɐ | ʌ ɔ |
| *Open* | (ɒ) | | a | ɑ ɒ |

(Secondary articulations are shown by symbols in brackets.)

(ಮುಂದಿನ ಪುಟಕ್ಕೆ ಮುಂದುವರಿಸಿದೆ)

OTHER SOUNDS.—Palatalized consonants: ƫ, ȡ, etc. Velarized or pharyngalized consonants: ɫ, ᵭ, ᵴ, etc. Ejective consonants (plosives with simultaneous glottal stop): p', t', etc. Implosive voiced consonants: ɓ, ɗ, etc. ɼ fricative trill. σ, ƍ (labialized θ, ð, or s, z). ʆ, ʓ (labialized ʃ, ʒ). ʇ, ʗ, ʖ (clicks, Zulu c, q, x). ɺ (a sound between r and l). ʍ (voiceless w). ɩ, ʏ, ɷ (lowered varieties of i, y, u). ɜ (a variety of ə). ɵ (a vowel between ø and o).

Affricates are normally represented by groups of two consonants (ts, tʃ, dʒ, etc.), but, when necessary, ligatures are used (ʦ, ʧ, ʤ etc.), or the marks ⁀ or ‿ (t͡s or t͜s, etc.). ⁀ ‿ also denote synchronic articulation (m͡ŋ = simultaneous m and ŋ). c, ɟ may occasionally be used in place of tʃ, dʒ. Aspirated plosives: ph, th, etc.

LENGTH, STRESS, PITCH.—ː (full length). ˑ (half length). ˈ (stress, placed at beginning of the stressed syllable). ˌ (secondary stress). ˉ (high level pitch); ˍ (low level); ˊ (high rising); ˏ (low rising); ˋ (high falling); ˎ (low falling); ˆ (rise-fall); ˇ (fall-rise).

MODIFIERS.—˜ nasality. ˳ breath (l̥ = breathed l). ˬ voice (s̬ = z). ʻ slight aspiration following p, t, etc. ̣ specially close vowel (ẹ = a very close e). ̨ specially open vowel (ę = a rather open e). ̫ labialization (n̫ = labialized n). ̪ dental articulation (t̪ = dental t). ˙ palatalization (ż = ʒ). ˔ tongue slightly raised. ˕ tongue slightly lowered. ˒ lips more rounded. ˓ lips more spread. Central vowels ï (= ɨ), ü (= ʉ), ë (= əː), ö (= ɵ), ɛ̈, ɔ̈. ̩ (e.g. n̩) syllabic consonant. ̆ consonantal vowel. ʃˢ variety of ʃ resembling s, etc.

# VOCAL ORGANS
## (ಧ್ವನ್ಯಂಗಗಳು)




B — Back of the tongue (ಪಶ್ಚಜಿಹ್ವಾ)
BL — Blade of the tongue (ಜಿಹ್ವಾಫಲಕ)
E — Epiglottis (ಉಪಜಿಹ್ವಾ)
F — Front of the tongue (ಪೂರ್ವಜಿಹ್ವಾ)
FP — Food Passage (ಆಹಾರ ನಾಳ)
H — Hard palate (ಕಠಿನತಾಲು)
LL — Lips (ಓಷ್ಠ)
P — Pharynx (ಗಲಕುಹರ)
R — Root of the tongue (ಜಿಹ್ವಾಮೂಲ)
S — Soft palate (ಮೃದುತಾಲು)
TR — Teeth-rigde, Alveolus (ವರ್ತ್ಸ)
TT — Teeth (ದಂತ)
TIP—Tip of the tongue (ಜಿಹ್ವಾಗ್ರ)
U — Uvula (ಅಲಿಜಿಹ್ವಾ)
V — Vocal Chords (ಘೋಷತಂತು)
W — Wind pipe (ಶ್ವಾಸನಾಳ)
GLOTTIS, Space between the Vocal Chords (ಶ್ವಾಸದ್ವಾರ)
LARYNX (ಕೃಕ)
MOUTH (ಆಸ್ಯ)
NASAL CAVITY (ನಾಸಾಕುಹರ)

# ಗ್ರಂಥಸೂಚಿ


Amulyachandra Sen : *Aśoka's Edicts.*

Bahri : *Hindi Semantics.*

Bhandarkar. D. R. : *Aśoka.*

Bloch, B. & Trager, G. L. : *Outline of Linguistic Analysis.*

Bloomfield, Leonard : *Language.*

Bottiglioni : *'Linguistic Geography : Achievements. Methods and Orientations'* (*Word, X*).

Bright, William : *An Outline of Colloquial Kannada.*

Burrow, T. : *Sanskrit Language.*

Burrow, T. & Emeneau, M. B. : *'A Dravidian Etymological Dictionary.*

Buhler : *Indian Palaeography.*

Caldwell : *A Comparative Grammar of the Dravidian or South Indian Family of Languages.*

Carroll, J. B. : *The Study of Language.*

Charlton Laird : *The Miracle of Language.*

Chatterji, S. K. : *Indo-Aryan and Hindi.*

Diringer, David. : *The Alphabet.*

Gai, G. S. : *Historical Grammar of Old Kannada.*

Gelb. : *A Study of Writing.*

Gleason, H. A. : *An Introduction to Descriptive Linguistics.*

Gray, L. H. : *Foundations of Language.*

Gune. : *An Introduction to Comparative Philology.*

Hiremath, R. C. : *Structure of Kannada.*

Hockett, C. F. : *A Course in Modern Linguistics.*

Hudson. : *A Short Introduction to the Study of Comparative Grammar.*

Iordan, Iorgu and John, Orr. : *An Introduction to Romance Linguistics.*

Jespersen, Otto. : *Language, Its Nature, Development and Origin.*

Jespersen, Otto. : *Mankind, Nation and Individual.*

Joos, Martin. (Ed). : *Readings in Linguistics.*

Kurath, Hans. : *Handbook of the Linguistic Geography of New England.*

Madhava Krishna Sarma. : *'Vāk Before Bhartṛhari'* (*Poona Orientalist, VIII*).
Nanjundaiah, H. V. & Anantha Krishna Iyer. : *The Mysore Tribes and Castes, II.*
Narasimhachar, R. : *History of Kannada Language.*
Narasimhaiah, A. N. : *A Grammar of the Oldest Kanarese Inscriptions.*
Paderson. *Linguistic Science in the Nineteenth Century.*
Palmer. : *An Introduction to Modern Linguistics.*
Pandey, R. B. : *Indian Palaeography.*
Pike, K. L. : *Phonemics.*
Potter. : *Modern Linguistics.*
Ramayya Pantulu. : *A Defence of Literary Telugu.*
Revesz. : *The Origin and Prehistory of Language.*
Sapir, Edward : *Language.*
Sapir, Edward : *Selected Essays (Ed. Maudelbaum).*
Saussure, F. D. : *Course in General Linguistics.*
Scott. Carr & Wilkinson : *Languuge aud Its Growth.*
Sreekantaiya, T. N. : *'The Mutation of I, U, E, and O in Kannada'* (*Proceedings, 8th Oriental Conference, Mysore, 1935*).
Sturtevant, E. H. : *An Introduction to Linguistic Science.*
Taraporewala, I. J. S. : *Elements of the Science of Language.*
Tucker. : *Introduction to the Natural History of Language.*
Ullmann. : *The Principles of Semantics.*
Whitney, W. H. : *Language and the Study of Language.*
*Language*, XV. (ಸಮೀರನನ್ನು ಕುರಿತು Morris Swadesh ಅವರ ಲೇಖನ)
,, XXV. (ಬ್ಲೂಮ್‌ಫೀಲ್ಡನನ್ನು ಕುರಿತು Bernard Bloch ಅವರ ಲೇಖನ)
ಜಾಗೀರದಾರ, ಆರ್. ವಿ. : ಶಾರದೆಯ ಸಂಸಾರ ಅಥವಾ ಭಾಷಾಶಾಸ್ತ್ರ.
ಧಾರವಾಡಕರ್, ಆರ್. ವೈ. : ಕನ್ನಡ ಭಾಷಾಶಾಸ್ತ್ರ.
ಬಾಲಸುಬ್ರಹ್ಮಣ್ಯ, ಎನ್. : 'ಭಾಷೆಯ ಹುಟ್ಟು' (ಪ್ರಬುದ್ಧ ಕರ್ಣಾಟಕ, 38. 2).
ವೀರಭದ್ರಪ್ಪ, ಬಿ. ವಿ. : 'ಧ್ವನಿಶಾಸ್ತ್ರದ ಸ್ವರೂಪ' (ಪ್ರಬುದ್ಧ ಕರ್ಣಾಟಕ, 44.3).
ಬ್ರೈಟ್, ವಿಲಿಯಂ : 'ಮೈಸೂರು ಕನ್ನಡದ ಸಾಮಾಜಿಕ ಭಾಷಾ ಪ್ರಭೇದಗಳು' (ಅನು. ಬಿ. ವಿ. ವೀರಭದ್ರಪ್ಪ, ಪ್ರಬುದ್ಧ ಕರ್ಣಾಟಕ, 1963)
ಶಂಕರಭಟ್ಟ, ಡಿ. ಎನ್. : 'ಧ್ವನಿಪರಿವರ್ತನೆ ಮತ್ತು ವರ್ಣಪರಿವರ್ತನೆ' (ಪ್ರಬುದ್ಧ ಕರ್ಣಾಟಕ, 43.4)

# ಪಾರಿಭಾಷಿಕ ಪದಸೂಚಿ

Affixation—ಪ್ರತ್ಯಯೀಕರಣ
Agglutinating Languages—ಅಂಟುಭಾಷೆಗಳು
Alphabet—ವರ್ಣಮಾಲೆ
Alphabetic writing—ವರ್ಣಮಾಲಾತ್ಮಕ ಲೇಖನ
Alveolar—ವರ್ತ್ಸ್ಯ
Analogic change—ಸಾದೃಶ್ಯ ಮೂಲ ವ್ಯತ್ಯಾಸ
Analogic creation—ಸಾದೃಶ್ಯಸೃಷ್ಟಿ
Analogy—ಸಾದೃಶ್ಯ, ಸಾಮ್ಯ
Anaptyxis—ಸ್ವರಭಕ್ತಿ
Arbitrary—ಯಾದೃಚ್ಛಿಕ
Articulator—ಉಚ್ಚಾರಣಾಕರಣ
Aspirate—ಮಹಾಪ್ರಾಣ
Assimilation—ಸಮರೂಪಧಾರಣೆ
Back—ಪಶ್ಚ
Back of the tongue—ಪಶ್ಚ ಜಿಹ್ವೆ
Base—ಪ್ರಕೃತಿ
Bilabial—ಓಷ್ಠ್ಯ
Bilingual area—ದ್ವಿಭಾಷಾಪ್ರದೇಶ
Blade of the tongue—ಜಿಹ್ವಾಫಲಕ
Borrowing—ಸ್ವೀಕರಣ
Borrowing language—ಸ್ವೀಕರಿಸುವ ಭಾಷೆ
Bound form—ಬದ್ಧರೂಪ
Cardinal vowels—ಮಾನಸ್ವರಗಳು
Classification of Languages—ಭಾಷಾವರ್ಗೀಕರಣ
Close—ಸಂವೃತ
Comparative Linguistics-ತೌಲನಿಕ ಭಾಷಾವಿಜ್ಞಾನ
Compensatory lengthening—ಪರಿಹಾರ ದೀರ್ಘೀಕರಣ
Complementary distribution-ಪೂರಕ ಪ್ರಸಾರ
Complex word—ಸಂಕೀರ್ಣಪದ
Compound word—ಸಮಾಸಪದ
Consonant—ವ್ಯಂಜನ
Contrast—ವೈದೃಶ್ಯ
Cultivated languages—ಸುಸಂಸ್ಕೃತ ಭಾಷೆಗಳು ; ಗ್ರಾಂಥಿಕ ಭಾಷೆಗಳು
Cultural borrowing—ಸಾಂಸ್ಕೃತಿಕ ಸ್ವೀಕರಣ
Cultural words—ಸಾಂಸ್ಕೃತಿಕ ಪದಗಳು
Dead language—ಮೃತಭಾಷೆ
Degeneration of meaning—ಹೀನಾರ್ಥ ಪ್ರಾಪ್ತಿ
Dental—ದಂತ್ಯ
Dental nasal—ದಂತ್ಯ-ಅನುನಾಸಿಕ ಧ್ವನಿ
Descriptive Linguistics—ವಿವರಣಾತ್ಮಕ ಭಾಷಾವಿಜ್ಞಾನ
Dialect—ಉಪಭಾಷೆ
Dialect borrowing—ಉಪಭಾಷಾ ಸ್ವೀಕರಣ
Dialect Survey—ಉಪಭಾಷಾ ಪರಿವೀಕ್ಷಣೆ
Distinctive difference-ಉಪಯುಕ್ತ ವ್ಯತ್ಯಾಸ
Elevation of meaning—ಉತ್ತಮಾರ್ಥ ಪ್ರಾಪ್ತಿ
Environment—ಪರಿಸರ
Epiglottis—ಉಪಜಿಹ್ವೆ
Epigraphy—ಶಾಸನಶಾಸ್ತ್ರ
Euphemism—ಸೌಮ್ಯೋಕ್ತಿ
Field worker—ಪೃಚ್ಛಕ

Flapped—ತಾಡಿತ
Food pipe—ಅನ್ನನಾಳ
Fossil—ಪಳೆಯುಳಿಕೆ
Free-form—ಮುಕ್ತರೂಪ
Free-variation–ಸ್ವಚ್ಛಂದ ಪರಿವರ್ತನ
Fricative—ಘರ್ಷಧ್ವನಿ
Front—ಪೂರ್ವ
Front of the tongue—ಪೂರ್ವಜಿಹ್ವೆ
Genealogical classification—ವಾಂಶಿಕ ವರ್ಗೀಕರಣ
Gesture—ಆಂಗಿಕ ಸಂಜ್ಞೆ ; ಸಂಜ್ಞೆ
Gesture language—ಸಂಜ್ಞಾಭಾಷೆ
Glide—ಧ್ವನಿಜಾರು
Half-close—ಅರ್ಧಸಂವೃತ
Half-open—ಅರ್ಧವಿವೃತ
Haplology—ಸದೃಶಾಕ್ಷರಲೋಪ
Hard palate—ಕಠಿನತಾಲು
Historical Linguistics—ಐತಿಹಾಸಿಕ ಭಾಷಾವಿಜ್ಞಾನ
Ideographic writing—ಭಾವಲೇಖನ
Idiolect—ವ್ಯಕ್ತಿಭಾಷೆ
Incorporating—ಅಂತರ್ಗಮಕ
Infix—ಮಧ್ಯ ಪ್ರತ್ಯಯ
Inflectional—ಪ್ರಾತ್ಯಯಿಕ
Informant—ಪ್ರತಿವಕ್ತ
Internal change—ಆಂತರಿಕ ವ್ಯತ್ಯಾಸ
International Phonetic Alphabet—ಅಂತರರಾಷ್ಟ್ರೀಯ ಧ್ವನಿಲಿಪಿ
Intimate borrowing—ಏಕಪಕ್ಷೀಯ ಸ್ವೀಕರಣ
Intimate words—ನಿತ್ಯೋಪಯೋಗಿ ಪದಗಳು
Irregular form—ಕ್ರಮಬದ್ಧವಲ್ಲದ ರೂಪ
Isogloss—ಸೀಮಾರೇಖೆ
Isolating languages—ವಿವಿಕ್ತ ಭಾಷೆಗಳು
Labio-dental—ದಂತೋಷ್ಠ್ಯ
Language—ಭಾಷೆ
Larynx—ಕೃಕ
Lateral—ಪಾರ್ಶ್ವಿಕ
Lending language—ಕೊಡುವ ಭಾ
Lexical change—ಪದಕೋಶ ವ್ಯತ್ಯಾ
Linguist—ಭಾಷಾವಿಜ್ಞಾನಿ
Linguistic atlas—ಭಾಷಾಭೂಪಟ
Linguistic borrowing—ಭಾಷಾ ಸ್ವೀಕರಣ
Linguistic change—ಭಾಷಾ ವ್ಯತ್ಯಾ
Linguistic family—ಭಾಷಾವಂಶ
Linguistics—ಭಾಷಾವಿಜ್ಞಾನ
Living languages—ಜೀವಂತ ಭಾಷೆಗಳು
Lips—ಓಷ್ಠಗಳು ; ತುಟಿಗಳು
Logography—ಪದಲೇಖನ
Lower language—ಕೆಳಭಾಷೆ
Manner of articulation—ಉಚ್ಚಾರಣಾ ವಿಧಾನ
Metathesis—ಅಕ್ಷರಪಲ್ಲಟ ; ವರ್ಣ ವ್ಯತ್ಯಯ
Morphology—ಆಕೃತಿಮ ವಿಜ್ಞಾನ
Morpheme—ಆಕೃತಿಮ
Mouth—ಆಸ್ಯ
Mutual intelligibility—ಪರಸ್ಪರ ಅರಿವು
Narrowing of meaning—ಅರ್ಥ ಸಂಕೋಚ
Nasal—ಅನುನಾಸಿಕ
Nasal cavity—ನಾಸಾಕುಹರ
Nasalisation—ಅನುನಾಸಿಕೀಕರಣ
Neutral vowel—ತಟಸ್ಥ ಸ್ವರ
Non-functional difference—ನಿರುಪಯುಕ್ತ ವ್ಯತ್ಯಾಸ
Open—ವಿವೃತ
Palaeography—ಲೇಖನಶಾಸ್ತ್ರ
Palatal—ತಾಲವ್ಯ
Palatalization—ತಾಲವ್ಯೀಕರಣ

Palate—ತಾಲು
Parent language—ಪಿತೃಭಾಷೆ
Pedigree Theory—ವೃಕ್ಷವಾದ
Phone—ಧ್ವನಿ
Phoneme—ಧ್ವನಿಮಾ
Phonemic analysis—ಧ್ವನಿಮಾ ವಿಶ್ಲೇಷಣೆ
Phonemics—ಧ್ವನಿಮಾ ವಿಜ್ಞಾನ
Phonetic change—ಧ್ವನಿವ್ಯತ್ಯಾಸ
Phonetic correspondence—ಧ್ವನ್ಯನುರೂಪತೆ ; ಧ್ವನಿಸಂವಾದ
Phonetic law—ಧ್ವನಿನಿಯಮ
Phonetics—ಧ್ವನಿವಿಜ್ಞಾನ
Phonetic script—ಧ್ವನಿಲಿಪಿ
Phonetic substitution—ಧ್ವನ್ಯಾದೇಶ
Phrase—ಪದಪುಂಜ
Pictography—ಚಿತ್ರಲೇಖನ
Plosive—ಸ್ಫೋಟ
Point of articulation—ಉಚ್ಚಾರಣಾ ಸ್ಥಾನ
Polysynthetic—ಬಹುಪದಯುಕ್ತ
Prefix—ಆದಿಪ್ರತ್ಯಯ
Principle of Economy—ಮಿತವ್ಯಯಾಸಕ್ತಿ
Prosthesis—ಆದಿಸ್ವರಾಗಮ
Proto-Language—ಮೂಲಭಾಷೆ
Questionnaire—ಪ್ರಶ್ನಾವಳಿ
Reconstruction—ಪುನಾರಚನೆ
Reduplication—ಅಭ್ಯಾಸ
Regional variation—ಪ್ರಾದೇಶಿಕ ವ್ಯತ್ಯಾಸ
Regular form—ಕ್ರಮಬದ್ಧ ರೂಪ
Retroflex—ಮೂರ್ಧನ್ಯ ; ಪ್ರತಿವೇಷ್ಟಿತ
Rolled—ಲೋಡಿತ
Root of the tongue—ಜಿಹ್ವಾಮೂಲ
Semantic change—ಅರ್ಥವ್ಯತ್ಯಾಸ
Sign—ಚಿಹ್ನೆ
Social dialects—ಸಾಮಾಜಿಕ ಉಪಭಾಷೆಗಳು
Soft palate—ಮೃದು ತಾಲು
Speech community—ಭಾಷಾಸಮಾಜ
Speech island—ಭಾಷಾದ್ವೀಪ
Speech organs—ಧ್ವನ್ಯಂಗಗಳು
Standard language—ಪ್ರಮಾಣ ಭಾಷೆ, ಶಿಷ್ಟಭಾಷೆ
Suffix—ಅಂತ್ಯಪ್ರತ್ಯಯ
Suppletion—ಭಿನ್ನಪದಾಗಮ
Syllabic writing—ಅಕ್ಷರಲೇಖನ
Symbol—ಸಂಕೇತ
Syntax—ವಾಕ್ಯವಿಜ್ಞಾನ
Teeth—ದಂತಗಳು, ಹಲ್ಲುಗಳು
Teeth-ridge or Alveolus—ವರ್ತ್ಸ
Tip of the tongue—ಜಿಹ್ವಾಗ್ರ
Tongue—ಜಿಹ್ವಾ
Transference of meaning—ಅರ್ಥಾಂತರ
Translation-loan—ಭಾಷಾಂತರ ಸ್ವೀಕರಣ
Typical classification—ರಾಚನಿಕ ವರ್ಗೀಕರಣ
Unaspirate—ಅಲ್ಪಪ್ರಾಣ
Uncultivated languages—ಕ್ಷುಲ್ಲಕ ಭಾಷೆಗಳು, ನಿರ್ಗ್ರಂಥಿಕ ಭಾಷೆಗಳು
Upper language—ಮೇಲು ಭಾಷೆ
Uvula—ಅಲಿಜಿಹ್ವಾ
Velar—ಕಂಠ್ಯ
Vocabulary—ಪದಕೋಶ
Vocal chords—ಘೋಷತಂತುಗಳು
Voiced bilabial plosive—ಘೋಷ-ಓಷ್ಠ್ಯ-ಸ್ಪರ್ಶಧ್ವನಿ
Voiced dental fricative—ಘೋಷ-ದಂತ್ಯ-ಘರ್ಷ ಧ್ವನಿ
Voiced sound—ಘೋಷಧ್ವನಿ
Voiced velar plosive—ಘೋಷ-ಕಂಠ್ಯ-ಸ್ಪರ್ಶಧ್ವನಿ

Voiceless bilabial plosive—
ಅಘೋಷ-ಓಷ್ಠ್ಯ-ಸ್ಪರ್ಶಧ್ವನಿ
Voiceless dental fricative—
ಅಘೋಷ-ದಂತ್ಯ-ಘರ್ಷಧ್ವನಿ
Voiceless sound—ಅಘೋಷ ಧ್ವನಿ
Voiceless velar plosive—
ಅಘೋಷ-ಕಂಠ್ಯ-ಸ್ಪರ್ಶಧ್ವನಿ
Vowel—ಸ್ವರ
Wave theory—ತರಂಗವಾದ
Widening of meaning—
ಅರ್ಥವಿಕಾಸ
Wind-pipe—ಶ್ವಾಸನಾಳ
Word-order—ಪದಾನುಕ್ರಮಣಿಕೆ
Writing—ಬರಹ, ಲೇಖನ
Young Grammarians—ಯುವ
ವೈಯಾಕರಣಗಳು
Zero-suffix—ಶೂನ್ಯಪ್ರತ್ಯಯ

# ಶಬ್ದಸೂಚಿ

# ಕೆಲವು ಅಭಿಪ್ರಾಯಗಳು

This Kannada book is a pretty good introduction to some of the general aspects of linguistics. Written in an easy and flowing style, it shows the enthusiasm of the author throughout, and can surely attract at least some converts to the subject of linguistics.

Dr. D. N. SHANKARA BHAT
*Bulletin of the Deccan College Research Institute* 1968

It is a good introduction to the Historical and Comparative Linguistics.

Dr. H. M. NAYAK
*Kannada Literature—A Decade*

Chidananda Murti's *Bhasha Vijnanada Mula Tatvagalu* [Fundamentals of Linguistics] is eminently readable. The author has modest aims and carries them out successfully. The book is for the most part historically oriented, the descriptive approach treated all too briefly.

Dr. H. S. BILIGIRI
*Current Trends in Linguistics-5*, Ed. Thomas A Sebeok

---

ಡಿ. ವಿ. ಕೆ. ಮೂರ್ತಿ : : ಪ್ರಕಾಶಕರು : : ಮೈಸೂರು ೪
ಬೆಲೆ : ರೂ. 25